# ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟು
# ಒಂದು ಸಾಂಸ್ಕೃತಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪಿಎಚ್. ಡಿ. ಮಹಾಪ್ರಬಂಧ.


ಸಂಶೋಧಕಿ

ಶ್ರೀಮತಿ ಹೇಮಲತಾ ಗಣಪತರಾವ ವಡ್ಡೆ

ಮಾರ್ಗದರ್ಶಕರು

ಡಾ|| ಕೆ. ಎಂ. ಮೈತ್ರಿ

ಪ್ರವಾಚಕರು

ಬುಡಕಟ್ಟು ಅಧ್ಯಯನ ವಿಭಾಗ







ಬುಡಕಟ್ಟು ಅಧ್ಯಯನ ವಿಭಾಗ,
ಸಮಾಜ ವಿಜ್ಞಾನ ನಿಕಾಯ,
ಕನ್ನಡ ವಿಶ್ವವಿದ್ಯಾಲಯ ಹಂಪಿ,
ವಿದ್ಯಾರಣ್ಯ - ೫೮೩ ೨೭೬.

೨೦೦೨

# ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟು
# ಒಂದು ಸಾಂಸ್ಕೃತಿಕ ಅಧ್ಯಯನ

*ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪಿಎಚ್.ಡಿ. ಮಹಾಪ್ರಬಂಧ*

ಸಂಶೋಧಕಿ

ಶ್ರೀಮತಿ ಹೇಮಲತಾ ಗಣಪತರಾವ ವಡ್ಡೆ

ಮಾರ್ಗದರ್ಶಕರು

ಡಾ.ಕೆ.ಎಂ.ಮೈತ್ರಿ

ಪ್ರವಾಚಕರು

ಬುಡಕಟ್ಟು ಅಧ್ಯಯನ ವಿಭಾಗ



ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೨

# ದೃಢೀಕರಣ ಪತ್ರ

ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟು : ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ಶ್ರೀಮತಿ ಹೇಮಲತಾ ಗಣಪತರಾವ ವಡ್ಡೆ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಈ ಮಹಾಪ್ರಬಂಧವನ್ನು ಅಥವಾ ಇದರ ಇತರೆ ಭಾಗಗಳನ್ನು ಯಾವುದೇ ಪದವಿಗೆ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೮. ೨. ೨೦೦೨

ಸ್ಥಳ : ವಿದ್ಯಾರಣ್ಯ

ಡಾ.ಕೆ.ಎಂ.ಮೈತ್ರಿ
ಮಾರ್ಗದರ್ಶಕರು ಮತ್ತು ಪ್ರವಾಚಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

**ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟು : ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ.ಕೆ.ಎಂ.ಮೈತ್ರಿ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಲಾಗಿದೆ. ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೮.೭.೨೦೦೨
ಸ್ಥಳ : ವಿದ್ಯಾರಣ್ಯ

Hvadde

**ಶ್ರೀಮತಿ ಹೇಮಲತಾ ಗಣಪತರಾವ ವಡ್ಡೆ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಅರಿಕೆ

ಕರ್ನಾಟಕದ ಪರಿಶಿಷ್ಟ ಪಂಗಡದ ೪೯ ಬುಡಕಟ್ಟುಗಳಲ್ಲಿ ಟೋಕ್ರಿಕೋಳಿ ಬುಡಕಟ್ಟು ಒಂದು. ಇವರು ಬೀದರ ಜಿಲ್ಲೆಯಲ್ಲಿ ಗಣನೀಯ ಪ್ರಮಾಣದಲ್ಲಿದ್ದು ವಿಭಿನ್ನ ಹೆಸರುಗಳಿಂದ ಗುರುತಿಸಿಕೊಳ್ಳುತ್ತಾರೆ. ಇವರು ತಮ್ಮದೆಯಾದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದ್ದು, ಮೂಲ ಸಂಸ್ಕೃತಿಯನ್ನು ಮರೆಯುತ್ತಿದ್ದಾರೆ. ಇಂಥಹ ಸಂಸ್ಕೃತಿ ಮರೆಯಾಗುವುದಕ್ಕಿಂತ ಮೊದಲು ದಾಖಲಿಸಬೇಕೆಂಬ ಉದ್ದೇಶವಿಟ್ಟುಕೊಂಡು ಈ ವಿಷಯವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲು ಪ್ರಯತ್ನಿಸಿದೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗವು 'ಬೀದರ ಜಿಲ್ಲೆಯ ಟೋಕ್ರಿಕೋಳಿ ಬುಡಕಟ್ಟು: ಒಂದು ಸಾಂಸ್ಕೃತಿಕ ಅಧ್ಯಯನ' ಎಂಬೀ ವಿಷಯದಲ್ಲಿ ಪಿಎಚ್.ಡಿ. ಅಧ್ಯಯನ ಕೈಗೊಳ್ಳಲು ಅನುವು ಮಾಡಿಕೊಟ್ಟಿತ್ತು. ಅದಕ್ಕಾಗಿ ಈ ವಿಶ್ವವಿದ್ಯಾಲಯದ ಹಿಂದಿನ ಕುಲಪತಿಗಳಾಗಿದ್ದ ಡಾ.ಎಂ.ಎಂ.ಕಲಬುರ್ಗಿ ಅವರಿಗೆ, ವಿಭಾಗದ ಮುಖ್ಯಸ್ಥರಾದ ಡಾ.ಹಿ.ಚಿ.ಬೋರಲಿಂಗಯ್ಯ ಅವರಿಗೆ, ಮಾರ್ಗದರ್ಶಕರಾದ ಡಾ.ಕೆ.ಎಂ.ಮೈತ್ರಿಯವರಿಗೆ ಋಣಿಯಾಗಿರುವೆ. ಪಿಎಚ್.ಡಿ. ಅಧ್ಯಯನದ ಅವಧಿ ವಿಸ್ತರಣೆಗೆ ಅವಕಾಶ ಕಲ್ಪಿಸಿದ ಇಂದಿನ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡ ಅವರನ್ನು, ಕುಲಸಚಿವರಾದ ಡಾ.ಕೆ.ವಿ.ನಾರಾಯಣ ಅವರನ್ನು ಮತ್ತು ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಳ್ಳಿ ಅವರನ್ನು ಕೃತಜ್ಞತೆಯಿಂದ ಸ್ಮರಿಸುವೆ. ಬುಡಕಟ್ಟು ಅಧ್ಯಯನ ವಿಭಾಗದ ಪ್ರವಾಚಕರಾದ ಡಾ.ಕೆ.ಕೇಶವನ್ ಪ್ರಸಾದ್, ಅಧ್ಯಾಪಕರಾದ ಚೆಲುವರಾಜು, ಗಂಗಾಧರ ದೈವಜ್ಞ, ಎ.ಎಸ್.ಪ್ರಭಾಕರ್ ಅವರುಗಳ ಸಹಕಾರಕ್ಕೆ ಆದರಪೂರ್ವಕವಾಗಿ ನೆನೆಯುವೆ.

ಪಿಹೆಚ್.ಡಿ. ಅಧ್ಯಯನಕ್ಕೆ ಅನುಮತಿ ನೀಡಿ ನನ್ನನ್ನು ಪ್ರೋತ್ಸಾಹಿಸಿದ ಮಹಾತ್ಮ ಬೋಮಗೊಂಡೇಶ್ವರ ಶಿಕ್ಷಣ ಸಂಸ್ಥೆಯವರಿಗೂ, ಕವಿರತ್ನ ಕಾಳಿದಾಸ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯದ ಪ್ರಾಂಶುಪಾಲರಾದ ಪ್ರಭುಗೌಡ ಸಿದ್ಧಾರೆಡ್ಡಿಯವರಿಗೂ ಹಾಗೂ ನನ್ನ ಸಹೋದ್ಯೋಗಿ ಮಿತ್ರರೆಲ್ಲರಿಗೂ ಕೃತಜ್ಞತೆಗಳು. ಕೆ.ಆರ್.ಇ. ಸಂಸ್ಥೆಯ ಕರ್ನಾಟಕ ಕಾಲೇಜಿನ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನ ವಿಭಾಗದ ಮುಖ್ಯಸ್ಥರಾದ ಹಾಗೂ ಗುರುಗಳಾದ ಡಾ.ಜಗನ್ನಾಥ ಹೆಬ್ಬಾಳೆ ಅವರಿಗೂ ಇನ್ನಿತರ ಗುರುಗಳಿಗೂ ಕೃತಜ್ಞತೆಯಿಂದ ಸ್ಮರಿಸುವೆ.

ಕನ್ನಡ ವಿಶ್ವವಿದ್ಯಾಲಯ, ಗುಲಬರ್ಗಾ ವಿಶ್ವವಿದ್ಯಾಲಯ, ಕರ್ನಾಟಕ ವಾಣಿಜ್ಯ ಮಹಾವಿದ್ಯಾಲಯ, ಕವಿರತ್ನ ಕಾಳಿದಾಸ ಮಹಾವಿದ್ಯಾಲಯ, ಬೀದರ್ ಜಿಲ್ಲಾ ಕೇಂದ್ರ ಗ್ರಂಥಾಲಯ ಇತ್ಯಾದಿ ಗ್ರಂಥಾಲಯಗಳ ಗ್ರಂಥಪಾಲಕರಿಗೂ, ಸಿಬ್ಬಂದಿಯವರಿಗೂ ಹಾಗೂ ಆಡಳಿತ ಮಂಡಳಿಯವರಿಗೂ ನನ್ನ ಕೃತಜ್ಞತೆಗಳು. ಇಂಗ್ಲೀಷ್‌ನ ಕೆಲವು ವಿಷಯಗಳನ್ನು ಕನ್ನಡಕ್ಕೆ ಅನುವಾದ ಮಾಡಿಕೊಟ್ಟು ಸಹಕರಿಸಿದ ಶೀಲಾ ಬೀರಾದಾರ್ ಹಾಗೂ ಅಧ್ಯಯನದಲ್ಲಿಯ ಕೆಲವು ಪಾಠಗಳಲ್ಲಿನ ತಪ್ಪು ಒಪ್ಪುಗಳನ್ನು ತಿಳಿಸಿದ ಬಸವರಾಜ ಬಲ್ಲೂರ ಇವರಿಗೂ ಕೃತಜ್ಞತೆಯಿಂದ ಸ್ಮರಿಸುವೆ.

ಬೀದರ ಜಿಲ್ಲೆಯ ಟೋಕ್ರಿ ಕೋಳಿ ಬುಡಕಟ್ಟಿನ ಕ್ಷೇತ್ರಕಾರ್ಯ ಕೈಗೊಳ್ಳುವಲ್ಲಿ ಸಹಾಯಕರಾದಂತಹ ಹಣಮಂತ ಸಿದ್ದೇಶ್ವರೆ, ಶಶಿರಾವ್ ಮೈತ್ರಿ, ದೇವಿದಾಸ ಬೀರಾದಾರ, ಚಿಮ್ಮನಾಯಕ, ಆನಂದಕುಮಾರ

ಉದಗೀರೆ, ಜಯಾ ಯದಲಾಪುರೆ, ನಾಗಣ್ಣಾ ಪಲ್ಲೇರಿ, ತುಡುಮೆ ಧನರಾಜು, ವೆಂಕಟ ಭಾಗ್ಯನಗರ, ಸಂಜೀವಕುಮಾರ ಜುಮ್ಮಾ, ಶಂಕರ ಕೊಳಾರ, ಬಂಡಯ್ಯ ಸ್ವಾಮಿ, ಚಂದ್ರಕಾಂತ ನಿರ್ಣಾ, ಜಗನ್ನಾಥ ಕಮಲಾಪುರೆ, ಶ್ರೀಕಾಂತ ನೌಬಾದೆ, ಸುಚಿತಾನಂದ ಮಲ್ಕಾಪುರೆ, ವೈಜಿನಾಥ ಪಾಟೀಲ, ಶಿವರಾಜ ವಡಗಾಂವ, ನಾರಾಯಣ ಭಂಗಿ, ಪಾಂಡುರಂಗ ದಂಡೆ ಮೊದಲಾದವರು ಕೊಟ್ಟ ಸಹಕಾರಕ್ಕೆ ನನ್ನ ಕೃತಜ್ಞತೆಗಳು.

ಬೀದರ ಜಿಲ್ಲೆಯ ಪ್ರತಿಯೊಂದು ತಾಲೂಕಿನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನನ್ನ ಬಂಧುಬಾಂಧವರು ಹಾಗೂ ಟೋಕ್ರೆಕೋಳಿಯವರು ನೀಡಿದ ಸಹಕಾರಕ್ಕೆ ಋಣಿಯಾಗಿದ್ದೇನೆ. ಹುಟ್ಟೂರಾದ ಕರಡ್ಯಾಳದಲ್ಲಿ ಮಾಧ್ಯಮಿಕ ಶಾಲೆ ಮಾತ್ರ ಇದುದ್ದರಿಂದ ಪ್ರೌಢಶಾಲೆಯನ್ನು ಬೀದರನಲ್ಲಿ ಓದಲು ತಂದೆ ಗಣಪತರಾವ ವಡ್ಡೆಯವರು ಅವಕಾಶ ಕಲ್ಪಿಸಿದರು. ಇಂದು ಅವರು ಬದುಕುಳಿದಿಲ್ಲ. ಆದರೂ ಅವರ ಚೈತನ್ಯ ಯಾವತ್ತೂ ಸ್ಫೂರ್ತಿ ನೀಡಿದೆ. ಅವರನ್ನು ಮತ್ತು ಮಾವನವರನ್ನು ಅಂತಃಕರಣ ಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇನೆ. ತಂದೆ ಇಲ್ಲದಿದ್ದರೂ ನನ್ನ ಅಭ್ಯಾಸಕ್ಕೆ ಕಡಿವಾಣ ಹಾಕದೆ ಉನ್ನತ ವ್ಯಾಸಂಗಕ್ಕೆ ಪ್ರೋತ್ಸಾಹ ನೀಡಿದಂತಹ ಅಣ್ಣ ತಮ್ಮರಾದ ಬಾಬುರಾವ್ ಮತ್ತು ರಾಜಕುಮಾರ ವಡ್ಡೆಯವರಿಗೂ, ಸಂಶೋಧನೆಗೆ ಪ್ರೋತ್ಸಾಹ ನೀಡಿದಂಥಹ ಪತಿ ಧೂಳಪ್ಪ ಮಾಧಗೊಂಡ ಅವರಿಗೂ, ಕ್ಷೇತ್ರಕಾರ್ಯಕ್ಕೆ ಹೋದಾಗ ಸಂಶೋಧನಾ ಅಧ್ಯಯನ ಕೈಗೊಂಡಾಗ ಮಕ್ಕಳ ಲಾಲನೆ ಪಾಲನೆ ಮಾಡಿದಂಥಹ ಅತ್ತೆ, ತಾಯಿ ಮತ್ತು ಅತ್ತಿಗೆಯವರಿಗೂ, ಅಕ್ಕ ತಂಗಿಯವರಿಗೂ ಮತ್ತು ಭಾವಂದರಿಗೆ ನನ್ನ ಕೃತಜ್ಞತೆಗಳು. ಮುದ್ದು ಮಕ್ಕಳಾದ ಮಂಜುನಾಥ, ಶ್ರೀನಾಥ ಹಾಗೇ ನನ್ನ ಮಕ್ಕಳ ನೆನಪನ್ನು ಮರೆಸಿದ ಸಹನಾಳಿಗೆ ನನ್ನ ಪ್ರೀತಿಯ ನೆನಿಕೆ. ಅಧ್ಯಯನದ ಕೊನೆಯ ಹಂತದಲ್ಲಿ ಅರಾಮವಿಲ್ಲದಾಗ ಅಸ್ಪತ್ರೆಗೆ ತೋರಿಸಿ ಮಾತ್ರೆಗಳನ್ನು ನೀಡಿ ಉಪಚರಿಸಿದಂತಹ ಶ್ರೀಮತಿ ದ್ರಾಕ್ಷಾಯಣಿಯವರಿಗೆ ಚಿರಋಣಿ.

ಸಂದರ್ಶನ ಮಾಡಲು ಸಹಕರಿಸಿ ವಿವರವಾದ ವಿಷಯಗಳನ್ನು ನೀಡಿದಂತಹ ಸರಸ್ವತಿ ಮತ್ತು ಬಸಮ್ಮ ಬಸಂತಪೂರ, ಪಾರಮ್ಮ, ಚಂದ್ರಭಾಗಾ ಬುಧೇರಾ, ಸರಸ್ವತಿ, ಶಿವಮ್ಮ ಹಲಸಿ, ಬಿ.ನಾರಾಯಣರಾವ್, ನಾಗಣ್ಣಾ ಪಲ್ಲೇರಿ, ಶೋಭಾ, ಶಂಕರ ಬಾಣಿ, ಯಮುನಪ್ಪ ಮಾಸ್ಕರ್ ಮೊದಲಾದ ವ್ಯಕ್ತಿಗಳಿಗೆಲ್ಲಾ ನನ್ನ ಕೃತಜ್ಞತೆಗಳು.

ಗುಲಬರ್ಗಾ ವಿಶ್ವವಿದ್ಯಾಲಯದ ನನ್ನ ಗುರುಗಳಾದ ಡಾ.ಚೆನ್ನಣ್ಣ ವಾಲೀಕಾರ, ಡಾ.ನಾಗಾಬಾಯಿ ಬುಳ್ಳಾ, ಡಾ.ಮಲ್ಲಿಕಾ ಘಂಟಿ, ಡಾ.ಪಿ.ಕೆ.ಖಂಡೋಬ, ಡಾ.ಡಿ.ಬಿ.ನಾಯಕ, ಡಾ.ವೀರಣ್ಣ ದಂಡೆ, ಡಾ.ಸಂಗಮೇಶ ಸವದತ್ತಿ ಮಠ ಅವರುಗಳು ನನ್ನನ್ನು ಸಂಶೋಧನೆಗೆ ವಿಶೇಷವಾಗಿ ಪ್ರೇರೆಪಿಸಿದವರು ಅವರಿಗೆ ನಾನು ಋಣಯಾಗಿರುವೆ.

ಪ್ರಬಂಧದ ಸಿದ್ಧತೆಯಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ ಸಹಕಾರ ನೀಡಿದ ಸಮಸ್ತ ವ್ಯಕ್ತಿಗಳಿಗೆ ಅತ್ಯಂತ ಅಭಿಮಾನದಿಂದ ಸ್ಮರಿಸುವೆನು. ಮಾಹಿತಿಯನ್ನು ಗಣಕಯಂತ್ರಕ್ಕೆ ಅಳವಡಿಸಿದ ರ್‍ಯಾಂ ಕಂಪ್ಯೂಟರ್ಸ್ ಅವರಿಗೂ ಹಾಗೂ ಅಕ್ಷರ ಸಂಯೋಜಿಸಿದ ಶ್ರೀನಿವಾಸ ಕೆ. ಕಲಾಲ್ ಅವರಿಗೂ ಸ್ಮರಿಸುತ್ತೇನೆ.

ದಿನಾಂಕ ೬.೭.೨೦೦೨ ಹೇಮಲತಾ ಗಣಪತರಾವ ವಡ್ಡೆ

# ಪರಿವಿಡಿ

# ಪರಿಶಿಷ್ಟಗಳು

**ಪರಿಶಿಷ್ಟ IV : ವೃತ್ತಚಿತ್ರಗಳು**



**ಪರಿಶಿಷ್ಟ V : ಛಾಯಾಚಿತ್ರಗಳು**

# ಅಧ್ಯಾಯ ೧

# ಪ್ರವೇಶ

೧. ಪೀಠಿಕೆ

೨. ಸ್ವರೂಪ

೩. ವ್ಯಾಪ್ತಿ

೪. ಬೇದರ ಪದ ವಿವೇಚನೆ

೫. ಅಧ್ಯಯನದ ಮಹತ್ವ

೬. ಅಧ್ಯಯನದ ಉದ್ದೇಶಗಳು

೭. ಊಹೆಗಳು

೮. ಅಧ್ಯಯನದ ವಿಧಾನಗಳು

೯. ಕ್ಷೇತ್ರಾನುಭವ

# ಅಧ್ಯಾಯ ೧
# ಪ್ರವೇಶ

೧. **ಪೀಠಿಕೆ :** ಸೃಷ್ಟಿಕೃತ ಆದಿಮಾನವನ ಜೀವನವನ್ನು ಅರಿಯಬೇಕಾದರೆ ಬುಡಕಟ್ಟುಗಳ ಅಧ್ಯಯನ ಅತ್ಯವಶ್ಯಕವಾಗಿದೆ. ಇಂದು ನಗರೀಕರಣ, ಪಾಶ್ಚಾತೀಕರಣ, ಔದ್ಯೋಗಿಕರಣ, ಸಂಸ್ಕೃತೀಕರಣ ಇತ್ಯಾದಿಗಳಿಂದ ನಗರ ಮತ್ತು ಗ್ರಾಮೀಣ ಬುಡಕಟ್ಟುಗಳ ಜನರ ಮೇಲೆ ಪ್ರಭಾವ ಬೀರಿ ಜೀವನದಲ್ಲಿ ಬದಲಾವಣೆ ತಂದಿವೆ. ಬುಡಕಟ್ಟಿನವರ ಸಂಸ್ಕೃತಿಯಲ್ಲಿ ಬದಲಾವಣೆ ಆಮೆಯ ಗತಿಯಲ್ಲಿ ನಡೆಯುತ್ತದೆ. ನೂರು ವರ್ಷಕ್ಕೊಮ್ಮೆ ಮೇಲಿನ ಅಥವಾ ಹೊರನೋಟದ ಬದಲಾವಣೆಯಾದರೆ, ಸಾವಿರ ವರ್ಷಕ್ಕೊಮ್ಮೆಯಾದರೂ ಒಳ ಬದಲಾವಣೆ ಆಗುವುದು ಒಳ್ಳೆಯದು. ಯಾಕೆಂದರೆ ಹಿರಿಯರಿಂದಲೂ ಅಳವಡಿಸಿಕೊಂಡು ಬಂದಂಥ ಜೀವನ ಪದ್ಧತಿ, ಮೌಲ್ಯಗಳು ಕಾಲಕ್ಕೆ ಅನುಗುಣವಾಗಿ ಬದಲಾವಣೆ ಆಗದಿದ್ದರೇ ಪ್ರಸ್ತುತ ಜನರಿಂದ ದೂರ ಉಳಿಯಬೇಕಾಗುತ್ತದೆ. ಜೀವನಕ್ಕೆ ಯಾವುದು ಒಳ್ಳೆಯದು ಅದನ್ನು ಅಳವಡಿಸಿಕೊಂಡು ಬಲಿ, ಮೂಢನಂಬಿಕೆ, ಅಜ್ಞಾನ, ಅಂಧಕಾರ ಮೊದಲಾದವುಗಳನ್ನು ಬಿಟ್ಟು ಬಿಡುವುದೇ ಒಳ್ಳೆಯದು.

ಪ್ರಾಚೀನ ಪರಂಪರೆಯುಳ್ಳ ಭಾರತದಲ್ಲಿ ಅನೇಕ ಸಮುದಾಯಗಳು ವಾಸವಾಗಿದ್ದು, ಭಾರತವು ಜಾತ್ಯಾತೀತ ರಾಷ್ಟ್ರವಾಗಿದೆ. ಈ ರಾಷ್ಟ್ರದಲ್ಲಿ ವಾಸವಾಗಿದ್ದ ಒಂದೊಂದು ಸಮುದಾಯದ ಆಚಾರ, ವಿಚಾರ, ಸಂಪ್ರದಾಯ, ಸಂಸ್ಕೃತಿ, ಕಸಬು, ಸಂಸ್ಕಾರ ಇತ್ಯಾದಿಗಳು ಭಿನ್ನವಾಗಿವೆ. ಕರ್ನಾಟಕವು ಕೂಡ ಈ ತರಹದ ಭಿನ್ನತೆಯನ್ನು ಹೊಂದಿದೆ. ಅದೇ ರೀತಿ ಕರ್ನಾಟಕದ ಕಿರೀಟದಂತಿರುವ ಬೀದರ ಜಿಲ್ಲೆಯೂ ಈ ತರಹದ ಸಂಸ್ಕೃತಿಗೆ ಹೊರತಾಗಿಲ್ಲ. ಇಲ್ಲಿಯ ಟೋಕ್ರೆ ಕೋಳಿ ಬುಡಕಟ್ಟಿನ ಸಂಸ್ಕೃತಿ ವಿಶಿಷ್ಟವಾಗಿರುವುದು.

೨. **ಸ್ವರೂಪ :** ಬೀದರ ಜಿಲ್ಲೆಯ ಐದು ತಾಲೂಕಗಳಲ್ಲಿ ಹುಮನಾಬಾದ ಹಾಗೂ ಬಸವಕಲ್ಯಾಣ ತಾಲೂಕುಗಳಲ್ಲಿ ಟೋಕ್ರೆ ಕೋಳಿ ಬುಡಕಟ್ಟಿನವರು ಗಣನೀಯ ಪ್ರಮಾಣದಲ್ಲಿದ್ದಾರೆ. ಇನ್ನುಳಿದ ಮೂರು ತಾಲೂಕುಗಳಲ್ಲಿ ಸಾಧಾರಣ ಜನಸಂಖ್ಯೆ ಹೊಂದಿದ್ದಾರೆ. ಜಿಲ್ಲೆಯಲ್ಲಿ ಸುಮಾರು ೬೦ ಸಾವಿರ ಜನಸಂಖ್ಯೆ ಇವರದಾಗಿದೆ. ಇವರನ್ನು ಜಿಲ್ಲೆಯಲ್ಲಿ ಟೋಕ್ರೆ ಕೋಳಿ ಇಲ್ಲವೆ ಕಬ್ಬಲಿಗ ಎಂದು ಕರೆಯುವರು. ಇವರಲ್ಲಿಯ ಒಳಪಂಗಡಗಳಾದ ತಳವಾರ, ಸುಣಗಾರ, ಅಂಬಿಗಾರ, ಮೀನುಗಾರ ಮೊದಲಾದ ಹೆಸರು ಅವರ ಕಸುಬನ್ನು ಸೂಚಿಸುತ್ತವೆ. ದ್ರಾವಿಡ ಹಿನ್ನೆಲೆಯನ್ನು ಹೊಂದಿದ ಇವರು ಸಾಂಸ್ಕೃತಿಕವಾಗಿ ಪಲ್ಲಟಗೊಳ್ಳುತ್ತಿದ್ದಾರೆ.

ಕರ್ನಾಟಕದ ಚಾರಿತ್ರಿಕ ಇತಿಹಾಸವನ್ನು ಸಿಂಹಾವಲೋಕನ ಮಾಡಿದರೆ, ಪೂರ್ವದಲ್ಲಿ ಕೋಳಿ ಜನರಿಗೆ ಮಹತ್ವಪೂರ್ಣವಾದ ಸ್ಥಾನವಿಲ್ಲದ್ದು ತಿಳಿದು ಬರುತ್ತದೆ. ವಾಹನಗಳ ಸೌಕರ್ಯವಿಲ್ಲದ ಸಂದರ್ಭದಲ್ಲಿ ವಾಲೀ(ಓಲೆ)ಕಾರರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶದ ಜನರಿಗೆ ಸುದ್ದಿ ತಲುಪಿಸುವ, ಹಾಗೆಯೇ

ತಳ(ತಲ)ವಾರರು ಕೈಯಲ್ಲಿ ಖಡ್ಗವನ್ನು ಹಿಡಿದು ಜಾಗರೂಕತೆಯಿಂದ, ಪ್ರಮಾಣಿಕತೆಯಿಂದ ಊರನ್ನು ಕಾಯುವ, ಸಂರಕ್ಷಿಸುವ ಕೆಲಸ ಮಾಡುವವರಾಗಿದ್ದರು. ಊರಲ್ಲಿ ಮದುವೆ, ತೊಟ್ಟಿಲು ಮೊದಲಾದ ಶುಭಕಾರ್ಯ ನಡೆಯುವಾಗ ಅಲ್ಲಿ ಅಡಿಗೆ ಮಾಡಿದ, ಊಟ ಮಾಡಿದ ಪಾತ್ರೆಗಳನ್ನು ಸ್ವಚ್ಛಗೊಳಿಸುವುದು, ಜನರಿಗೆ ಊಟಕ್ಕೆ ಹೇಳುವುದು, ಕರೆದುಕೊಂಡು ಬರುವುದು ಇವೆಲ್ಲ ಅವಟಗೇರರ ಕಾರ್ಯವಾಗಿದ್ದವು.

ಪ್ರಸ್ತುತದಲ್ಲಿ ಮಚುಕೂರಿಯಾದವರು ಸರಕಾರಿ ಕಂದಾಯ ಇಲಾಖೆಯಲ್ಲಿ ಕೆಳದರ್ಜೆಯ ನೌಕರರಾಗಿ ಕಾರ್ಯ ನಿರ್ವಹಿಸುವುದು ಕೆಲವು ಕಡೆ ಕಂಡು ಬರುತ್ತದೆ. ಸರ್ಕಾರದ ಸುದ್ದಿ ಸಮಾಚಾರವನ್ನು ತಿಳಿಸುವ ಕಂದಾಯ ಭರಿಸುವ, ಕಂದಾಯ ತುಂಬುವ ದಿನಾಂಕವನ್ನು ಹಳ್ಳಿಯ ಜನರಿಗೆ ಡಂಗೂರ ಸಾರಿ ತಿಳಿಸುವ ಕಾರ್ಯಮಾಡುವರು. ಮೀನುಗಾರರು ಮೀನು ಹಿಡಿಯುವುದು, ಅವುಗಳನ್ನು ನಗರಕ್ಕೆ ತಂದು ಮಾರುವುದು ಇವರ ಕೆಲಸವಾದರೆ, ಟೋಕ್ರೆ ಕೋಳಿ(ಅಂಬಿಗಾರರು)ಯವರು ಟೋಕ್ರೆಯಲ್ಲಿ ಜನರನ್ನು, ವಸ್ತುವನ್ನು ಒಂದು ದಡದಿಂದ ಇನ್ನೊಂದು ದಡಕ್ಕೆ ಸಾಗಿಸುವ ಕೆಲಸದಲ್ಲಿ ತೊಡಗಿರುವರು. ಸುಣ್ಣಗಾರರು ಹೊಳೆಯಲ್ಲಿನ ಸುಣ್ಣದ ಹರಳನ್ನು ಆಯ್ದುಕೊಂಡು ತಂದು ಅವುಗಳಿಂದ ಸುಣ್ಣವನ್ನು ಮಾರಾಟ ಮಾಡುವರು. ಹೀಗೆ ವೃತ್ತಿಗನುಗುಣವಾಗಿ ೩೯ ಪರ್ಯಾಯ ಪದಗಳನ್ನು ಈ ಬುಡಕಟ್ಟು ಹೊಂದಿದೆ. ಇಂಥ ಹಲವಾರು ವೃತ್ತಿ(ಕಸುಬು)ಗಳಲ್ಲಿ ತೊಡಗಿದ ಟೋಕ್ರೆ ಕೋಳಿ ಬುಡಕಟ್ಟಿನವರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ ಅಭಿವೃದ್ಧಿ ಕುಂಠಿತವಾಯಿತು. ಆದರೆ ಇವರ ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರ, ಸಂಸ್ಕಾರಗಳು ವಿಶಿಷ್ಟವಾಗಿ ಕಂಡು ಬರುತ್ತವೆ. ಇವರು ಬುಡಕಟ್ಟಿನವರಾದರೂ ಇವರದೆಯಾದ ಪ್ರತ್ಯೇಕ ಭಾಷೆ ಇರದೆ; ಕನ್ನಡ, ಮರಾಠಿ, ತೆಲುಗು, ಹಿಂದಿ ಭಾಷೆಗಳಲ್ಲಿ ಮಾತನಾಡುವುದನ್ನು ಕಾಣುತ್ತೇವೆ.

ಟೋಕ್ರೆ ಕೋಳಿ ಬುಡಕಟ್ಟಿನವರು ದಷ್ಟಪುಷ್ಟ ದೇಹವುಳ್ಳವರು. ಇವರು ಹಗಲು ರಾತ್ರಿಯೆನ್ನದೇ ಕಷ್ಟಪಟ್ಟು ದುಡಿಯುತ್ತಾರೆ. ಹಿಂದಿನ ಕಾಲದ ತಳವಾರಿಕೆಯೇ ಇದಕ್ಕೆ ಉದಾಹರಣೆಯಾಗಿದೆ. ಇವರು ಅಷ್ಟು ಕುರೂಪಿಯೂ ಅಲ್ಲದ, ಸುಂದರವೂ ಅಲ್ಲದೆ, ಸಾಧರಣವಾಗಿರುತ್ತಾರೆ. ಇವರು ಕಪ್ಪುಮಿಶ್ರಿತ ಎಣ್ಣೆಗೆಂಪು ಬಣ್ಣವುಳ್ಳವರು. ಇವರ ದೇಹದೃಢತೆಯನ್ನರಿತ ನಿಜಾಮರು ಇವರಿಗೆ ಗ್ರಾಮದ ಹಾಗೂ ಗ್ರಾಮ ಪಾಲಕರ ರಕ್ಷಣೆಯ ಹೊಣೆಗಾರಿಕೆಯನ್ನು ನೀಡಿದರು. ಗ್ರಾಮ ರಕ್ಷಕರಿಗೆ ತಳವಾರರೆಂದು ಕರೆಯುವುದುಂಟು. ಜನಪದರು ಇವರನ್ನು 'ಕಾಟಿ' 'ಕಬ್ಬಲಿಗ' ಎಂದು ಅಭಿದಾನವಿತ್ತರು. 'ಕಾಟಿ' ಇದು ಮರಾಠಿ ಭಾಷೆಯ ಪದ. ಇದರ ಅರ್ಥ ಕೋಲು ಅಥವಾ ಬಡಿಗೆ ಎಂದು ಕನ್ನಡದಲ್ಲಿ ಅರ್ಥೈಸಬಹುದು. (ಮೈತ್ರಿ ಕೆ.ಎಂ.,೧೯೯೭:೧೨೪) ಕೋಲನ್ನು ಕೈಯಲ್ಲಿ ಹಿಡಿದು ಗ್ರಾಮ ರಕ್ಷಿಸುವವರು ಎಂದರ್ಥ. ಇವರನ್ನೇ ಕೆಲವು ಕಡೆ ಕೋಲಕಾರವೆಂದು ಕರೆಯುತ್ತಾರೆ. ಇದರಿಂದ ಟೋಕ್ರೆ ಕೋಳಿಯರು ಧೈರ್ಯವಂತರು, ದೇಹದೃಢತೆಯುಳ್ಳವರು ಎಂಬುದನ್ನು ತಿಳಿದು ಬರುತ್ತದೆ. 'ವಡ್ಡಾರಾಧನೆ'ಯು ೧೯ ಕಥೆಗಳನ್ನು ಒಳಗೊಂಡಿದೆ. ಇದರಲ್ಲಿಯ 'ಸುಕುಮಾರಸ್ವಾಮಿ' ಕಥೆಯಲ್ಲಿ ಮತ್ತೇ ಐದು ಉಪಕಥೆಗಳಿವೆ. ಅದರಲ್ಲಿ ತಳವಾರರ ಪಾತ್ರ ಕಂಡುಬರುತ್ತದೆ. ಕನಕದಾಸರ ಒಂದು ಕೀರ್ತನೆಯಲ್ಲಿಯೂ ತಳವಾರಿಕೆಯನ್ನು ಮತ್ತು ಓಲೇಕಾರಿಕೆಯನ್ನು ಕುರಿತು ಪ್ರಸ್ತಾಪಿಸಲಾಗಿದೆ. ಹಾಗೆಯೆ ಅಂಬಿಗಾರ ಚೌಡಯ್ಯನ ವಚನದಲ್ಲಿಯೂ ಅಂಬಿಗಾರರನ್ನು ಕುರಿತು ಹೇಳಲಾಗಿದೆ.

ಬೇಟೆಗಾರಿಕೆ, ಪಶುಪಾಲನೆ, ಮೀನುಗಾರಿಕೆ ಹಾಗೂ ಕೃಷಿ ಇವು ಕೋಳಿಯವರ ಕಸುಬುಗಳು. ಆದರೆ, ಪ್ರಸ್ತುತದಲ್ಲಿ ಬೇಟೆಗಾರಿಕೆ ಮಾಯವಾಗಿ ಪಶುಪಾಲನೆ ಆ ಸ್ಥಾನವನ್ನು ಆಕ್ರಮಿಸಿಕೊಂಡಿದೆ. ಕೃಷಿ, ಕೃಷಿಕೂಲಿ ಇವರ ಮುಖ್ಯ ಕಸುಬಾಗಿವೆ. ಕೆಲವರು ಸರ್ಕಾರಿ ನೌಕರಿಯನ್ನು ಹೊಂದಿದ್ದಾರೆ. ಟೋಕ್ರೆ ಕೋಳಿ ಸಮುದಾಯದವರು ಆರ್ಥಿಕ. ಸಾಮಾಜಿಕ, ರಾಜಕೀಯವಾಗಿ ಹಿಂದುಳಿಯಲು ಅವರ ಅನಕ್ಷರತೆಯೇ ಕಾರಣ. ಸರಕಾರದ ಯೋಜನೆಗಳು ಇವರಿಗೆ ಸ್ಪಂದಿಸುತ್ತಿಲ್ಲ. ಇತ್ತೀಚೆಗೆ ಅಕ್ಷರಸ್ಥ ಜನರು ಸಂಘಟಿತರಾಗಿ ತಮ್ಮ ಹಕ್ಕುಗಳಿಗೆ ಹೋರಾಟ ನಡೆಸುತ್ತಿರುವುದು ಕಂಡು ಬರುತ್ತಿದೆ.

೩. ವ್ಯಾಪ್ತಿ : ಬೀದರ ಜಿಲ್ಲೆಯು ಉತ್ತರ ಕರ್ನಾಟಕದ ಕೊನೆಯ ಹಾಗೂ ಸಣ್ಣ ಜಿಲ್ಲೆಯಾಗಿದ್ದು; ಇದು ಐತಿಹಾಸಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಮಹತ್ವನನ್ನು ಪಡೆದಿದೆ. ಇದು ಔರಾದ, ಭಾಲ್ಕಿ, ಬಸವಕಲ್ಯಾಣ, ಹುಮನಬಾದ ಮತ್ತು ಬೀದರ ಎಂಬ ಐದು ತಾಲೂಕಗಳನೊಳಗೊಂಡಿದೆ (ಭೂಪಟ ೧ ನೋಡಿ). ಜಿಲ್ಲೆಯು ೫೪೫೮ ಚದರ ಕಿಲೋಮೀಟರ ವಿಸ್ತೀರ್ಣ ಹೊಂದಿದೆ. ಧರಿನಾಡ ಜಿಲ್ಲೆಯೆಂದು ಹೆಸರು ಪಡೆದ ಬೀದರವು ಸಮುದ್ರ ಪಾತಳಿಯಿಂದ ೨೨೦೬ ಅಡಿ ಎತ್ತರವಿದ್ದು, ಜಿಲ್ಲೆಯ ಹವಾಗುಣ ಸಮಶೀತೋಷ್ಣವಾಗಿ ಹಿತಕರವಾಗಿದೆ. ಇಲ್ಲಿಯ ನೀರು ಕೂಡ ಅಷ್ಟೇ ರುಚಿಕರವಾಗಿವೆ (ಸಬರದ,ಬಸವರಾಜ:೧೯೮೨:xii).

ಜಿಲ್ಲೆಯಲ್ಲಿ ಹೇಳಿಕೊಳ್ಳುವಂತಹ ಎತ್ತರದ ಗುಡ್ಡಬೆಟ್ಟಗಳಿಲ್ಲ. ಈ ಜಿಲ್ಲೆ ೬೪೦ ಹಳ್ಳಿಗಳನ್ನು ಹೊಂದಿದೆ. ಜಿಲ್ಲೆಯು ದಕ್ಷಿಣೋತ್ತರವಾಗಿ ೭೬°.೪೨' ಯಿಂದ ೭೭°.೭೯' ರೇಖಾಂಶಗಳವರೆಗೂ, ಪೂರ್ವ ಪಶ್ಚಿಮವಾಗಿ ೧೭°.೩೫' ಯಿಂದ ೧೮°.೨೫' ಅಕ್ಷಾಂಶಗಳವರೆಗೆ ಹರಡಿಕೊಂಡಿದೆ. ಈ ಜಿಲ್ಲೆಯ ಪೂರ್ವಕ್ಕೆ ಆಂಧ್ರ ಪ್ರದೇಶದ ನಿಜಾಮಬಾದ ಮತ್ತು ಮೆದಕ್ ಜಿಲ್ಲೆಗಳು ಹೊಂದಿಕೊಂಡಿದೆ. ಉತ್ತರ ಮತ್ತು ಪಶ್ಚಿಮ ಭಾಗಗಳಿಗೆ ಕ್ರಮವಾಗಿ ಮಹಾರಾಷ್ಟ್ರದ ನಾಂದೇಡ ಮತ್ತು ಉಸ್ಮಾನಾಬಾದ ಜಿಲ್ಲೆಗಳಿವೆ. ದಕ್ಷಿಣಕ್ಕೆ ಗುಲಬರ್ಗಾ ಜಿಲ್ಲೆಯಿದೆ. ಈ ಜಿಲ್ಲೆಯ ಕೆಲ ಭಾಗವು ಕಪ್ಪು ಮಣ್ಣಿನಿಂದ ಕೂಡಿದ್ದರೆ, ಉಳಿದರ್ಧ ಭಾಗವು ಕೆಂಪು ಮಣ್ಣಿನಿಂದ ಒಳಗೊಂಡಿದೆ. ಕಾರಂಜಾ ಮತ್ತು ಮಾಂಜರಾಗಳು ಈ ಜಿಲ್ಲೆಯ ದೊಡ್ಡ ನದಿಗಳು. ಮುಲ್ಲಾಮಾರಿ, ಚುಲ್ಕಿನಾಲಾ, ಮಾಣಿಕನಗರ ನಾಲಾ, ಮಧುರ ನಾಲಾಗಳು ಇನ್ನಿತರ ಪ್ರವಾಹಗಳಾಗಿವೆ(ಅಭಿಶಂಕರ,ಕೆ.:೧೯೭೭:೨).

ಬೀದರ ಜಿಲ್ಲೆಯ ವೈಶಿಷ್ಟ್ಯವೆಂದರೆ ವಿವಿಧತೆಯಲ್ಲಿ ಏಕತೆ. ಇಲ್ಲಿ ಬೇರೆ ಬೇರೆ ಭಾಷೆ, ಸಂಪ್ರದಾಯಗಳ ಜನರು ವಾಸವಾಗಿದ್ದಾರೆ. ಇಲ್ಲಿಯ ಅನೇಕ ಭಾಷೆಗಳು ಭಾವೈಕ್ಯತೆಯನ್ನು ಮೂಡಿಸಿವೆ,ಕನ್ನಡ ಮಾತೃ ಭಾಷೆಯಾದರೂ ಕೂಡ ಉರ್ದು, ಮರಾಠಿ, ಹಿಂದಿ, ತೆಲುಗು ಇವು ಸಂಪರ್ಕ ಭಾಷೆಗಳಾಗಿ ಬಳಕೆಯಲ್ಲಿವೆ.

ಬೀದರ ಜಿಲ್ಲೆಯಲ್ಲಿ ಎಲ್ಲರಿಗೂ ಸಮ್ಮತವಾದ ಧಾರ್ಮಿಕ ಕಟ್ಟುಪಾಡುಗಳು ಬಳಕೆಯಲ್ಲಿದ್ದವು. ಎಲ್ಲ ಧರ್ಮಗಳಿಗೂ ಸಮಾನ ಅವಕಾಶವಿದ್ದು, ಧಾರ್ಮಿಕ ನೀತಿಗೆ ಅನುಗುಣವಾಗಿ ಪ್ರೋತ್ಸಾಹವಿತ್ತು. ಆದ್ದರಿಂದಲೇ ಧಾರ್ಮಿಕ ನೀತಿಗೆ ಅನುಗಣವಾದ ಸಾಮಾಜಿಕ ರೀತಿ ನೀತಿಗಳು ಬಳಕೆಗೆ ಬಂದವು. ಸಾಮಾಜಿಕ, ಧಾರ್ಮಿಕ ಆಚರಣೆಗಳು ಜಿಲ್ಲೆಯ ಅಖಂಡತೆಯನ್ನು ಬೆಳೆಸಲು ಸಹಾಯಕವಾಗಿವೆ.

ಪ್ರಾಚೀನ ಕಾಲದಿಂದಲೂ ಬೀದರ ಜಿಲ್ಲೆಯ ಮೇಲೆ ಹಲವು ದಾಳಿಗಳು ಆವರಿಸಿದ್ದರೂ ಜಿಲ್ಲೆಯ ಇತಿಹಾಸ ಹಾಗೂ ಸಂಸ್ಕೃತಿಗೆ ಧಕ್ಕೆ ಬರಲಿಲ್ಲ. ಎಷ್ಟೋ ರಾಜ ಮನೆತನದವರು ಬೀದರನ್ನು ವಶಪಡಿಸಿಕೊಂಡು ನೆಲಸಿದರು. ಮೌರ್ಯರು, ಶಾತವಾನರು, ರಾಷ್ಟ್ರಕೂಟರು, ಹೊಯ್ಸಳರು, ಕಲ್ಯಾಣಿ ಚಾಲುಕ್ಯರು, ದೇವಗಿರಿಯ ಯಾದವರು

ಭೂಪಟ ೧ : ಬೀದರ ಜಿಲ್ಲೆ



ತಮ್ಮ ಆಳ್ವಿಕೆ ನಡೆಸಿದರು. ಮುಸ್ಲೀಮ ಅರಸರಾದ ದೆಹಲಿಯ ಸುಲ್ತಾನರು, ಬಹುಮನಿ ಸುಲ್ತಾನರು, ಬರಿದ್‌ಶಾಹಿ ಸುಲ್ತಾನರು, ಮೋಘಲರು, ಹೈದ್ರಾಬಾದ ನಿಜಾಮರು ಬೀದರ ಜಿಲ್ಲೆಯನ್ನು ಆಳಿದರು. ಹೀಗಾಗಿ ಸಂಯಮ ಹೊಂದಾಣಿಕೆ ಹಾಗೂ ಸಾಧನೆ ಈ ಜಿಲ್ಲೆಯ ಹೆಗ್ಗಳಿಕೆಯಾಗಿವೆ.

ಬೀದರ ಜಿಲ್ಲೆ ಸಾಹಿತಿಕ ವಲಯದಲ್ಲಿ ಅಪಾರ ಕೊಡುಗೆ ಸಲ್ಲಿಸಿದಲ್ಲದೆ, ಹಳಗನ್ನಡ, ವಚನ ಸಾಹಿತ್ಯದ ತವರೂರು. ಈ ಜನವಾಣಿ ಬೇರು ಕವಿವಾಣಿ ಹೂ ಎಂಬ ಬಿ.ಎಂ.ಶ್ರೀಯವರ ಮಾತಿನಂತೆ ಜನವಾಣಿಯನ್ನೇ ದೇವವಾಣಿಯನ್ನಾಗಿ ಮಾಡಿದ ಹೆಗ್ಗಳಿಕೆ ಬೀದರ ಜಿಲ್ಲೆಯ ಶರಣರದಾಗಿದೆ. ಈ ಹಿನ್ನೆಲೆಯ ಬೀದರ ಜಿಲ್ಲೆಯ ಟೋಕ್ರೆ ಕೋಳಿಗಳ ಸಮಗ್ರ ಸಾಂಸ್ಕೃತಿಕ ಅಧ್ಯಯನವು ಪ್ರಸ್ತುತ ಅಧ್ಯಯನದ ವ್ಯಾಪ್ತಿಯಾಗಿರುವುದು.

೪. ಬೀದರ ಪದ ವಿವೇಚನೆ : ಬೀದರ ಜಿಲ್ಲೆಗೆ ಸಾಂಸ್ಕೃತಿಕ, ಐತಿಹಾಸಿಕ, ಚಾರಿತ್ರಿಕ ಮಹತ್ವವಿರುವಂತೆ 'ಬೀದರ' ಎಂಬ ಪದಕ್ಕೂ ಮಹತ್ವವಿದೆ. ಪೌರಾಣಿಕವಾಗಿ ಬೀದರ 'ವಿದುರನಗರ' ಮಹಾಭಾರತದ ಕಾಲದಷ್ಟು ಇದರ ಪ್ರಾಚೀನತೆ, ಶ್ರೇಷ್ಠವಾದ ನಾಗರಿಕತೆಗೆ ಹೆಸರುವಾಸಿ. ನಳದಮಯಂತಿಯರ ಪ್ರಖ್ಯಾತ ಪ್ರಣಯದ ಉದ್ಯಾನವೆಂತಲೂ ಪ್ರತೀತಿ. ಕಾಲಕಾಲಕ್ಕೆ ಅನೇಕ ಹೆಸರುಗಳಿಂದ ಪ್ರಸಿದ್ಧಿ. ಬೀದರ ಇದರ ಮೂಲ ಶಬ್ದ ಬಿದಿರು. ಇದು ಬಿದರು ಬೆಳೆಯುವ ಪ್ರದೇಶ ಅಂತೆಯೇ ಇದಕ್ಕೆ ಬಿದಿರೆ>ಬಿದಿರುಪುರ>ಬಿದರೂರು>ಬಿದರೆ ಇತ್ಯಾದಿ ಹೆಸರುಗಳು. ೧೫ನೆಯ ಶತಮಾನದ ಕನ್ನಡ-ಮರಾಠಿ ಗ್ರಂಥಗಳಲ್ಲಿ ಈ ಹೆಸರುಗಳ ಉಲ್ಲೇಖ ಮುಸ್ಲಿಮ್ ಅರಸರ ಕಾಲದಲ್ಲಿ ಅಹಮ್ಮದಾಬಾದ ಬೀದರ ಹಾಗೂ ಮೊಹಮ್ಮದಾಬಾದ-ಬೀದರ ಎಂಬ ಹೆಸರು ಹೊಂದಿ ಸದ್ಯಕ್ಕೆ ಬೀದರ ಆಗಿದೆ (ಕುಲಕರ್ಣಿ,ಎಲ್.ಆರ್.೧೯೯೬:೧).

ಬಿದಿರೆ, ಬಿದಿರುಪುರವೆಂದು ಕರೆಸಿಕೊಂಡಿರಬಹುದಾದ ಈ ಸ್ಥಳ ಕ್ರಿ.ಶ. ೧೪೨೪ರ ವೇಳೆಯ ಸೋಲಾಕಂಬ ಮಸಿದೆಯಲ್ಲಿ ದೊರೆತ ಶಾಸನದಲ್ಲಿ ಪ್ರಥಮ ಬಾರಿಗೆ 'ಬೀದರ' ಎಂದು ಉಲ್ಲೇಖಸಲ್ಪಟ್ಟಿದ್ದು ಮುಸ್ಲಿಮ ಅರಸರ ಕಾಲದಲ್ಲಿ ಮೊಹಮ್ಮದಾಬಾದ ಬೀದರ ಎಂದು ಕರೆಯಲ್ಪಟ್ಟಿದ್ದು ಕಂಡು ಬರುತ್ತದೆ.

ಬೀದರ, ಭಾಲ್ಕಿ, ಔರಾದ ಮತ್ತು ಹುಮನಾಬಾದ ಈ ನಾಲ್ಕು ತಾಲೂಕುಗಳನ್ನು ಹೊಂದಿದ ಬೀದರ ಜಿಲ್ಲೆಯಲ್ಲಿ ೧೯೬೫ರಲ್ಲಿ ಬಸವಕಲ್ಯಾಣವು ಐದನೆಯ ತಾಲೂಕವಾಗಿ ರೂಪಗೊಂಡಿತು. ೧೫ನೇ ಅಗಸ್ಟ್ ೧೯೪೭ರಲ್ಲಿ ಭಾರತ ಸ್ವತಂತ್ರ್ಯ ಪಡೆದರೂ, ಬೀದರ ಜಿಲ್ಲೆಯು ಹೈದ್ರಾಬಾದ ನಿಜಾಮರ ಅಧೀನದಲ್ಲಿತ್ತು. ೧೭ನೇ ಸೆಪ್ಟೆಂಬರ್ ೧೯೪೮ರಂದು ಹೈದ್ರಾಬಾದ ಕರ್ನಾಟಕ ಪ್ರದೇಶ ಸ್ವಾತಂತ್ರ ಪಡೆಯಿತು. ಭಾರತ ಸ್ವಾತಂತ್ರ್ಯ ಪಡೆದ ಒಂದು ವರ್ಷ ಒಂದು ತಿಂಗಳ ನಂತರ ಹೈದ್ರಬಾದ ಕರ್ನಾಟಕ ಪ್ರದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿತು. ೧೯೫೬ರಲ್ಲಿ ಕರ್ನಾಟಕ ಏಕೀಕರಣವಾಯಿತು. ಬೀದರ ಮೈಸೂರು ರಾಜ್ಯಕ್ಕೆ ಸೇರಿತ್ತು.

೫. ಅಧ್ಯಯನದ ಮಹತ್ವ : ಪ್ರಸ್ತುತ ಅಧ್ಯಯನದಲ್ಲಿ ಟೋಕ್ರೆ ಕೋಳಿ ಬುಡಕಟ್ಟಿನ ಜೀವನ ಕ್ರಮಗಳನ್ನು ತಿಳಿದುಕೊಳ್ಳುವುದು, ಪ್ರಾಚೀನ ಕಾಲದಲ್ಲಿದ್ದ ಅವರ ಸಂಸ್ಕೃತಿ ಹಾಗೂ ಪ್ರಸ್ತುತದಲ್ಲಿ ಇವರ ಸಂಸ್ಕೃತಿಯಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗುರುತಿಸುವುದು, ಸಾವಿರಾರು ವರ್ಷಗಳಿಂದ ಬಂದಂಥ ಸಂಸ್ಕೃತಿಯ ಅನುಭವ ಅಳಿದು ಹೋಗುವ ಮುಂಚೆಯೆ ದಾಖಲಿಸುವುದು, ಕಡ್ಡಾಯ ಶಿಕ್ಷಣದಿಂದ ಜ್ಞಾನವನ್ನು ಪಡೆದುಕೊಂಡುದರಿಂದ

ಮೂಲ ಕಸುಬುಗಳನ್ನು ಬಿಟ್ಟು ಇನ್ನಿತರ ಕಸುಬುಗಳಿಗೆ ವಾಲುತ್ತಿರುವುದರಿಂದ ಮೂಲ ವೃತ್ತಿಯ ಸತ್ವ ಕಡಿಮೆಯಾಗುತ್ತಿರುವುದ್ದನ್ನು ಗುರುತಿಸುವುದು. ಇವರಲ್ಲಿ ಉದ್ಭವವಾದ ಸಮಸ್ಯೆಗಳಿಗೆ ಹೇಗೆ ಪರಿಹಾರ ಕಂಡುಕೊಳ್ಳಬಹುದುದಾಗಿದೆ ಎಂಬೀ ಮುಂತಾದ ಅಂಶಗಳನ್ನು ಪತ್ತೆ ಹಚ್ಚುವುದೇ ಈ ಅಧ್ಯಯನದ ಮಹತ್ವವಾಗಿದೆ.

ಆದಿವಾಸಿಗಳ ಅಧ್ಯಯನ ಕುರಿತು ಮಾನವಶಾಸ್ತ್ರಜ್ಞ ರೂತ್ ಬೆನಡಿಕ್ಟ ಹೀಗೆ ವಿವರಿಸಿದ್ದಾನೆ. ''ಆದಿವಾಸಿ ಸಂಸ್ಕೃತಿಗಳು ಮಾನವ ಸಂಸ್ಥೆಗಳ ವೈವಿಧ್ಯವನ್ನು ಅಧ್ಯಯನ ಮಾಡಲು ಪ್ರಯೋಗ ಶಾಲೆ ಇದ್ದಂತೆ. ಹಲವು ಆದಿವಾಸಿ ಪ್ರದೇಶಗಳು ಹೆಚ್ಚಿನ ಪ್ರತ್ಯೇಕತೆಯಿಂದ ಕೂಡಿವೆ. ಆದ್ದರಿಂದ ಅಲ್ಲಿನ ಆದಿವಾಸಿ ಸಮಾಜಗಳಿಗೆ ತಾವು ಆಯ್ದುಕೊಂಡ ಸಾಂಸ್ಕೃತಿಕತೆಯನ್ನು ಪರಿಷ್ಕರಿಸಿ ಉತ್ತರಿಸಿಕೊಳ್ಳಲು ಶತಮಾನಗಳ ಕಾಲವೇ ಬೇಕಾಗುತ್ತದೆ. ಮಾನವೀಯ ಹೊಂದಾಣಿಕೆಗಳಲ್ಲಿ ಸಾಧ್ಯವಾಗುವ ವೈವಿಧ್ಯಮಯ ವಿಭಿನ್ನತೆಗಳನ್ನು ಕುರಿತು ಅತ್ಯಗತ್ಯ ವಿವರಗಳನ್ನು ಈ ಆದಿವಾಸಿ ಸಂಸ್ಕತಿಗಳು ನಮಗೆ ಸಿದ್ಧರೂಪದಲ್ಲಿ ಒದಗಿಸುತ್ತವೆ. ಸಾಂಸಕೃತಿಕ ಪ್ರತಿಕ್ರಿಯೆಗಳನ್ನು ಅರಿತುಕೊಳ್ಳಲು ಅವುಗಳ ವಿಮರ್ಶಾತ್ಮಕ ಪರಿಶೀಲನೆ ಅತ್ಯವಶ್ಯಕ. ಇವು ಸಾಮಾಜಿಕ ಮಾದರಿಗಳನ್ನು ಕುರಿತು ನಾವು ಪಡೆದಿರುವ, ಪಡೆಯಬಹುದಾದ ಏಕೈಕ ಪ್ರಯೋಗಾಲಯ(ಶಂಕರನಾರಾಯಣರಾವ್,ಎನ್.ಪಿ:೧೯೭೮:೧೬).

ಪ್ರಪಂಚದ ಈ ಆಧುನಿಕ ಪರಿಸ್ಥಿತಿಯಲ್ಲಿ ಮಾನವಶಾಸ್ತ್ರದ ಕರ್ತವ್ಯವನ್ನು ಕುರಿತು ಪ್ರಸಿದ್ಧ ಮಾನವಶಾಸ್ತ್ರಜ್ಞ ಕ್ಲಾಯ್ಡ್ ಲೇವಿಸ್ಟ್ರಸ್ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. ''ಪ್ರತಿಯೊಂದು ಬಗೆಯ ಸಮಾಜ, ನಂಬಿಕೆ, ಸಂಸ್ಥೆ ಅಥವಾ ಜೀವನ ವಿಧಾನ ಸಾವಿರಾರು ವರ್ಷಗಳ ಅನುಭವದ ಪರಿಣಾಮವಾದ ಒಂದು ಪ್ರಯೋಗ. ಈ ದೃಷ್ಟಿಯಿಂದ ಅದು ಒಮ್ಮೆ ಕಳೆದು ಹೋದಲ್ಲಿ ಮತ್ತೇ ಪಡೆಯಲು ಸಾಧ್ಯವಿಲ್ಲದಂಥದು. ಒಂದು ಸಮುದಾಯದಲ್ಲಿ ಅದು ಪಡೆದಿದ್ದ ವಿಶಿಷ್ಟ ಜ್ಞಾನದ ಬಾಗಿಲು ಎಂದೆಂದಿಗೂ ಮುಚ್ಚಿದಂತೆ'' . ಈ ಹೇಳಿಕೆ ಸಂಸ್ಕೃತಿಯ ರೂಪಾಂತರಗಳು ಹಾಗೂ ಪ್ರಕ್ರಿಯೆಗಳ ಅಧ್ಯಯಯನಕ್ಕೆ ಪುಷ್ಠಿ ನೀಡುತ್ತದೆ. ಇಂದು ಆದಿವಾಸಿ ಸಮಾಜಗಳ ಕೂಲಂಕುಷ ಅಧ್ಯಯನ ಬಹಳ ಮುಖ್ಯವಾದದು. 'ಸಂಸ್ಕೃತಿ' ಅದರ ಪ್ರಕ್ರಿಯೆಗಳು ಹಾಗೂ ಕ್ರಿಯೆಗಳು ಈ ವಿಷಯದ ಬಗ್ಗೆ ಸಾಧ್ಯವಿದ್ದಷ್ಟು ಜ್ಞಾನವನ್ನು ಗಳಿಸುವುದು ಅವಶ್ಯಕ. ಈ ಜ್ಞಾನವನ್ನು ಅಕ್ಷರ ಪೂರ್ವ ಸಮಾಜಗಳಲ್ಲಿನ ವಾಸ್ತವಾಂಶಗಳ ಮೂಲಕ ಗಳಿಸುವುದಕ್ಕಿಂತ ಹೆಚ್ಚು ಲಾಭಕಾರಿಯಾಗಿ ಬೇರಾವ ಮಾರ್ಗದಲ್ಲಿಯೂ ಗಳಿಸಲಾರೆವು(ಅವರೇ;೧೯೭೮:೧೯). ಈ ಹಿನ್ನೆಲೆಯಲ್ಲಿ ಟೋಕ್ರೆ ಕೋಳಿ ಬುಡಕಟ್ಟಿನ ಸ್ಮರಣ ಮತ್ತು ವಿಸ್ಮರಣ ಸಾಂಸ್ಕೃತಿಕ ಅಂಶಗಳ ದಾಖಲೆಯು ಮಹತ್ವದಾಗುವುದು.

## ೬. ಅಧ್ಯಯನದ ಉದ್ದೇಶಗಳು

೧. ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಮೂಲ ಮತ್ತು ಪ್ರಸಾರವನ್ನು ಗುರುತಿಸುವುದು.

೨. ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಸಂಸ್ಕೃತಿಯನ್ನು ಶೋಧಿಸುವುದು.

೩. ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಹಾಗೂ ಶೈಕ್ಷಣಿಕ ನೆಲೆಗಳನ್ನು ಅಧ್ಯಯನಿಸುವುದು.

೪. ಟೋಕ್ರೆ ಕೋಳಿ ಬುಡಕಟ್ಟಿನ ಸಂಸ್ಕೃತಿಯಲ್ಲಿ ಆದ ಬದಲಾವಣೆಯನ್ನು ಗುರುತಿಸುವುದು.

೫. ಟೋಕ್ರೆ ಕೋಳಿಯ ಮೂಲ ಸಂಸ್ಕೃತಿಯನ್ನು ದಾಖಲಿಸುವುದು.

೬. ಟೋಕ್ರೆ ಕೋಳಿ ಬುಡಕಟ್ಟಿನ ಜನಸಂಖ್ಯೆಯ ವಿವರಗಳನ್ನು ಸಾಕ್ಷರತೆಯ ಪ್ರಮಾಣಗಳನ್ನು ತೌಲನಿಕವಾಗಿ ಪರಾಮರ್ಶಿಸುವುದು.

೭. ಟೋಕ್ರೆ ಕೋಳಿ ಬುಡಕಟ್ಟಿನಲ್ಲಿರುವ ಸೌಲಭ್ಯ ಮತ್ತು ಅವುಗಳ ಉಪಯೋಗವನ್ನು ಮೌಲ್ಯಮಾಪನ ಮಾಡುವುದು.

೮. ಟೋಕ್ರೆ ಕೋಳಿ ಬುಡಕಟ್ಟಿನ ಸಮಸ್ಯೆಗಳನ್ನು ಅಧ್ಯಯನಿಸಿ ಪರಿಹಾರೋಪಾಯಗಳನ್ನು ನೀಡುವುದು.

## ೭. ಊಹೆಗಳು

೧. ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟು ಸಾಂಸ್ಕೃತಿಕವಾಗಿ ಬದಲಾಗುತ್ತಿದೆ.

೨. ಈ ಸಮುದಾಯ ಅಂತರಾಳದಲ್ಲಿ ತನ್ನ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡಿದೆ.

## ೮. ಅಧ್ಯಯನದ ವಿಧಾನಗಳು

೮.೧. ಐತಿಹಾಸಿಕ ವಿಧಾನ : ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಅಧ್ಯಯನಕ್ಕೆ ಅಗತ್ಯವಾದ ಗ್ರಂಥಗಳು, ಸರಕಾರಿ ಪ್ರಕಟಣೆಗಳು, ಪತ್ರಿಕೆಯಲ್ಲಿನ ಲೇಖನಗಳು ಮತ್ತು ಜಿಲ್ಲೆಯ ಅಂಕಿ ಅಂಶಗಳ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಬೀದರ ಜಿಲ್ಲೆಯಲ್ಲಿ ವಾಸಿಸುವ ಇತರ ಬುಡಕಟ್ಟುಗಳನ್ನು ಕುರಿತು ಅರಿಯಲು ಉಪಸಂಸ್ಕೃತಿ ಮಾಲೆಯಲ್ಲಿ ಪ್ರಕಟಗೊಂಡ ಪುಸ್ತಕಗಳನ್ನು ಹಾಗೂ ಭಾರತ ಮತ್ತು ಕರ್ನಾಟಕ ಸರ್ಕಾರಗಳು ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಹಾಕಿಕೊಂಡ ಹಲವಾರು ಕಲ್ಯಾಣ ಕಾರ್ಯಕ್ರಮಗಳ ಯೋಜನೆಗಳನ್ನು ಮಾಹಿತಿಗಾಗಿ ಬಳಸಿಕೊಳ್ಳಲಾಗಿದೆ. ಕೊಲ್ಲಾಪುರದ ಕರ್ವೀರ, ಝುಲಕಾಂಬಾಯಿ, ಬುದ್ಧನ ತಾಯಿಯಾದ ಮಹಾಮಾಯದೇವಿ ಮತ್ತು ಹೆಂಡತಿ ಯಶೋಧರೆ, ಅಂಬಿಗಾರ ಚೌಡಯ್ಯ, ಕರ್ಣ, ಭೀಷ್ಮ ಮೊದಲಾದವರ ಐತಿಹಾಸಿಕವನ್ನು ಅರಿಯಲು ಐತಿಹಾಸಿಕ ವಿಧಾನವನ್ನು ಬಳಸಿಕೊಳ್ಳಲಾಗಿದೆ.

೮.೨. ತೌಲನಿಕ ವಿಧಾನ : ಪ್ರಸ್ತುತ ಅಧ್ಯಯನದಲ್ಲಿ ಈ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಏಕೆಂದರೆ ಇಲ್ಲಿ ಸಂಶೋಧಿಸುವ ವಿಷಯ ವ್ಯಾಪಾಕವಾಗಿದೆ. ಬೀದರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಅಂಶಗಳ ಸ್ಥಿತಿಗತಿಯನ್ನು ತೌಲನಿಕವಾಗಿ ಅಧ್ಯಯನ ಮಾಡುವದರೊಂದಿಗೆ ಇನ್ನಿತರ ಸಮುದಾಯದೊಂದಿಗೆ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಪ್ರಯತ್ನ ಹೊಂದಿದೆಯೇ ಎಂಬುದನ್ನು ತಿಳಿದುಕೊಳ್ಳಲು ಈ ವಿಧಾನ ಬಳಸಲಾಗಿದೆ.

೮.೩. ಸಂಖ್ಯಾಶಾಸ್ತ್ರೀಯ ವಿಧಾನ : ಇದು ಬೀದರ ಜಿಲ್ಲೆಯ ಟೋಕ್ರೆ ಕೋಳಿ ಜನತೆಯ ರೂಪರೇಷಗಳನ್ನು ರಚಿಸಲು, ವೈಜ್ಞಾನಿಕವಾಗಿ ಉತ್ತರಿಸಲು ಸಹಾಯಕವಾಗುತ್ತದೆ. ಈ ವಿಧಾನದಿಂದ ಟೋಕ್ರೆ ಕೋಳಿ ಜನತೆಯ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಸ್ಥಾನಮಾನದ ಏರಿಳಿತಗಳನ್ನು ಗುರುತಿಸಲು ಇದರಿಂದ ಸಾಧ್ಯ. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಅಂಕಿ ಸಂಖ್ಯೆಗಳನ್ನು ವರ್ಗೀಕರಿಸಿ ಹಲವಾರು ಕೋಷ್ಟಕಗಳನ್ನು

ಗಣಕಯಂತ್ರದ ಸಹಾಯದಿಂದ ತಯಾರಿಸಲಾಗಿದೆ. ಈ ಸಮುದಾಯದಲ್ಲಿನ ಬದಲಾವಣೆಗಳನ್ನು, ಪರಿಳಿತಗಳನ್ನು ಅರಿಯಲು ಈ ವಿಧಾನವನ್ನು ಅನುಸರಿಸಲಾಗಿದೆ.

**೮.೪. ವಿಷಯ ಅಧ್ಯಯನ ವಿಧಾನ :** ಟೋಕ್ರೆ ಕೋಳಿ ಸಮುದಾಯದವರ ಸಮಗ್ರ ವಿಷಯನ್ನು ಅರಿಯಲು ಹಲವಾರು ಪುಸ್ತಕಗಳನ್ನು, ಲೇಖನಗಳನ್ನು ಪೌರಾಣಿಕ ವಿಷಯವನ್ನು ಅರಿಯಲು ಈ ವಿಧಾನ ಸಹಾಯಕವಾಗಿವೆ. ಹಾಗೆಯೇ ಅನುಭವುಳ್ಳ ವ್ಯಕ್ತಿಗಳನ್ನು ಭೇಟಿಮಾಡಿ ಅವರೊಂದಿಗೆ ಚರ್ಚಿಸಿ ವಿಷಯವನ್ನು ಸಮಗ್ರವಾಗಿ ಸಂಗ್ರಹಿಸಲಾಗಿದೆ. ಮೂಲದ ಬಗ್ಗೆಯಾಗಲಿ, ಬೇಡಗುಗಳ ಬಗ್ಗೆಯಾಗಲಿ, ಹಬ್ಬಹರಿದಿನಗಳನ್ನು ಕುರಿತು, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ ವಿಷಯವನ್ನು ಅರಿಯಲು ಈ ವಿಧಾನವನ್ನು ಅನುಸರಿಸಲಾಗಿದೆ. ಜಿಲ್ಲೆಯ ಐದು ತಾಲೂಕುಗಳಲ್ಲಿ ಹಲವಾರು ಸಂಪನ್ಮೂಲ ವ್ಯಕ್ತಿಗಳನ್ನು ಭೇಟಿಮಾಡಿ ವಿಷಯವನ್ನು ಸಂಗ್ರಹಿಸಲು ಈ ವಿಧಾನವನ್ನು ಬಳಸಲಾಗಿದೆ.

**೮.೫. ಸಹಭಾಗಿತ್ವ :** ಈ ವಿಧಾನವನ್ನು ಬೀದರ ಜಿಲ್ಲೆಯ ಟೋಕ್ರೆ ಕೋಳಿ ಸಮುದಾಯದಲ್ಲಿ ನಡೆಯುವಂತಹ ಹಬ್ಬಗಳು, ಜನನದಿಂದ ಮರಣದವರೆಗಿನ ಸಂಸ್ಕಾರಗಳು, ಸಂಪ್ರದಾಯ, ನಂಬಿಕೆ, ಆಚರಣೆ ಮೊದಲಾದ ವಿಷಯಗಳನ್ನು ಅರಿತುಕೊಳ್ಳಲು ಸಹಭಾಗಿತ್ವ ವಿಧಾನ ಬಳಸಲಾಯಿತು. ಮೊದ ಮೊದಲು ಜನರಿಗೆ ಭೇಟಿ ಮಾಡಿದಾಗ ತಮ್ಮ ಸಂಸ್ಕೃತಿ ಸಂಪ್ರದಾಯ ಮೊದಲಾದ ವಿಷಯಗಳ ಬಗ್ಗೆ ಸಂಪೂರ್ಣ ವಿಷಯವನ್ನು ನೀಡಲಿಲ್ಲ. ಪದೆ ಪದೆ ಭೇಟಿಮಾಡಿ ನನ್ನ ವಿಷಯದ ಬಗ್ಗೆ ವಿವರಣೆ ನೀಡಿದಾಗ ತಮ್ಮ ಸಮುದಾಯದ ಬಗ್ಗೆ ಅಧ್ಯಯನ ಮಾಡಲಾಗುತ್ತಿದೆ. ಇದರಿಂದ ನಿಮಗೆ ಯಾವ ಹಾನಿಯಾಗುವುದಿಲ್ಲವೆಂದು ಮನವರಿಕೆ ಮಾಡಿಕೊಟ್ಟಾಗ, ವಿಷಯಗಳನ್ನು ಕುರಿತು ಪೂರ್ಣ ವಿವರಗಳನ್ನು ನೀಡಲು ಸಹಕರಿಸಿದರು.

ಹಾಗೆ ಅವರೊಡನೆ ಕೆಲವು ದಿವಸಗಳನ್ನು ಉಳಿದುಕೊಂಡು ಕಾರ್ಯನಿರ್ವಹಿಸುತ್ತಿರುವಾಗ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಯಿತು. ಕೆಲವು ವಿಶೇಷ ಸಂದರ್ಭದಲ್ಲಿ ಎಂದರೆ ತೊಟ್ಟಿಲು, ಸೋಬಾನ ಮೊದಲಾದ ಕಾರ್ಯಗಳಲ್ಲಿಯ ಹಾಡುಗಳನ್ನು ಧ್ವನಿಮುದ್ರಣ ಮಾಡಿಕೊಳ್ಳಲಾಯಿತು.

**೮.೬. ಅವಲೋಕನ ವಿಧಾನ :** ಕ್ಷೇತ್ರಕಾರ್ಯದಲ್ಲಿ ಮಾಹಿತಿಯನ್ನು ಸಂಗ್ರಹಿಸಲು ಅವಲೋಕನ ವಿಧಾನದ ಪಾತ್ರವು ಮಹತ್ವದಾಗಿರುವುದು. ಈ ವಿಧಾನದಿಂದ ಜಿಲ್ಲೆಯ ಐದು ತಾಲೂಕಗಳಲ್ಲಿ ಹಲವಾರು ಜನರನ್ನು ಭೇಟಿ ಮಾಡಿ ಅವರ ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರ, ಶೈಕ್ಷಣಿಕ ಸ್ಥಿತಿಗತಿಗಳನ್ನು, ಸಾಮಾಜಿಕ ಸ್ಥಾನಮಾನಗಳನ್ನು, ಮೂಢನಂಬಿಕೆ, ರಾಜಕೀಯದಲ್ಲಿ ಹಿಂಬಿಳುವಿಕೆಯ ಮೊದಲಾದ ಅಂಶಗಳನ್ನು ಜನರೊಡನೆಯಿದ್ದು ಅವಲೋಕಿಸುವುದರ ಮೂಲಕ ವಿಷಯವನ್ನು ಸಂಗ್ರಹಿಸಲಾಗಿದೆ.

**೮.೭. ಪ್ರಶ್ನಾವಳಿ ವಿಧಾನ :** ಈ ವಿಧಾನದ ಅಡಿಯಲ್ಲಿ ಪ್ರಮುಖ ೧೫೦ ಪ್ರಶ್ನೆಗಳೊಂದಿದೆ ಮೊದಲಾದ ಉಪ ಪ್ರಶ್ನೆಗಳನ್ನು ವಿಷಯಕ್ಕೆ ತಕ್ಕಂತೆ ವೈಜ್ಞಾನಿಕವಾಗಿ ತಯಾರಿಸಲಾಗಿದ್ದು ಪ್ರತಿ ತಾಲೂಕಿನಲ್ಲಿ ೩೦ ಗ್ರಾಮಗಳಂತೆ ಒಟ್ಟು ೧೫೦ ಗ್ರಾಮಗಳ ಟೋಕ್ರೆ ಕೋಳಿ ಬುಡಕಟ್ಟಿನ ಕುಟುಂಬಗಳನ್ನು ಸಮೀಕ್ಷಿಸಿ ಮಾಹಿತಿ ಸಂಗ್ರಹಿಸಲಾಯಿತು.

**೮.೮. ಸಂದರ್ಶನ ವಿಧಾನ :** ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಸಂದರ್ಶನ ನಡೆಸಿ ಮಾಹಿತಿ ಸಂಗ್ರಹಿಸಲಾಗಿದೆ. ಈ ಜನರ ನಡೆ ನುಡಿ, ಆಚಾರ ವಿಚಾರ, ಸಂಸ್ಕಾರ, ಸಂಸ್ಕೃತಿ, ನಂಬಿಕೆ ಮೊದಲಾದ ವಿಷಯಗಳನ್ನು ಅರಿಯಲು ಈ ವಿಧಾನ ಅಳವಡಿಸಿಕೊಳ್ಳಲಾಗಿದೆ. ಈ ವಿಧಾನದಲ್ಲಿ ಹೆಚ್ಚು ಅನುಭವವುಳ್ಳಂತಹ ಹಿರಿಯ ಹೆಂಗಸರಿಗೆ, ಗಂಡಸರಿಗೆ ಆಧುನಿಕರಣಕ್ಕೆ ಒಳಗಾದಂತಹ ಯುವಕ, ಯುವತಿಯರಿಗೆ ಸಂದರ್ಶನ ಮಾಡಲಾಗಿದೆ. ಹಾಗೆಯೇ ರಾಜಕೀಯದಲ್ಲಿ ಭಾಗವಹಿಸಿದವರಿಗೆ, ಅಕ್ಷರಸ್ಥರಿಗೆ, ಸರಕಾರಿ ನೌಕರದಾರರಿಗೆ ಪ್ರಶ್ನೆಗಳನ್ನು ಕೇಳುವುದರ ಮೂಲಕ ವಿಷಯವನ್ನು ಹೊರಹಾಕಲು ಪ್ರಯತ್ನಿಸಲಾಗಿದೆ.

**೯. ಕ್ಷೇತ್ರಾನುಭಾವ :** ಕ್ಷೇತ್ರಕಾರ್ಯಕ್ಕಾಗಿ ಪ್ರಶ್ನಾವಳಿಯನ್ನು ತಯಾರಿಸಿ ಕ್ಷೇತ್ರಕಾರ್ಯ ಮಾಡಲು ಪ್ರಾರಂಭಿಸಿದಾಗ ಹಲವಾರು ಅಡೆ ತಡೆಗಳು, ಅಡ್ಡಿ ಆತಂಕಗಳು ಎದುರಾದವು. ಇದಕ್ಕೆ ಕಾರಣ ಈ ಬುಡಕಟ್ಟಿನ ಹೆಚ್ಚು ಜನರು ಅನಕ್ಷರಸ್ಥರು, ಸಂಪ್ರದಾಯವಾದಿಗಳು, ಸಂಸ್ಕೃತಿನಿಷ್ಟರಾಗಿದ್ದರಿಂದ ಹೊರಗಿನ ಜನರನ್ನು ಸರಳವಾಗಿ ನಂಬುವುದಿಲ್ಲ. ಆದ್ದರಿಂದ ಅವರನ್ನು ಮನವಲಿಸಿಬೇಕಾದರೆ ಅವರಿಗೆ ಪದೆ ಪದೇ ಭೇಟಿ ನೀಡಿ ಛಾಯಾಚಿತ್ರಗಳನ್ನು ತೆಗೆದುಕೊಂಡು, ನನ್ನ ವಿಷಯದ ಬಗ್ಗೆ ಸರಿಯಾದ ಮಾಹಿತಿ ನೀಡಿದ ಮೇಲೆ ನನ್ನನ್ನು ನಂಬುವಂತಾದರು.

ಪ್ರಶ್ನಾವಳಿಯಲ್ಲಿ ಟೋಕ್ರೆ ಕೋಳಿ ಬುಡಕಟ್ಟಿನವರ ಮನೆದೇವರು, ಬೆಡಗು, ಕಸುಬು, ಕೃಷಿಯಲ್ಲಿ ಅಳವಡಿಸಿಕೊಂಡ ಭೂಮಿ, ಪಶುಸಂಪತ್ತು, ಮನೆಯ ಮಾದರಿ, ಶೈಕ್ಷಣಿಕ ಅರ್ಹತೆ, ಕುಟುಂಬದ ಸದಸ್ಯರ ಸಂಖ್ಯೆ, ವಯಸ್ಸು ಇತರ ಸೌಲಭ್ಯಗಳನ್ನು ಒಳಗೊಂಡಿದ ಪ್ರಶ್ನೆಗಳನ್ನು ಒಂದೊಂದಾಗಿ ಕೇಳಿ ಉತ್ತರ ಪಡೆಯಬೇಕಾದರೆ ಸಾಹಸದ ಕೆಲಸವೆ ಆಗಿತ್ತು. ಮನೆದೇವರು, ಬೇಡಗು, ಕೃಷಿ ಭೂಮಿ, ಪಶು ಸಂಪತ್ತು ಕೇಳಿದಾಗಲೆಲ್ಲ ಸರಿಯಾದ ಉತ್ತರ ನೀಡಲು ಹಿಂಜೆರೆಯುತ್ತಿದ್ದರು. ಕೆಲವೊಂದು ಸಂದರ್ಭಗಳಲ್ಲಿ ಜನರು ನಮಗೆ ಊಟಕ್ಕೆ ಸರಿಯಾಗಿ ದೊರೆಯದಂಥ ಸಂದರ್ಭವಿದೆ. ಅಂಥದರಲ್ಲಿ ಭೂಮಿ, ಪಶುಸಂಪತ್ತು ಮೊದಲಾದವುಗಳನ್ನು ಕೇಳುತ್ತಿದ್ದಿರಲ್ಲಾ, ಎಂದು ಕೋಪಿಸಿಕೊಳ್ಳುತ್ತಿದ್ದರು. ಅದಕ್ಕೆ ನಿಜಾಂಶ ಅರಿತು ಅವರನ್ನು ಸಮಾಧಾನ ಹೇಳಿ ನಂತರ ಉತ್ತರ ಪಡೆದುಕೊಳ್ಳಲಾಯಿತ್ತು.

ಬೀದರ ತಾಲೂಕಿನ ಎಂ.ಮರ್ಜಾಪೂರ ಗ್ರಾಮಕ್ಕೆ ಕ್ಷೇತ್ರಕಾರ್ಯಕ್ಕೆ ಹೋದಾಗ ಟೋಕ್ರೆ ಕೋಳಿಯವರು ಪ್ರಶ್ನೆಗಳಿಗೆ ಉತ್ತರ ನೀಡದೆ ವಾಪಸ್ ಕಳಿಸಿದರು. ಮಾರನೆಯ ದಿವಸ ಪರಿಚಯ ಇದ್ದವರ ಜೊತೆಗೆ ಹೋಗಿ ಕ್ಷೇತ್ರಕಾರ್ಯಕ್ಕೆ ಅಣಿಯಾದಾಗ, ಅವರು ನಿಮ್ಮ ಸಮುದಾಯವನ್ನು ಕುರಿತು ಮಾಹಿತಿ ಸಂಗ್ರಹಿಸುತ್ತಿದ್ದಾರೆ. ಒಂದು ವೇಳೆ ನೀವು ನಿಮ್ಮ ಮಾಹಿತಿ ನೀಡದಿದ್ದರೆ ನಿಮ್ಮ ಜನಸಂಖ್ಯೆ ಕಡಿಮೆಯಾಗುವ ಸಂಭವ ಇರುವದೆಂದು ಹೇಳಿದಾಗ, ವಾಲ್ಮೀಕಿಯ ದೇವಸ್ಥಾನದಲ್ಲಿ ಕೂಡಿಸಿ ಎಲ್ಲರನ್ನು ಅಲ್ಲಿಯೇ ಕರೆದು ೨೨ ಮನೆಗಳ ಮಾಹಿತಿ ಒದಗಿಸಿದರು.

ಅದೇ ರೀತಿ ಸಿದ್ದೇಶ್ವರ ಗ್ರಾಮಕ್ಕೆ ಕ್ಷೇತ್ರಕಾರ್ಯಕ್ಕೆ ಹೋದಾಗ ನಮ್ಮ ಬಗ್ಗೆ ಮಾಹಿತಿ ಪಡೆದುಕೊಂಡು ಹೋಗುತ್ತಿದ್ದಿರಾ. ನಿಮ್ಮ ಹಾಗೆ ಹಲವಾರು ಜನರು ಬಂದು ಮಾಹಿತಿ ಪಡೆದು ಹೋಗುವರು. ಅದರಿಂದ

ನಮಗೆ ಆಗುವ ಲಾಭವೇನು? ನಾವು ವಾಲ್ಮೀಕಿ ದೇವಸ್ಥಾನ ಕಟ್ಟಿಸಿದ್ದೇವೆ. ನೀವು ವಾಲ್ಮೀಕಿ ಮೂರ್ತಿ ತಂದು ಕೊಡಿಸುತ್ತಿರಾ ಎಂದು ಕೆಲವರು ಕೇಳಿದರು.

ಅದೇ ರೀತಿ ಹುಮನಾಬಾದ ತಾಲೂಕಿನ ಹೊಸಳ್ಳಿ ಗ್ರಾಮಕ್ಕೆ ಕ್ಷೇತ್ರಕಾರ್ಯಕ್ಕೆ ಹೋದಾಗ ನಿಮಗೆ ಉತ್ತರ ನೀಡಿದರೆ ನಮಗೆ ಸಿಗುವ ಲಾಭವೇನು? ಸರಕಾರದಿಂದ ಯಾವುದಾದರೂ ಸೌಲಭ್ಯವನ್ನು ದೊರಕಿಸಿ ಕೊಡುತ್ತಿರಾ ಎಂದು ಮೊದಲಾದ ಪ್ರಶ್ನೆಗಳನ್ನು ಕೇಳುತ್ತಿದ್ದರು. ಅದಕ್ಕೆ ನಾನು (ಸಂಶೋಧಕಿ) ಟೋಕ್ರೆ ಕೋಳಿ ಸಮುದಾಯದವರ ಸ್ಥಿತಿಗತಿಯ ಬಗ್ಗೆ ಸರಕಾರಕ್ಕೆ, ಸಮಾಜಕ್ಕೆ ತಿಳಿಸಿದರೆ ಯಾವುದಾದರೂ ಸೌಲಭ್ಯ ದೊರೆಯುವ ಸಾಧ್ಯತೆಯಿರುತ್ತದೆ ಎಂದಾಗ ಅವರು ಸಮಾಧಾನದಿಂದ ಪ್ರಶ್ನೆಗಳಿಗೆ ಉತ್ತರ ನೀಡಿದರು.

ಬುಧೇರಾ ಗ್ರಾಮಕ್ಕೆ ಸಂದರ್ಶನಕ್ಕೆ ಹೋದಾಗ ಹೆಣ್ಣು ಮಕ್ಕಳನ್ನು ಕೂಡಿಸಿಕೊಂಡು (ಸಮೂಹ) ಸಂದರ್ಶನ ಮಾಡುತ್ತಿದ್ದಾಗ ಹೊರಗಿನಿಂದ ಬಂದ ಮನೆಯ ವ್ಯಕ್ತಿ ನಮ್ಮ ಮನೆಯಲ್ಲಿ ಸಂದರ್ಶನ ನಡೆಸುವುದು ಬೇಡ ಬೇರೆ ಕಡೆಗೆ ಹೋಗಿ ಎಂದರು. ನಿಮ್ಮ ಸಮುದಾಯದ ಮಾಹಿತಿಯನ್ನು ಸಂಗ್ರಹಿಸಿ ಅದರ ದಾಖಲೆಯನ್ನು ನಿರ್ಮಿಸುತ್ತಿದ್ದಾಗ ನೀವು ಹೀಗೆ ಹೇಳುವುದು ಸರಿಯೇ ಎಂದು ಸಮಾಧಾನದಿಂದ ಕೇಳಿದಾಗ. ಅದಕ್ಕೆ ಅವರು ನಾನು ಯಾವುದೋ ವಿಷಯ ಕುರಿತು ಕೇಳುತ್ತಿದ್ದಿರೆಂದು ಹಾಗೆ ಹೇಳಿದೆ. ನಿಮ್ಮಂಥ ಎಷ್ಟೊ ಜನ ಹೀಗೆ ಬರೆದುಕೊಂಡು ಹೋಗುತ್ತಿದ್ದಾರೆ. ಅದರಿಂದ ನಮಗೆ ಯಾವ ಲಾಭವಿಲ್ಲ? ಎಂದುಕೊಂಡು ಆ ರೀತಿ ಮಾತಾಡಿದೆ. ಅದಕ್ಕೆ ತಪ್ಪು ತಿಳಿದುಕೊಳ್ಳಬೇಡಿ ನಮ್ಮ ಸಮುದಾಯದವರು ಮಾಡುವ ಕಾರ್ಯ ನೀವು ಮಾಡುತ್ತಿದ್ದಿರಿ ಎಂದು ಸಂತೋಷ ವ್ಯಕ್ತಪಡಿಸಿದರು. ನಮ್ಮ ಜನರಲ್ಲಿ ಒಗ್ಗಟ್ಟು ಕಡಿಮೆ ಮುಂದೆ ಸಾಗುವರನ್ನು ಹಿಂದೆ ಜಗ್ಗುವಂಥ ಜನರೆ ಹೆಚ್ಚು ಇದ್ದಾರೆಂದು ಅವರ ಅರಿವಿಗೆ ನಿಲುಕಿದ ಮಾಹಿತಿಯನ್ನು ನೀಡಿದರು. ಕೆಲವಾರು ಕಡೆಗೆ ಕ್ಷೇತ್ರಕಾರ್ಯಕ್ಕೆ ಹೋದಾಗ ಹೊಟ್ಟೆಗೆ ಊಟ ದೊರೆಯದೆ ಪಡಬಾರದ ಕಷ್ಟ ಪಡಬೇಕಾಯಿತು. ಸಂದರ್ಶನಕ್ಕೆ ಬರುತ್ತಿವೆಂದು ತಿಳಿಸಿದ್ದರೂ ಸಹ ಮನೆಯಲ್ಲಿ ಇರಲಾರದೆ ಹೊಲದ ಕೆಲಸಕ್ಕೆ, ಕೂಲಿಗೆ ಹೋಗುತ್ತಿದ್ದರು. ಅಂಥ ಸಂದರ್ಭದಲ್ಲಿ ವಾಪಸ್ ಬಂದು ಮಾರನೆಯ ದಿವಸ ಮತ್ತೇ ಹೋಗಿ ಸಂದರ್ಶನ ಮಾಡಲಾಗುತ್ತಿತ್ತು. ಛಾಯಾಚಿತ್ರಗಳನ್ನು ತೆಗೆದುಕೊಂಡಾಗ, ಧ್ವನಿಮುದ್ರಣ ಮಾಡುತ್ತಿರುವಾಗ ಸಂತೋಷದಿಂದ ತಮ್ಮ ವಿಷಯ ತಿಳಿಸುತ್ತಿದ್ದರು.

ಹೀಗೆ ಹತ್ತು ಹಲವಾರು ಜನರನ್ನು ಸಂದರ್ಶನ ಮಾಡಿ, ಆತ್ಮೀಯತೆಯಿಂದ ಜನರ ಮನವನ್ನು ಒಲಿಸಿಕೊಂಡು ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ ಅಂಶಗಳನ್ನು ಕುರಿತು ಸಂದರ್ಶನದ ಮೂಲಕ, ಕ್ಷೇತ್ರಕಾರ್ಯದಲ್ಲಿ ಮಾಹಿತಿಯನ್ನು ಸಂಗ್ರಹಿಸಿದೆ. ಸಮೀಕ್ಷೆ ಕಾರ್ಯ ಸಮಾಧಾನ ತಂದಿದೆ.

ಸ್ನೇಹಿತರೆಲ್ಲರು ಬುಡಕಟ್ಟು ಅಧ್ಯಯನ ಮಾಡುವುದು ಹಿಂದುಳಿದ ಜನರನ್ನು ಕುರಿತದಾಗಿರುತ್ತದೆ. ಮುಂದುವರಿದ ವಿಷಯ ಕುರಿತು ಅಧ್ಯಯನ ಮಾಡಿದರೆ ಅದಕ್ಕೊಂದು ಬೆಲೆ ಎಂದು ಎಷ್ಟೋ ಜನರು ಹೇಳಿದ್ದರು. ಹಾಗೆಯೇ ಕ್ಷೇತ್ರಕಾರ್ಯಯುಳ್ಳ ಸಂಶೋಧನೆ ಹೆಣ್ಣು ಮಕ್ಕಳಿಗೆ ಅಸಾಧ್ಯದ ಮಾತಾಗಿದೆ. ಇದರಲ್ಲಿ ಹಲವಾರು ಸಮಸ್ಯೆಗಳು ಎದುರಿಸಬೇಕಾಗುವುದು, ಪಡಬಾರದ ಕಷ್ಟ ಪಡಬೇಕಾಗುತ್ತದೆ. ಆದ್ದರಿಂದ ಈ ವಿಷಯ

ತೆಗೆದುಕೊಳ್ಳಬಾರದಾಗಿತ್ತೆಂದು ಹಲವಾರು ಜನ ಹಲವಾರು ರೀತಿಯಲ್ಲಿ ಮಾತಾಡಿದರು. ಕ್ಷೇತ್ರಕಾರ್ಯಕ್ಕೆ ಹೋದಾಗ ನನಗೂ ಸಹ ಸಮಸ್ಯೆಗಳು ಎದುರಾದಾಗ ಯಾಕಾದರೂ ತೆಗೆದುಕೊಂಡೆ ಈ ವಿಷಯ ಅಂತ ಕೆಲವಾರು ಸಲ ಎನಿಸಿತು. ಮತ್ತೇ ಕೆಲವೊಮ್ಮೆ ತೆಗೆದುಕೊಂಡ ಮೇಲೆ ಮಾಡಿ ಮುಗಿಸಿದರೆ ಅದಕ್ಕೊಂದು ಬೆಲೆ ಎಂದು ತಿಳಿದು ಧೈರ್ಯದಿಂದ ಕ್ಷೇತ್ರಕಾರ್ಯ, ಸಮೀಕ್ಷೆ ಮೊದಲಾದವುಗಳನ್ನು ಮುಂದುವರೆಸಿಕೊಂಡು ಕಾರ್ಯವನ್ನು ಮುಗಿಸಿದೆ. ಮೊದಲು ಕ್ಷೇತ್ರಕಾರ್ಯಕ್ಕೆ ಹೋದಾಗಿನ ಸಮಸ್ಯೆಗಳ ಸುರಿಮಳೆ ಅನಂತರದಲ್ಲಿ ಕಡಿಮೆಯಾದವು. ಜನರು ಸಹ ಸಹಕಾರ ನೀಡಿದರು. ಹೀಗಾಗಿ ಎಲ್ಲರ ಸಹಕಾರದಿಂದ ನನ್ನ ಕಾರ್ಯ ಮುಗಿಯುತ್ತ ಬಂದಾಗ ಸಮಾಧಾನ ದೊರೆಯಿತು.

### ಆಧಾರ ಗ್ರಂಥಗಳು

೧. ಕಲಬುರ್ಗಿ,ಎಂ.ಎಂ., ೧೯೯೨, *ಕನ್ನಡ ಸಂಶೋಧನಶಾಸ್ತ್ರ* (ಧಾರವಾಡ: ಸೌಜನ್ಯ ಪ್ರಕಾಶನ)

೨. ಕುಲಕರ್ಣಿ,ಎಲ್.ಆರ್(ಲೇ).,೧೯೯೭, 'ಬೀದರ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ', ಹೆಬ್ಬಾಳೆ ಜಗನಾಥ (ಪ್ರಸಂ)., *ಬೀದರ ಜಿಲ್ಲಾ ದರ್ಶನ* (ಬೀದರ:ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು)ಪು೧.

೩. ಚಿದಾನಂದಮೂರ್ತಿ,ಎಂ.,೧೯೮೪,*ಸಂಶೋಧನೆ* (ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು)

೪. ಮೈತ್ರಿ,ಕೆ.ಎಂ(ಲೇ)., ೧೯೯೭, 'ಬೀದರ ಜಿಲ್ಲೆಯ ಬುಡಕಟ್ಟುಗಳು' ಹೆಬ್ಬಾಳೆ ಜಗನಾಥ (ಪ್ರಸಂ) *ಬೀದರ ಜಿಲ್ಲಾ ದರ್ಶನ* (ಬೀದರ: ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು)ಪು೧೨೪.

೫. ಸಂಗಮೇಶ ಸೌದತ್ತಿಮಠ., ೧೯೯೫, *ಸಾಹಿತ್ಯ ಸಂಶೋಧನಾ ಮಾರ್ಗ* (ಗುಲ್ಬರ್ಗಾ:ರೂಪರಶ್ಮೀ ಪ್ರಕಾಶನ)

೬. ಸಬರದ,ಬಸವರಾಜ.,೧೯೮೨, *ಬೀದರ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ* (ಧಾರವಾಡ:ಕರ್ನಾಟಕ ವಿಶ್ವವಿದ್ಯಾಲಯ)ಪುxii.

೭. ಶಂಕರನಾರಾಯಣರಾವ್,ಎಸ್.ಪಿ(ಲ).,೧೯೭೪, *ಸಂಸ್ಕೃತಿಯ ರೂಪಿಕೆಗಳು* (ಬೆಂಗಳೂರು:ಕೃಷಿ ವಿಶ್ವವಿದ್ಯಾಲಯ)ಪು೧೬,೧೯.

೮. ಶಿರೂರ,ಬಿ.ವಿ.,೧೯೯೨, *ಸಂಶೋಧನೆ ಸ್ವರೂಪ* (ಹುಬ್ಬಳ್ಳಿ:ಅನ್ನಪೂರ್ಣ ಪ್ರಕಾಶನ)

9. Abhishankar, K. (ed)., 1977, Karnataka State Gazetter, Bidar Distrect, (Bangalore : Government of Karnataka).

ಅಧ್ಯಾಯ ೨

# ಟೋಕ್ರೆ ಕೋಳಿ ಬುಡಕಟ್ಟಿನ ಮೂಲ ಮತ್ತು ಪ್ರಸಾರ

೧. ಬುಡಕಟ್ಟು

೨. ಬುಡಕಟ್ಟು ಕುರಿತ ವ್ಯಾಖ್ಯೆಗಳು

೩. ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ

೪. ಕರ್ನಾಟಕದಲ್ಲಿ ಬುಡಕಟ್ಟುಗಳ ಅಧ್ಯಯನ

೫. ಬೀದರ ಜಿಲ್ಲೆಯಲ್ಲಿ ಬುಡಕಟ್ಟುಗಳ ಅಧ್ಯಯನ

೬. ಟೋಕ್ರೆ ಕೋಳಿ ಬುಡಕಟ್ಟಿನ ಹುಟ್ಟಿನ ಕಥನಗಳು

೭. ಟೋಕ್ರೆ ಕೋಳಿ ಪದ ನಿಷ್ಪತ್ತಿ ಮತ್ತು ಅರ್ಥ

೮. ಟೋಕ್ರೆ ಕೋಳಿ ಪದದ ಅರ್ಥ ವಿವರಣೆ

೯. ಕೋಲ್ ಜನಾಂಗದ ಮೂಲ

೧೦. ಕೋಲ್‌ರ ಮೂಲದ ಬಗ್ಗೆ ಇರುವ ಹೇಳಿಕೆಗಳು ಮತ್ತು ಪ್ರಸಾರ

೧೧. ಇತಿಹಾಸದಲ್ಲಿ ಕೋಳಿಗಳು

೧೨. ಟೋಕ್ರೆ ಕೋಳಿ ಸಮುದಾಯದ ಚಾರಿತ್ರಿಕ ಮಹಾನ್ ವ್ಯಕ್ತಿಗಳು

೧೩. ಟೋಕ್ರೆ ಕೋಳಿಯವರು ಬುಡಕಟ್ಟು ಪಟ್ಟಿಗೆ ಸೇರಿದ್ದು

೧೪. ಕರ್ನಾಟಕದಲ್ಲಿ ಕೋಳಿ ಜನಾಂಗದ ವಿವಿಧ ಹೆಸರುಗಳು

೧೫. ಕರ್ನಾಟಕಕ್ಕೆ ಕೋಳಿ ಜನಾಂಗ ಬಂದದ್ದು

೧೬. ಕೋಳಿ ಜನಾಂಗ ಕುರಿತ ದಾಖಲೆಗಳು

೧೭. ಉತ್ತರ ಕರ್ನಾಟಕದಲ್ಲಿ ಕೋಳಿ ಜನರು

೧೮. ಬೀದರ ಜಿಲ್ಲೆಯಲ್ಲಿ ಕೋಳಿ ಬುಡಕಟ್ಟು

# ಅಧ್ಯಾಯ ೨

# ಟೋಕ್ರೆ ಕೋಳಿ ಬುಡಕಟ್ಟಿನ ಮೂಲ ಮತ್ತು ಪ್ರಸಾರ

೧. ಬುಡಕಟ್ಟು : ಟೋಕ್ರೆ ಕೋಳಿ ಬುಡಕಟ್ಟಿನ ಅರ್ಥ, ಮೂಲ ಮತ್ತು ಪ್ರಸಾರವನ್ನು ಅರಿಯುವ ಮುನ್ನ ಬುಡಕಟ್ಟು ಎಂದರೇನು ಎಂಬುದನ್ನು ಅರಿತುಕೊಳ್ಳುವುದು ಉಚಿತ. ಬುಡಕಟ್ಟು ಎಂಬ ಪದವು ಆಂಗ್ಲ ಭಾಷೆಯ ಟ್ರೈಬ್ (Tribe) ಎಂಬ ಪದಕ್ಕೆ ಸಮಾನಾರ್ಥಕ ಪದವೆಂದು ಬಳಸಲಾಗುತ್ತಿದೆ. ಇದು ಲ್ಯಾಟಿನ ಭಾಷೆಯ ಟ್ರೈಬಸ್ ಎಂಬ ಪದದಿಂದ ಉಗಮಗೊಂಡಿದೆ. ಕಿಟ್ಟೆಲರು ತಮ್ಮ ಅರ್ಥಕೋಶವಾದ ಕನ್ನಡ-ಕನ್ನಡ ನಿಘಂಟಿನಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ ಕುಟುಂಬ, ಕುಲ, ವಂಶ, ಮನೆತನ ಎಂಬ ಅರ್ಥಗಳನ್ನು ನೀಡಿದ್ದಾರೆ. ಬುಡಕಟ್ಟುಗಳಿಗೆ ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜಾತಿ, ಜನಜಾತಿ ಎಂಬ ಹೆಸರುಗಳಿಂದಲೂ ಕರೆಯಲಾಗುತ್ತಿದೆ.

೨. ಬುಡಕಟ್ಟು ಕುರಿತ ವ್ಯಾಖ್ಯೆಗಳು

೧. ಒಂದೇ ತರನಾದ ಭಾಷೆಯನ್ನು ಮಾತನಾಡುವ, ಒಂದೇ ರೀತಿಯ ಸಾಮಾಜಿಕ ರಚನೆಯ ಕಾಯ್ದೆಗಳನ್ನು ಹೊಂದಿರುವ ಮತ್ತು ಒಂದು ಸಾರ್ವತ್ರಿಕ ಉದ್ದೇಶಕ್ಕಾಗಿ ಕೆಲಸ ಮಾಡುವ ಜನಾಂಗವೇ ಬುಡಕಟ್ಟು ಎಂದು ಹೇಳಲಾಗಿದೆ(New Encyclopaedia of Britanica(Vol.x,P.115).

೨. ಇಂಪೀರಿಯಲ್ ಗೆಝೆಟಿಯರ್‌ನ ಪ್ರಕಾರ "ಒಂದೇ ಸಾಮಾನ್ಯ ಹೆಸರುಳ್ಳ, ಒಂದೇ ಸಾಮಾನ್ಯ ಭಾಷೆಯನ್ನಾಡುವ, ಒಂದೇ ಸಾಮಾನ್ಯ ಭೂ ಪ್ರದೇಶದಲ್ಲಿ ನೆಲೆಸಿರುವ ಅಥವಾ ನೆಲೆಸಿರುವಿಕೆಯನ್ನು ಒಪ್ಪಿಕೊಳ್ಳುವ ಕುಟುಂಬಗಳ ಕೂಟವೇ ಬುಡಕಟ್ಟು" ಎಂದು ಹೇಳಲಾಗಿದೆ.

೩. ಲಂಡನ್ನಿನ ರಾಯಲ್ ಆಂತ್ರೋಪಲಾಜಿಕಲ್ ಇನ್‌ಸ್ಟಿಟ್ಯೂಟ್‌ನ ಹೇಳಿಕೆಯಂತೆ "ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂಥ ರಾಜಕೀಯ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು" ಎಂದಿದೆ.

೪. ಬುಡಕಟ್ಟು ಎಂಬುದರ ಬಗ್ಗೆ ಮಜುಂದಾರ್‌ರವರ ಅಭಿಪ್ರಾಯ ಹೀಗಿದೆ. "ಪ್ರಾದೇಶಿಕ ಸಹ ಸಂಬಂಧ ಪಡೆದಿರುವ ಒಳಬಾಂಧವ್ಯ ವಿವಾಹ ಸಂಬಂಧವಿರುವ, ಕರ್ತವ್ಯಗಳ ವಿಶೇಷಿಕರಣವಿರದ, ಬುಡಕಟ್ಟಿನ ಅಧಿಕಾರಿಗಳಿಂದ ಇದು ಅನುವಂಶಿಕವಾಗಿರಬಹುದು ಅಥವಾ ಇಲ್ಲದಿರಬಹುದು ಆಳ್ವಿಕೆಗೊಳಗಾಗಿರುವ, ಭಾಷೆ ಅಥವಾ ಉಪಭಾಷೆಯಿಂದ ಒಂದಾಗಿರುವ ಬುಡಕಟ್ಟುಗಳು ಅಥವಾ ಜಾತಿಗಳಿಂದ ಸಾಮಾಜಿಕ ಅಂತರವನ್ನು

ಗುರುತಿಸುವಂಥ ಆದರೆ ಜಾತಿ ರಚನೆಯ ಪ್ರಸಂಗದಲ್ಲಿ ಯಾವುದೇ ಕಳಂಕ ಭಾವನೆ ಹೊಂದಿರದಂಥ ಬುಡಕಟ್ಟು ಪರಂಪರೆಗಳು, ನಂಬಿಕೆಗಳು ಹಾಗೂ ಪದ್ಧತಿಗಳನ್ನು ಅನುಸರಿಸುವಂಥ; ಇತರ ಮೂಲಗಳಿಂದ ಬರುವ ಭಾವನೆಗಳನ್ನು ದೇಶಿಕರಣ ಮಾಡಿಕೊಳ್ಳುವಂಥ ಉದಾರ ಭಾವನೆಗಳನ್ನು ಹೊಂದಿರುವಂಥ, ಇವೆಲ್ಲಕ್ಕಿಂತ ಜನಾಂಗಿಕ ಹಾಗೂ ಪ್ರಾದೇಶಿಕ ಏಕರೂಪತೆಯ ಸಮರೂಪತೆಯ ಬಗ್ಗೆ ಪ್ರಜ್ಞಾವಂತವಾಗಿರುವ ಸಾಮಾಜಿಕ ಗುಂಪೇ ಬುಡಕಟ್ಟು" ಎಂದು ಹೇಳಿದ್ದಾರೆ.

೫. ಭಾರತದಲ್ಲಿ ಹಲವಾರು ಬುಡಕಟ್ಟು ಜನರು ಬೇಟೆ, ಮೀನುಗಾರಿಕೆ, ಸಣ್ಣ ಕೃಷಿಯಿಂದ ಜೀವಿಸುವರು. ಹಲವಾರು ವಿದ್ವಾಂಸರು ಇವರನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಸರ್ ಹರ್ಬರ್ಟ್ ರಿಸ್ಲೆ ಮತ್ತು ವೆರಿಯರ್ ಎಲ್ವಿನ್ ಹಾಗೂ ಠಕರ್ ಬಾಬಾ ಅವರು ಈ ಜನರನ್ನು ಆದಿವಾಸಿಗಳು ಅಥವಾ ಮೂಲನಿವಾಸಿಗಳು ಎಂದು ಕರೆದಿದ್ದಾರೆ. ಗ್ರಿಯರ್‌ಸನ್ ಅವರು ಇವರನ್ನು ಗುಡ್ಡಗಾಡು ಬುಡಕಟ್ಟು ಅಥವಾ ಪಳಗದ ಆದಿವಾಸಿಗಳು ಎಂದು ಪರಿಗಣಿಸಿದ್ದಾರೆ. ಷೂಬರ್ಟ್‌ರವರು ಸರ್ವಚೇತನಾವಾದಿಗಳು, ಧೇಶ್ ಮತ್ತು ದಾಸ್ ಅವರು ಇವರನ್ನು ದಾರಿದ್ರ್ಯದಿಂದ ಬಳಲುತ್ತಿರುವ ಮಾನವ ಜನಾಂಗ ಎಂದು ಹೆಸರಿಸಿದ್ದಾರೆ (ವಿದ್ಯಾರ್ಥಿ,ಎಲ್.ಪಿ:೧೯೮೭:೬೯).

## ೩. ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ

ಭಾರತದಲ್ಲಿ ಒಟ್ಟು ೪೭೨ ಬುಡಕಟ್ಟು ಸಮುದಾಯಗಳನ್ನು ಗುರುತಿಸಲಾಗಿದ್ದು, ೧೯೮೧ರ ಜನಗಣತಿಯ ಪ್ರಕಾರ ೫ ಕೋಟಿ ೨೦ ಲಕ್ಷ ಆದಿವಾಸಿಗಳಿದ್ದು, ಭಾರತದ ಒಟ್ಟು ಜನಸಂಖ್ಯೆಯ ಶೇಕಡ ೭ ರಷ್ಟಿದ್ದರೆ, ೧೯೯೧ರ ಜನಗಣತಿಯ ಪ್ರಕಾರ ೬೭,೭೫೮,೩೮೦ ಆದಿವಾಸಿಗಳಿದ್ದು ಒಟ್ಟು ಜನಸಂಖ್ಯೆಯ ಶೇಕಡ ೮ರಷ್ಟು ಇರುವವರು(ಮೈತ್ರಿ,ಕೆ.ಎಂ:೧೯೯೪:೧೦). ಈ ಬುಡಕಟ್ಟು ಸಮುದಾಯಗಳು ಕೆಲವು ಕಡೆಗೆ ದಟ್ಟವಾಗಿ ಮತ್ತೆ ಕೆಲವು ಕಡೆ ವಿರಳವಾಗಿ ಹರಡಿಕೊಂಡಿವೆ. ಭಾರತದಲ್ಲಿ ದಟ್ಟವಾಗಿರುವ ಬುಡಕಟ್ಟು ಪ್ರದೇಶಗಳೆಂದರೆ ಮಧ್ಯಪ್ರದೇಶ, ಗುಜರಾತ, ಬಿಹಾರ, ಒರಿಸ್ಸಾ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರ ರಾಜ್ಯಗಳು ಹಾಗೂ ಲಕ್ಷದ್ವೀಪ ಮತ್ತು ಅಂಡಮಾನ್ ನಿಕೋಬಾರ್ ದ್ವೀಪಗಳು. ಕೇರಳ, ತಮೀಳುನಾಡು ಮತ್ತು ಕರ್ನಾಟಕ ರಾಜ್ಯಗಳ ಗಡಿ ಪ್ರದೇಶಗಳಲ್ಲಿ ವಿರಳವಾಗಿ ಕಂಡು ಬರುತ್ತಾರೆ.

ಭಾರತದಲ್ಲಿ ವೇದಗಳ ಕಾಲದಲ್ಲಿ ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರವೆಂಬ ನಾಲ್ಕು ವರ್ಣಗಳ ವರ್ಣ ವ್ಯವಸ್ಥೆ ಅಸ್ತಿತ್ವದಲ್ಲಿದ್ದವು. ಆ ಕಾಲದಲ್ಲಿ ವರ್ಣ ವ್ಯವಸ್ಥೆ ಜೊತೆ ಜೊತೆಗೆ ಈ ವರ್ಣ ವ್ಯವಸ್ಥೆಗಳಿಗೆ ಸೇರದೇ ಪ್ರತ್ಯೇಕವಾಗಿರುವಂಥ ಬುಡಕಟ್ಟುಗಳು ಸಾಕಷ್ಟು ಸಂಖ್ಯೆಯಲ್ಲಿದ್ದವು. ಸಂಸ್ಕೃತಿಯ ಘಟಕಗಳಾದ ನಂಬಿಕೆ, ಕಲೆ, ಆಚರಣೆ, ಸಂಪ್ರದಾಯ ಮೊದಲಾದ ಅಂಶಗಳು ನಮ್ಮ ದೇಶದ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿವೆ. ಮೊದಮೊದಲಿಗೆ ಬುಡಕಟ್ಟು ಸಂಸ್ಕೃತಿಯನ್ನು ಅರಿಯಲು ಪ್ರಯತ್ನಿಸಿದವರು ಬ್ರಿಟಿಷರು. ಬುಡಕಟ್ಟು ಅಧ್ಯಯನಗಳ ಪ್ರಾರಂಭದ ಹಂತದಲ್ಲಿ ಬ್ರಿಟಿಷರು, ಕ್ರೈಸ್ತ ಪಾದ್ರಿಗಳು, ಹಲವಾರು ಜನ ಪ್ರವಾಸಿಗರು ಬುಡಕಟ್ಟುಗಳನ್ನು ಅರ್ಥಮಾಡಿಕೊಂಡು ಅವರ ಆಡಳಿತ, ಸಂಸ್ಕೃತಿ, ಧರ್ಮದ ಪ್ರಸಾರ ಹಾಗೂ ಭಾರತೀಯರಿಗೆ ತಮ್ಮ ಪಾಶ್ಚಾತ್ಯ ವ್ಯಕ್ತಿತ್ವ ಬಗ್ಗೆ ಮಾಹಿತಿ ನೀಡುವಂತಹ ಮೊದಲಾದ ಕಾರ್ಯಗಳಲ್ಲಿ ತೊಡಗಿದರು.

ಭಾರತದಲ್ಲಿಯ ಬುಡಕಟ್ಟು ಸಂಸ್ಕೃತಿಯ ಅಧ್ಯಯನಗಳ ಬೆಳವಣಿಗೆಯನ್ನು ಕಾಲಾನುಕ್ರಮವಾಗಿ ಮೂರು ಘಟ್ಟಗಳಲ್ಲಿ ವಿಂಗಡಿಸಲಾಗಿದೆ.

೧. ಪ್ರಾರಂಭದ ಘಟ್ಟ (೧೭೭೪-೧೯೧೯)

೨. ರಚನಾತ್ಮಕ ಘಟ್ಟ (೧೯೨೦-೧೯೪೯)

೩. ವಿಶ್ಲೇಷಣಾತ್ಮಕ ಘಟ್ಟ (೧೯೫೦-ಇಂದಿನವರೆಗೆ)

ಈ ಮೂರು ಘಟ್ಟಗಳನ್ನು ಹೇಳಿದ ಮಾತ್ರಕ್ಕೆ ಒಂದು ಘಟ್ಟ ಇನ್ನೊಂದು ಘಟ್ಟದ ಸ್ಥಾನವನ್ನು ಆಕ್ರಮಿಸಿತು ಎಂದರ್ಥವಲ್ಲ(ವಿದ್ಯಾರ್ಥಿ,ರಾಯ:೧೯೮೫:೩೮). ಅವು ತನ್ನ ಸ್ಥಾನದಲ್ಲಿದ್ದು ಕೆಲಸವನ್ನು ನಿರ್ವಹಿಸಿವೆ. ಈ ಮೇಲಿನ ಮೂರು ಘಟ್ಟಗಳಲ್ಲಿ ಜಾತಿಗಳ ಬಗ್ಗೆ ಕೋಶಗಳ ಸಂಕಲನ, ಏಕ ವಿಷಯ ಪ್ರಬಂಧ, ವಿವರಣಾತ್ಮಕ ಅಧ್ಯಯನ ಇತ್ಯಾದಿ ಬರಹಗಳು ಹೊರಬಂದವು.

'ಏಷಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್' ಎಂಬ ಸಂಸ್ಥೆಯ ಸ್ಥಾಪನೆಯೊಡನೆ (೧೭೭೪) ಭಾರತದಲ್ಲಿ ಮೊಟ್ಟಮೊದಲಿಗೆ ಬುಡಕಟ್ಟು ಅಧ್ಯಯನ ಪ್ರಾರಂಭಗೊಂಡಿತು. ಈ ಸೊಸೈಟಿಯನ್ನು ಭಾರತದಲ್ಲಿ ''ಮಾನವ ಮತ್ತು ಪ್ರಕೃತಿ''ಯ ಅಧ್ಯಯನವೆಂದು ವ್ಯಾಖ್ಯಾನಿಸಿದ ಕೀರ್ತಿ ಸರ್ ವಿಲಿಯಂ ಜೋನ್ಸ್‌ಗೆ ಸಲ್ಲುತ್ತದೆ. ಇವರು ಬುಡಕಟ್ಟುಗಳಿಗೆ ಸಂಬಂಧಿಸಿದಂತೆ ಹಲವಾರು ಸಂಶೋಧನೆಗಳು ಹಾಗೂ ಪ್ರಕಟಣೆಗಳನ್ನು ಪ್ರಾರಂಭಿಸಿದರು. ಅಂದಿನಿಂದ ಬ್ರಿಟಿಷ್ ಆಡಳಿತಗಾರರು, ಪ್ರವಾಸಿಗರು ಮತ್ತು ಮಾನವಶಾಸ್ತ್ರದಲ್ಲಿ ಆಸಕ್ತಿಯುಳ್ಳ ಕೆಲವು ವ್ಯಕ್ತಿಗಳು ಬುಡಕಟ್ಟುಗಳು ಹಾಗೂ ಗ್ರಾಮೀಣ ವರ್ಗಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ, ಅವರ ಜೀವನ ಸಂಸ್ಕೃತಿಗಳ ಬಗ್ಗೆ 'ಜರ್ನಲ್ ಆಫ್ ಏಷಿಯಾಟಿಕ್ ಸೊಸೈಟಿ' (೧೭೮೪) ಇಂಡಿಯನ್ ಆಂಟಿಕ್ವರಿ (೧೮೭೨), ಜರ್ನಲ್ ಆಫ್ ಬಿಹಾರ್ ಅಂಡ್ ಒರಿಸ್ಸಾ ರಿಸರ್ಚ್ ಸೊಸೈಟಿ (೧೯೧೫) ಈ ಸಂಶೋಧನಾ ಪತ್ರಿಕೆಗಳಲ್ಲಿ ಲೇಖನಗಳನ್ನು ಪ್ರಕಟಿಸಿದರು.

ಫ್ರಾನ್ಸಿಸ್ ಬುಖನನ್, ಎಚ್.ಎಚ್.ರಿಸ್ಲೇಯವರು ಬ್ರಿಟಿಷ ಸರ್ಕಾರದಿಂದ ನೇಮಕಗೊಂಡು ಸಾಮಾನ್ಯವಾಗಿ ಬಂಗಾಳ ಜನತೆಯ ಸ್ಥಿತಿಗತಿಗಳು ಹಾಗೂ ಅವರ ಧರ್ಮದ ಬಗ್ಗೆ ವಿಚಾರಣೆ ನಡೆಸಿದರು. ಡಾಲ್ಟನ್ ಮತ್ತು ಒಮ್ಮಾಲೆಯವರನ್ನು ಪೂರ್ವ ಭಾರತದಲ್ಲಿ ನಿಯೋಜಿಸಲಾಯಿತು. ಮಧ್ಯ ಭಾರತದಲ್ಲಿ ರಸೆಲ್‌ರವರನ್ನು ನೇಮಿಸಲಾಯಿತು. ಇವರು ಕೈಪಿಡಿಗಳು, ಗೆಜೆಟಿಯರುಗಳು ಮತ್ತು ಏಕವಿಷಯ ಪ್ರಬಂಧದಂತೆ ವಿಶ್ವಕೋಶಗಳನ್ನು ಒದಗಿಸಿದರು. ಇಂದಿಗೂ ಇವು ಆಯಾ ವಲಯಗಳ ಜನಜೀವನ ಮತ್ತು ಸಂಸ್ಕೃತಿಯ ಬಗ್ಗೆ ಮೂಲಭೂತ ಮಾಹಿತಿಯನ್ನು ಒದಗಿಸುತ್ತವೆ. ಇವುಗಳೊಂದಿಗೆ ಜೆ.ಎಂ.ಕ್ಯಾಂಬೆಲ್, ಆರ್.ಎಸ್.ಲ್ಯಾಥಮ್ ಮತ್ತು ಎಚ್.ಎಚ್.ರಿಸ್ಲೇಯವರಂತಹ ಆಡಳಿತಗಾರರು ಸಹ ಭಾರತೀಯ ಜನಾಂಗಿಕಶಾಸ್ತ್ರದ ಬಗ್ಗೆ ಸಾಮಾನ್ಯ ಕೃತಿಗಳನ್ನು ಪ್ರಕಟಿಸಿದರು.

ನಂತರ ಷೇಕ್ಸಪಿಯರ್, ಗೋರ್ಡಾನ್ ಮತ್ತು ಹಟ್ಟನ್ ಮೊದಲಾದವರಿಂದ ನಿರ್ದಿಷ್ಟ ಬುಡಕಟ್ಟುಗಳ ಬಗ್ಗೆ ವಿವರವಾದ ವರದಿಗಳು ಪ್ರಕಟಗೊಂಡವು. ಇದರ ಪರಿಣಾಮದಿಂದ ಬುಡಕಟ್ಟುಗಳ ಬಗ್ಗೆ ಏಕ ವಿಷಯ

ಪ್ರಬಂಧಗಳ ರಚನೆ ಮತ್ತು ಪ್ರಕಟಣೆ ಆರಂಭವಾಯಿತು. ಹೀಗೆ ಬರೆದ ಪ್ರಥಮ ಭಾರತೀಯನೆಂದರೆ ಎಸ್.ಸಿ.ರಾಯ್. ಇವರು ಭಾರತೀಯ ಜನಾಂಗಶಾಸ್ತ್ರದ ಪಿತಾಮಹರೆಂದು ಪ್ರಸಿದ್ಧರಾಗಿದ್ದಾರೆ. ಇವರು ಮುಂಡಾ ಮತ್ತು ಒರ್ಯಾನ್ ಎಂಬ ಬುಡಕಟ್ಟುಗಳ ಬಗ್ಗೆ ಕೃತಿಗಳನ್ನು ಪ್ರಕಟಿಸಿದರು. ಇವರ ನಂತರ ಆರ್.ಪಿ.ಚಂದಾರವರು ಇಂಡೋ ಆರ್ಯನ್ ಜನಾಂಗದ ಬಗ್ಗೆ ೧೯೧೬ರಲ್ಲಿ ತಮ್ಮ ಕೃತಿ ಪ್ರಕಟಿಸಿದರು. ಇವರಲ್ಲದೆ ಅನೇಕ ಮಾನವಶಾಸ್ತ್ರಜ್ಞರು ಕ್ಷೇತ್ರಕಾರ್ಯ ಕೈಗೊಂಡು ಲೇಖನಗಳನ್ನು ಬರೆಯುವುದರ ಮೂಲಕ ವಿಶೇಷವಾಗಿ ಬುಡಕಟ್ಟುಗಳ ಸಂಸ್ಕೃತಿಯ ವಿವಿಧ ಅಂಶಗಳನ್ನು ತಿಳಿದುಕೊಳ್ಳಲು ಸಂಶೋಧಕರಿಗೆ ತರಬೇತಿ ನೀಡುವುದರೊಂದಿಗೆ ವೈಜ್ಞಾನಿಕ ಮಾನವಶಾಸ್ತ್ರೀಯ ಸಂಶೋಧನೆಗಳಿಗೆ ಚಾಲನ ಶಕ್ತಿಯಾದರು.

ಎಲ್ವಿನ್ ಮಧ್ಯವಲಯಕ್ಕೆ ಸೇರಿದ ಬುಡಕಟ್ಟುಗಳಾದ ಮರಿಯಾ, ಮುರಿಯಾ, ಸವೋರಾ, ಅಗೇರಿಯಾ, ಬೈಗಾ, ಬೊಂಡೋ ಈ ಬುಡಕಟ್ಟುಗಳ ಬಗ್ಗೆ ಒಂದೊಂದು ಕೃತಿಯನ್ನು ಪ್ರಕಟಿಸಿದರು. ಮರಿಯಾ ಬುಡಕಟ್ಟಿನಲ್ಲಿ ಆತ್ಮಹತ್ಯೆಗಳು ಹೆಚ್ಚಾಗಿ ನಡೆಯುತ್ತಿದ್ದುದರಿಂದ ಆ ಬುಡಕಟ್ಟಿನ ಸಂಸ್ಕೃತಿಯನ್ನು ಅಧ್ಯಯನ ಮಾಡಿ ಅದಕ್ಕೆ ಕಾರಣಗಳನ್ನು ಹುಡುಕಿ ಪರಿಹಾರಗಳನ್ನು ನೀಡಿದ್ದಾರೆ. ಮುರಿಯಾ ಬುಡಕಟ್ಟಿನಲ್ಲಿರುವ ಘೋಟುಲ್ ಎಂಬ ಹೆಸರಿನ ಸಾಮೂಹಿಕ ಶಯನಗೃಹಗಳ ವ್ಯವಸ್ಥೆಯ ವಿವರಗಳನ್ನು ತಿಳಿಸುವುದರೊಂದಿಗೆ ಆ ಜನರ ಲೈಂಗಿಕ ಜೀವನವನ್ನು ವರ್ಣಿಸಿದ್ದಾರೆ. ಹೈದ್ರಾಬಾದಿನ ಬುಡಕಟ್ಟುಗಳ ಬಗ್ಗೆ ಫ್ಯೂರರ್ ಹೈಮೆನ್‌ಡೊರ್ಫರ ಕೃತಿಗಳು(೧೯೪೫,೧೯೪೬) ಮತ್ತಷ್ಟು ವಿವರಗಳನ್ನು ನೀಡಿದವು.

ಬ್ರಿಟಿಷ ವಿದ್ವಾಂಸರು, ಆಡಳಿತಗಾರರು, ಮಿಷನರಿಗಳು ಅನಂತರ ಬ್ರಿಟಿಷ ಹಾಗೂ ಭಾರತೀಯ ಮಾನವಶಾಸ್ತ್ರಜ್ಞರಿಂದ ವಿಶೇಷ ಗಮನಹರಿಸಿದ ಬುಡಕಟ್ಟುಗಳ ಅಧ್ಯಯನಗಳು ಈ ಶತಮಾನದ ನಲವತ್ತರ ದಶಕದ ಅಂತ್ಯದವರೆಗೂ ಮುಂದುವರಿದವು. ಸ್ವತಂತ್ರ ನಂತರ ಅಮೇರಿಕದ ಸಾಮಾಜಿಕ ಮಾನವಶಾಸ್ತ್ರಜ್ಞರು ಹಾಗೂ ಭಾರತೀಯ ಸಾಮಾಜಿಕ ಮಾನವಶಾಸ್ತ್ರಜ್ಞರ ನಡುವೆ ಸಂಪರ್ಕ ಹೆಚ್ಚಿತು. ಬುಡಕಟ್ಟು ಅಧ್ಯಯನಗಳಲ್ಲಿ ವಿಶ್ಲೇಷಣಾತ್ಮಕವಾದ ಹಾಗೂ ಕ್ರಿಯಾಶೀಲಾಭಿಮುಖವಾದ ಮಾರ್ಗ ಕಂಡು ಬಂದಿತು. ತತ್ಪರಿಣಾಮವಾಗಿ, ಬುಡಕಟ್ಟು ಸಮುದಾಯಗಳನ್ನು ಅಂತರ್ ಸಂಬಂಧದ ದೃಷ್ಟಿಯಿಂದ ಅಧ್ಯಯನ ಮಾಡಲು ಪ್ರಾರಂಭಿಸಲಾಯಿತು.

ಮುಂಬಯಿ (೧೯೧೯ರಲ್ಲಿ ಸಮಾಜಶಾಸ್ತ್ರ) ಮತ್ತು ಕಲ್ಕತ್ತ (೧೯೨೧ರಲ್ಲಿ ಮಾನವಶಾಸ್ತ್ರ) ವಿಶ್ವವಿದ್ಯಾನಿಲಯಗಳು ಸಾಮಾಜಿಕ ಮಾನವಶಾಸ್ತ್ರವನ್ನು ಪಠ್ಯ ವಿಷಯವಾಗಿ ಸೇರಿಸಿದಂದಿನಿಂದ ಬುಡಕಟ್ಟುಗಳ ಅಧ್ಯಯನ ರಚನಾತ್ಮಕವಾಗಿ ಆರಂಭವಾಯಿತು. ಪಿ.ಎನ್.ಮಿಶ್ರ, ಎಲ್.ಕೆ.ಎ. ಅಯ್ಯರ್, ಕೆ.ಸಿ.ಚಟ್ಟೋಪಾಧ್ಯಾಯ, ಟಿ.ಸಿ.ದಾಸ್, ಡಿ.ಎನ್. ಮಜುಂದಾರ್, ಪಶ್ಚಿಮ ಮತ್ತು ದಕ್ಷಿಣ ಭಾರತದಲ್ಲಿ ಜಿ.ಎಸ್.ಘುರ್ಯೆ, ಐರಾವತಿ ಕರ್ವೆ, ಎಲ್.ಕೆ. ಅನಂತಕೃಷ್ಣ ಅಯ್ಯರ್ ಹಾಗೂ ಎ.ಅಯ್ಯಪ್ಪನ್ ಮೊದಲಾದ ಮಾನವಶಾಸ್ತ್ರಜ್ಞರು ಕ್ಷೇತ್ರಕಾರ್ಯ ಕೈಗೊಂಡು, ಲೇಖನಗಳನ್ನು, ಕೃತಿಗಳನ್ನು ಬರೆಯುವುದರ ಮೂಲಕ ವಿಶೇಷವಾಗಿ ಬುಡಕಟ್ಟು ಸಂಸ್ಕೃತಿಯ ವಿವಿಧ ಅಂಶಗಳ ಬಗ್ಗೆ ಮಾನವಶಾಸ್ತ್ರೀಯ ಸಂಶೋಧನೆ ನಡೆಸಲು ಸಂಶೋಧಕರಿಗೆ ತರಬೇತಿ ನೀಡುವುದರ ಮೂಲಕ ವೈಜ್ಞಾನಿಕ ಮಾನವಶಾಸ್ತ್ರೀಯ ಸಂಶೋಧನೆಗಳಿಗೆ ಚಾಲಕ ಶಕ್ತಿಯಾದರು.

ಭಾರತೀಯ ಮಾನವಶಾಸ್ತ್ರ ಸರ್ವೇಕ್ಷಣೆಯು ಮಾನವಶಾಸ್ತ್ರದ ವಿವಿಧ ಶಾಖೆಗಳನ್ನು ಒಳಗೊಂಡು ೧೯೪೬ರಿಂದ ಭಾರತದಲ್ಲಿ ಮಾನವಶಾಸ್ತ್ರೀಯ ಸಂಶೋಧನೆಗಳಿಗೆ ಅನುಕೂಲಕರ ವಾತಾವರಣವನ್ನು ನಿರ್ಮಿಸಿತು.

ನಾಗಪೂರ, ಷಿಲಾಂಗ್, ಮೈಸೂರು ಪೋರ್ಟ್‌ಬ್ಲೇರ್ ಮತ್ತು ಡೆಹರಾಡೂನಗಳಲ್ಲಿ ಹಲವಾರು ಬುಡಕಟ್ಟುಗಳ ಅಧ್ಯಯನ ನಡೆಸಿದ್ದು, ಈ ಅಧ್ಯಯನಗಳು ಸಂಸ್ಥೆಯ ಪತ್ರಿಕೆಗಳಲ್ಲಿ ಲೇಖನ ರೂಪದಲ್ಲಿ ಪ್ರಕಟಗೊಂಡಿವೆ. ಭಾರತ ಸರ್ಕಾರ ೧೯೬೧ರ ಜನಗಣತಿಯ ಸಮಯದಲ್ಲಿ ಬುಡಕಟ್ಟು ಅಧ್ಯಯನಗಳ ಕಾರ್ಯ ಯೋಜನೆಗಳು ತೀವ್ರತರಗೊಳಿಸಿದ್ದು, ಇವು ಅದರ ಸಾಮಾಜಿಕ ಅಧ್ಯಯನ ವರ್ಗದಲ್ಲಿ ಮುದುವರಿದಿವೆ, ಹಾಗೂ ಭಾರತದ ವಿವಿಧ ಭಾಗಗಳ ಬುಡಕಟ್ಟು ಸಂಸ್ಕೃತಿಯ ಪ್ರಕಟಣೆಗಳ ಮೂಲಕ ಪ್ರಕಟವಾಗಿವೆ.

ಸಮಗ್ರವಾಗಿ ಪರಿಶೀಲಿಸದಾಗ, ಭಾರತೀಯ ಮಾನವಶಾಸ್ತ್ರದ ವಿಶ್ಲೇಷಣಾತ್ಮಕ ಅವಧಿಯಲ್ಲಿ ಬುಡಕಟ್ಟು ಅಧ್ಯಯನಗಳ ಬಗ್ಗೆ ವಿಶೇಷ ಆದ್ಯತೆ ಅಷ್ಟಾಗಿ ಇರದಿದ್ದರೂ ಬುಡಕಟ್ಟು ಸಂಶೋಧನೆಗಳ ಪ್ರಾಮುಖ್ಯ ಮೂಲೆಪಾಲಾಗಿರಲಿಲ್ಲ. ಬದಲಾಗಿ ಸ್ವಾತಂತ್ರ್ಯ ನಂತರ ಹೊಸ ಸಂವಿಧಾನಾತ್ಮಕ ಉಪ ಬಂಧಗಳು, ಮಾನವೀಯ ಪರಿಗಣನೆಗಳು ಹಾಗೂ ರಾಜಕೀಯ ಹಿತಾಸಕ್ತಿಗಳಿಂದಾಗಿ ವೈಜ್ಞಾನಿಕ ಹಾಗೂ ಅರೆ ವೈಜ್ಞಾನಿಕ ಸಂಸ್ಥೆಗಳ ವ್ಯವಸ್ಥೆ ಏರ್ಪಟ್ಟಿತು(ಅವರೇ:೧೯೮೫:೩೭-೪೧).

ಭಾರತೀಯರ ವೈವಿಧ್ಯಮಯ ಜೀವನ ಬುಡಕಟ್ಟು ಜನರಿಗೆ ಸ್ವಲ್ಪ ಮಟ್ಟಿಗೆ ಸ್ಪಂದಿಸಿದ್ದರಿಂದ, ಅವರಲ್ಲಿ ಸ್ವಲ್ಪ ಮಟ್ಟಿನ ಬದಲಾವಣೆ ಕಾಣಬರತ್ತಿದೆ. ಆದರೂ ಕೂಡ ಅವರು ತಮ್ಮ ಮೂಲ ಸಂಸ್ಕೃತಿಯಲ್ಲಿ ಸಂಪೂರ್ಣವಾಗಿ ಬದಲಾವಣೆ ಕಾಣಲಾಗಲಿಲ್ಲ. ನಗರದಲ್ಲಿ ವಾಸಿಸಿದ ಬುಡಕಟ್ಟು ಜನರಲ್ಲಿ ಮಾತ್ರ ಬದಲಾವಣೆಯನ್ನು ಕಾಣಬಹುದು.

ಇತ್ತೀಚಿನ ದಿನಗಳಲ್ಲಿಯ ನಿರ್ದಿಷ್ಟ ಸಮಸ್ಯೆಗಳನ್ನು ಕೂಲಂಕೂಷವಾಗಿ ವಿಚಾರ ಮಾಡುವ ಉದ್ದೇಶದಿಂದಲೂ ಮತ್ತು ಜಾತಿ ಹಾಗೂ ಬುಡಕಟ್ಟುಗಳ ಕಲ್ಯಾಣಾಭಿವೃದ್ಧಿಯ ಸಲುವಾಗಿಯೂ ಅಧ್ಯಯನ ನಡೆಸುವುದು ರೂಢಿಯಾಗಿದೆ. ಎಷ್ಟೊ ಆದಿವಾಸಿ ಸಮಾಜಗಳು ಹೊರ ಸಂಪರ್ಕವಿಲ್ಲದೆ ಅಧ್ಯಯನಕ್ಕೊಳಪಟ್ಟಿರುವುದಿಲ್ಲ. ಭಾರತದಲ್ಲಿ ಆದಿವಾಸಿ ಸಮಾಜಗಳ ಅಧ್ಯಯನ ವಿಶಾಲವಾಗಿ ಜರಗುತ್ತ ಬಂದಿದ್ದರೂ ಸರಕಾರದ ಕಾರ್ಯಾಚರಣೆಯ ಮೇಲೆ ಅವು ಬೀರಿರುವ ಪರಿಣಾಮ ಗೌಣ ಎಂದು ಹೇಳಿದರೆ ತಪ್ಪಾಗಲಾರದು(ಹರೀಶ್,ಪಿ.ಎನ್.:೧೯೮೮:೧೨).

## ೪. ಕರ್ನಾಟಕದಲ್ಲಿ ಬುಡಕಟ್ಟುಗಳ ಅಧ್ಯಯನ

ಭಾರತ ದೇಶದ ಬುಡಕಟ್ಟುಗಳ ಅಧ್ಯಯನದ ನಂತರ ಕರ್ನಾಟಕ ಬುಡಕಟ್ಟುಗಳ ಕಡೆಗೆ ಗಮನ ಹರಿಸಿದಾಗ ಇಲ್ಲಿಯ ಬುಡಕಟ್ಟುಗಳ ಸಂಖ್ಯೆ ಕಡಿಮೆ ಎಂಬುದು ಕಂಡು ಬರುವುದು. ಯಾಕೆಂದರೆ ಕರ್ನಾಟಕದ ಬಹುಭಾಗ ಮೈದಾನ ಪ್ರದೇಶದಿಂದ ಕೂಡಿದ್ದರಿಂದ ಹಿಂದೆ ವಾಸಿಸಿದ ಬುಡಕಟ್ಟುಗಳು ಕಾಲಕ್ರಮದಲ್ಲಿ ಹಿಂದೂ ಸಮಾಜಗಳೊಡನೆ ಕೂಡಿದ್ದರಿಂದ ಈ ಕಡಿಮೆ ಪ್ರಮಾಣದ ಜನಸಂಖ್ಯೆಗೆ ಕಾರಣವಿರಬಹುದು. ಪಶ್ಚಿಮ ಘಟ್ಟ ಹಾಗೂ ಪೂರ್ವ ಘಟ್ಟಗಳನ್ನು ಕೂಡುವ ಪ್ರದೇಶವನ್ನು ಕರ್ನಾಟಕದ ಆದಿವಾಸಿ ನೆಲೆಗಳೆಂದು ಅಧ್ಯಯನಕಾರರು ಪರಿಗಣಿಸಿರುವರು. ಉತ್ತರ ಕರ್ನಾಟಕದ ಬಯಲು ಸೀಮೆಯ ಬುಡಕಟ್ಟುಗಳ ಅಧ್ಯಯನ ನಿರ್ಲಕ್ಷ್ಯಕೊಳಗಾಗಿದೆ. ಕರ್ನಾಟಕ, ಕೇರಳ ಮತ್ತು ತಮಿಳುನಾಡು ರಾಜ್ಯಗಳ ಗಡಿ ಪ್ರದೇಶಗಳಲ್ಲಿ ಇರುಳ, ಪಣಿಯ, ಸೋಲಿಗ,

ಜೇನುಕುರುಬ, ಕಾಡುಕುರುಬ, ಕಾಟ್ಟುನಾಯಕನ್ ಮುಂತಾದ ಬುಡಕಟ್ಟುಗಳು ವಾಸವಾಗಿವೆ. ಅಲ್ಲದೆ ಮಲೆಕುಡಿಯ, ಕುಡಿಯ, ಹಸಲ ಮುಂತಾದವರು ಕರ್ನಾಟಕದ ಬ್ರಹ್ಮಗಿರಿ ಮತ್ತು ಸಹ್ಯಾದ್ರಿ ಬೆಟ್ಟ ಶ್ರೇಣಿಗಳಲ್ಲಿ ಕಂಡು ಬರುವರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಲೆಕುಡಿಯ, ಕೊಡಗು ಜಿಲ್ಲೆಯಲ್ಲಿ ಕುಡಿಯ, ಮೈಸೂರು ಜಿಲ್ಲೆಯಲ್ಲಿ ಹಸಲ, ಬೀದರ ಜಿಲ್ಲೆಯಲ್ಲಿ ಬೇಡ, ಗೊಂಡ, ರಾಜಗೊಂಡ, ಪಾರ್ಧಿ, ಮೇದ, ಟೋಕ್ರೆ ಕೋಳಿ ಮೊದಲಾದ ಬುಡಕಟ್ಟಿನವರು ವಾಸವಾಗಿದ್ದಾರೆ.

ಕರ್ನಾಟಕದ ಬುಡಕಟ್ಟುಗಳ ಬಗ್ಗೆ ಥರ್ಸ್ಟನ್ ಅವರು 'ಯತ್ನೋಗ್ರಾಫಿಕ್ ನೋಟ್ಸ್ ಆನ್ ಸದರನ್ ಇಂಡಿಯಾ', ಕ್ಯಾಸ್ಟ್ ಆಂಡ ಟ್ರೈಬ್ಸ್ ಆಫ್ ಸದರನ್ ಇಂಡಿಯಾ (೧೯೦೬,ಸಂಪುಟ:೧-೭), ಸಿ.ಹಯವದನರಾವ್ ಅವರು ಮೈಸೂರು ಕ್ಯಾಸ್ಟ್ ಆಂಡ ಟ್ರೈಬ್ಸ್ (ನಾಲ್ಕು ಸಂಪುಟ), ಲೂಯಿಸ್‌ರವರು 'ಟ್ರೈಬ್ಸ್ ಆಫ್ ಮೈಸೂರ್' (೧೯೬೩) ಹಾಗೂ ಎಲ್.ಎ. ಕೃಷ್ಣ ಆಯ್ಯರ್ ಅವರು 'ದಿ ಕೂರ್ಗ್ ಟ್ರೈಬ್ಸ್ ಆಂಡ ಕ್ಯಾಸ್ಟ್' (೧೯೪೧) ಎಂಬ ಕೃತಿಗಳಲ್ಲಿ ಕೆಲವು ವಿವರಗಳನ್ನು ನೀಡಿರುವರು. ಈ ಮೇಲಿನ ಬರಹಗಳ ಮೇಲೆ ಕೆಲವು ಜಾತಿ ಮತ್ತು ಬುಡಕಟ್ಟುಗಳ ಪರಿಚಯವನ್ನು ದೊರೆಯುತ್ತದೆ. ಇವು ೧೯ನೆಯ ಶತಮಾನದ ಆರಂಭದಿಂದ ೨೦ನೆಯ ಶತಮಾನದ ಮಧ್ಯಭಾಗದ ಸ್ಥಿತಿಗತಿಗಳನ್ನು ತಿಳಿಸುತ್ತವೆ. ಬ್ರಿಟಿಷರ ಕಾಲದ ಜನಗಣತಿಯ ವರದಿಗಳು ಗೆಜಿಟಿಯರ್‌ಗಳು ಮೊದಲಾದವುಗಳು ಆಡಳಿತದ ಉದ್ದೇಶಕ್ಕಾಗಿ ಸಂಗ್ರಹಿಸಿದ ವಿವರಗಳೇ ಬುಡಕಟ್ಟುಗಳನ್ನು ಕುರಿತು ಮಾಹಿತಿಯನ್ನು ಒದಗಿಸುವ ಆಕಾರ ಗ್ರಂಥಗಳಾಗಿವೆ.

ಈಚಿನ ದಶಕಗಳಲ್ಲಿ ಮಾನವಶಾಸ್ತ್ರಜ್ಞರು ಕರ್ನಾಟಕದ ಆದಿವಾಸಿ ಬುಡಕಟ್ಟುಗಳನ್ನು ಕುರಿತು ಗಮನಹರಿಸಿದ್ದರೂ, ಅವುಗಳನ್ನು ಕುರಿತು ಪ್ರಕಟವಾಗಿರುವ ವರದಿಗಳು ಬಹಳ ಕಡಿಮೆ. ಈ ಕ್ಷೇತ್ರದಲ್ಲಿ ಮೈಸೂರಿನ ಭಾರತೀಯ ಮಾನವಶಾಸ್ತ್ರೀಯ ಸರ್ವೇಕ್ಷಣೆ ಕರ್ನಾಟಕದ ಕೆಲವು ಬುಡಕಟ್ಟುಗಳ ಕುಲವಿವರಣಾ ವರದಿಗಳನ್ನು ಪ್ರಕಟಿಸಿದೆ. ಜಿ.ಎಸ್.ಮೊರಬ್ ಅವರು ಬಿಳಿಗಿರಿ ರಂಗನ ಬೆಟ್ಟದ ಸೋಲಿಗರನ್ನೂ (೧೯೬೫), ಪಿ.ಕೆ.ಮಿಶ್ರ ಅವರು ಹೆಗ್ಗಡದೇವನ ಕೋಟೆಯ ಜೇನು ಕುರುಬರನ್ನೂ (೧೯೬೯) ಕುರಿತು ಅಧ್ಯಯನ ಮಾಡಿದ್ದಾರೆ. ೧೯೯೪ರಲ್ಲಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಆರಂಭಗೊಂಡ ಬುಡಕಟ್ಟು ಅಧ್ಯಯನ ವಿಭಾಗವು ಕರ್ನಾಟಕದ ಬುಡಕಟ್ಟುಗಳನ್ನು ಕುರಿತು ವಿಶೇಷವಾಗಿ ಅಧ್ಯಯನಿಸುತ್ತಿದೆ. ವಿಭಾಗದ ಮುಖ್ಯಸ್ಥರಾದ ಡಾ.ಹಿ.ಚಿ.ಬೋರಲಿಂಗಯ್ಯ ಅವರು ಹಾಗೂ ಅವರ ಸಹೋದ್ಯೋಗಿಗಳು ಬುಡಕಟ್ಟು ಮಹಾಕಾವ್ಯಗಳ ಕುರಿತು ಮತ್ತು ಹಲವಾರು ಬುಡಕಟ್ಟುಗಳ ಸೂಕ್ಷ್ಮ ಅಧ್ಯಯನ ಕೈಗೊಂಡಿರುವರು.

ಜನಗಣತಿ ಇಲಾಖೆಯವರು ೧೯೬೧ರ ಜನಸಂಖ್ಯಾ ಗಣತಿಯ ಒಂದು ಭಾಗವಾಗಿ ಹಸಲರು, ಇರುಳರು ಮತ್ತು ಕಣಿಯ ಬುಡಕಟ್ಟುಗಳನ್ನು ಕುರಿತು ಸಂಕ್ಷಿಪ್ತ ವರದಿಗಳನ್ನು ಪ್ರಕಟಿಸಿದ್ದಾರೆ. ತೀ.ನಂ.ಶಂಕರನಾರಾಯಣ ಅವರು ೧೯೮೭ರಲ್ಲಿ ಜಾನಪದ ದೃಷ್ಟಿಕೋನದಿಂದ ಅಧ್ಯಯನ ನಡಿಸಿರುವ 'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು' ಎಂಬ ಗ್ರಂಥವು ಪಿಎಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಮಾನವಶಾಸ್ತ್ರೀಯ ಅಧ್ಯಯನ ದೃಷ್ಟಿಯಿಂದ ಪಿ.ಎಸ್. ಹರೀಶ್ ಅವರು 'ಕೊಡಗಿನ ಎರವರು : ಒಂದು ಅಧ್ಯಯನ' ಎಂಬ ವಿಷಯದ ಮೇಲೆ ಅಧ್ಯಯನ ಕೈಗೊಂಡು ಮೈಸೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ

## ೫. ಬೀದರ ಜಿಲ್ಲೆಯಲ್ಲಿ ಬುಡಕಟ್ಟುಗಳ ಅಧ್ಯಯನ

ದೇಶ ಮತ್ತು ರಾಜ್ಯಗಳ ನಂತರ ಜಿಲ್ಲೆಯ ಕಡೆಗೆ ಗಮನ ಹರಿಸಿದಾಗ ಇಲ್ಲಿಯ ಬುಡಕಟ್ಟುಗಳ ಬಗ್ಗೆ ಹೇಳಿಕೊಳ್ಳುವಂತ ಕಾರ್ಯಗಳು ನಡೆದಿಲ್ಲ ಎಂದರೆ ತಪ್ಪಾಗದು. ೧೯೮೧ರ ಜನಗಣತಿಯ ಪ್ರಕಾರ ಬೀದರ ಜಿಲ್ಲೆಯಲ್ಲಿ ಒಟ್ಟು ೧೯ ಬುಡಕಟ್ಟುಗಳನ್ನು ಇರುವುದು ಗುರುತಿಸಲಾಗಿದೆ. ಇವುಗಳಲ್ಲಿ ಪಿಎಚ್.ಡಿ ಪದವಿಗಾಗಿ ಅಧ್ಯಯನಕ್ಕೊಳಗೊಂಡ ಬುಡಕಟ್ಟುಗಳು ಈ ಕೆಳಗಿನಂತಿವೆ.

೧ ಬೀದರ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯ : ಒಂದು ಸಮಾಜಶಾಸ್ತ್ರೀಯ ಅಧ್ಯಯನ ಡಾ. ಕೆ.ಎಂ.ಮೈತ್ರಿ. ಮೈಸೂರು ವಿಶ್ವವಿದ್ಯಾಲಯ ಮೈಸೂರು ೧೯೯೪.

೨ A Sociological study of Scheduled Tribes in Transition: A Case study of Gonds (Kurubs) of Bidar District. by Bandeppa Kalgi, Gulbarga University Gulbaraga 1995.

೩ ಬೀದರ ಜಿಲ್ಲೆಯ ಬೇಡ ಬುಡಕಟ್ಟು : ಒಂದು ಅರ್ಥಶಾಸ್ತ್ರೀಯ ಅಧ್ಯಯನ ಡಾ. ಸುಚಿತಾನಂದ ಕೆ. ಮಲ್ಲಾಪುರೆ. ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೧.

೪ ಪಾರ್ಧಿ ಬುಡಕಟ್ಟು : ಒಂದು ಮಾನವಶಾಸ್ತ್ರೀಯ ಅಧ್ಯಯನ ಎಂಬ ವಿಷಯವನ್ನು ಕನ್ನಡ ವಿಶ್ವವಿದ್ಯಾಲಯದಲ್ಲಿ ೨೦೦೧ರಲ್ಲಿ ಪೃಥ್ವಿರಾಜ ಲಕ್ಕಿಯವರು ಬುಡಕಟ್ಟು ಅಧ್ಯಯನ ವಿಭಾಗದಲ್ಲಿ ವಿಷಯವನ್ನು ಆಯ್ಕೆ ಮಾಡಿಕೊಂಡು ಸಂಶೋಧನೆ ಕೈಗೊಂಡಿದ್ದಾರೆ. ಬೀದರ ಜಿಲ್ಲೆಯ ಬುಡಕಟ್ಟುಗಳನ್ನು ಕುರಿತು ಇನ್ನು ಬಹಳಷ್ಟು ಸಂಶೋಧನೆ ಆಗಬೇಕಾಗಿದೆ. ಹೀಗಾಗಿ ಬುಡಕಟ್ಟು ಅಧ್ಯಯನ ಮಾಡವಂಥ ವಿದ್ಯಾರ್ಥಿಗಳಿಗೆ ಪ್ರೋತ್ಸಾಹವನ್ನು ನೀಡಬೇಕಾಗಿದೆ.

## ೬. ಟೋಕ್ರೆ ಕೋಳಿ ಬುಡಕಟ್ಟಿನ ಹುಟ್ಟಿನ ಕಥನಗಳು

ಒಂದೊಂದು ಬುಡಕಟ್ಟು ಹುಟ್ಟಲು ಕಾರಣವಾದುದರ ಬಗ್ಗೆ ಕಥೆಗಳಿವೆ, ಪುರಾಣಗಳಿವೆ. ಈ ಹಿನ್ನೆಲೆಯಲ್ಲಿ ಬುಡಕಟ್ಟು ರಕ್ಷಕನ ಕುರಿತು ಕತೆಗಳು ಹುಟ್ಟಿಕೊಳ್ಳುತ್ತವೆ. ಒಂದು ಸಮುದಾಯದಿಂದ ಹುಟ್ಟಿಕೊಂಡ ಸೃಜನಶೀಲ ಮೊತ್ತವೆ ಪುರಾಣ. ಪ್ರತಿಯೊಂದು ಬುಡಕಟ್ಟು ತನ್ನ ಸಮುದಾಯದ ಮೂಲವೇ ಅತ್ಯಂತ ಪ್ರಾಚೀನವಾದುದು ಮತ್ತು ಪವಿತ್ರವಾದುದು ಎಂಬುದನ್ನು ಸಾರುವ ಭರದಲ್ಲಿ ಅನೇಕ ಪೌರಾಣಿಕ ಕಲ್ಪನೆಗಳನ್ನು ಸೃಷ್ಟಿಸಿದವು. ಪ್ರತಿಯೊಂದು ಸಮುದಾಯಕ್ಕೆ ತನಗೊಬ್ಬ ಮೂಲ ಪುರಷನಿದ್ದು ಆತನಿಂದಲೇ ತಮ್ಮ ಸಮುದಾಯ ಆರಂಭಗೊಂಡಿತ್ತೆಂದು ಕಥೆಯ ಮೂಲಕ ಹೇಳುವರು. ಇವರ ನಂತರ ಕೆಲವು ಸಾಂಸ್ಕೃತಿಕ ವೀರರನ್ನು ಗುರುತಿಸಿ, ಅವರಿಂದಲೇ ತಮ್ಮ ಸಮುದಾಯ ಅಭಿವೃದ್ಧಿಯಾಯಿತ್ತೆಂದು ಹೇಳುತ್ತಾರೆ.

ಟೋಕ್ರೆ ಕೋಳಿ (ಅಂಬಿಗ) ಬುಡಕಟ್ಟಿನವರಲ್ಲಿ ತಮ್ಮ ಜನರ ಹುಟ್ಟುವಿನ ಬಗ್ಗೆ ಒಂದು ಪುರಾಣ ಹೀಗಿದೆ. ಈ ಜಗತ್ತು ಮೊದಲು ನೀರೆ ನೀರಾಗಿತ್ತು. ಶಿವನು ಮಾತ್ರ ಒಂದು ದೋಣಿ(ಟೋಕ್ರೆ)ಯಲ್ಲಿ ಈ ನೀರಿನ ಮೇಲೆ ತಿರುಗತ್ತಿದ್ದ. ಕ್ರಮೇಣ ನೀರು ತನ್ನ ಸುತ್ತಲೂ ಹೆಪ್ಪುಗಟ್ಟಿ ಭೂಮಿಯಾಗುತ್ತ ಹೊರಟಿತ್ತು. ಹೀಗೆ ಅನಂತ ಜೀವಿಗಳಲ್ಲಿ ಮನುಷ್ಯನ ಉಗಮವೂ ಆಯಿತು. ನೀರಿನಲ್ಲಿದ್ದ ಮಾನವರನ್ನು ಶಿವನು ದೋಣಿಯಲ್ಲಿ

ಹಾಕಿಕೊಂಡು ಹೆಪ್ಪುಗಟ್ಟಿದ ನೆಲದ ಮೇಲೆ ಬಿಡಲು ಪ್ರಾರಂಭಿಸಿದನು. ಶಿವನೊಂದಿಗೆ ಇನ್ನಷ್ಟು ಜನ ಆತನ ಕೆಲಸದಲ್ಲಿ ನೆರವಾದರು. ನೆಲದ ಮೇಲೆ ಉಳಿದ ಜನ ತಮಗೆ ಅನುಕೂಲವಾದ ಸ್ಥಳವನ್ನು ಹುಡುಕಿಕೊಂಡು ಜೀವಿಸತೊಡಗಿದರು. ಶಿವನೊಂದಿಗೆ ಕೆಲವು ಜನ ನೀರಿನ ದಡದಲ್ಲಿಯೇ ಉಳಿದು ಜಲಚರಗಳನ್ನೇ ತಮ್ಮ ಆಹಾರವಾಗಿಸಿಕೊಂಡು ಬದುಕಲು ಪ್ರಾರಂಭಿಸಿದರು. ಈ ಜನಾಂಗವೇ ಮುಂದೆ ಅಂಬಿಗ (ಟೋಕ್ರೆ) ಕೋಲಿ ಮತಸ್ಥರೆಂದು ಪ್ರಸಿದ್ಧಿಗೆ ಬಂದರು ಎಂದು ಜೀ.ಶಂ.ಪರಮಶಿವಯ್ಯ ಅವರು ಹೇಳುವರು.

ಈ ಕಥೆಯಲ್ಲಿ ಟೋಕ್ರೆ ಕೋಳಿ (ಅಂಬಿಗ) ಸಮುದಾಯದ ಮೂಲ ಪುರುಷ ಶಿವ. ಈ ಸಮುದಾಯದ ಕಾಯಕ ದೋಣಿ (ಟೋಕ್ರೆ) ನಡೆಸುವುದು ಅತ್ಯಂತ ಹಳೆಯದು. ಜನರನ್ನು, ವಸ್ತುಗಳನ್ನು ಒಂದು ದಡದಿಂದ ಇನ್ನೊಂದು ದಡಕ್ಕೆ ತಲುಪಿಸುವ ಕೆಲಸಗಳೂ ಇವರದಾಗಿವೆ.

## ೭. ಟೋಕ್ರೆ ಕೋಳಿ ಪದ ನಿಷ್ಪತ್ತಿ ಮತ್ತು ಅರ್ಥ

ಯಾವುದೇ ಒಂದು ಸಮುದಾಯಕ್ಕೆ ಒಂದು ಹೆಸರು ಬರಬೇಕಾದರೆ ಅವರ ವೃತ್ತಿಯಲ್ಲಿ ಸಮುದಾಯದ ಅರ್ಥವನ್ನು ಒಳಗೊಂಡಿರುತ್ತದೆ. ಹಾಗೆಯೇ ಟೋಕ್ರೆ ಕೋಳಿ ಬುಡಕಟ್ಟು ಸಹ ಟೋಕ್ರೆ (ನಾವೆ) ನಡೆಸುವ ವೃತ್ತಿಯನ್ನು ಹೊಂದಿರುವುದರೊಂದಿಗೆ ಸಮುದಾಯದ ಅರ್ಥವನ್ನು ಕೂಡ ಸೂಚಿಸುತ್ತದೆ.

ಟೋಕ್ರೆ-ತೋರಾ+ಖಾರಿ=ತೋಖಾರಿ>ತೋಕಾರಿ>ಟೋಕಾರಿ

ಟೋಕ್ರಿ>ಟೋಕ್ರೆ

ತೊ+ಕಾ+ರ್=ತೋಕಾರ್>ತೋಖಾರ್

ಖಾರ-ನೀರ

ಖಾರಿ-ಮೀನು

ಕೊಲ್>ಕೋಲ್>ಕೋಳ್>ಕೋಳಿ ಹೀಗೆ ಪರಿವರ್ತನೆ ಹೊಂದಿರುವ ಸಾಧ್ಯತೆಗಳಿವೆ.

ಟೋಕ್ರೆ+ಕೋಳಿ ಎಂಬ ಎರಡು ಪದಗಳ ಜೋಡು ನುಡಿಯೇ ಟೋಕ್ರೆಕೋಳಿ.

ಕೋಳಿ ಎಂದರೆ ಮರಾಠಿ ಭಾಷೆಯಲ್ಲಿ ಮೀನು ಅಥವಾ ಮತ್ಸ್ಯ ಎಂದಾಗುತ್ತದೆ. ಈ ಶಬ್ದವೇ ಮೀನುಗಾರರಿಗೆ ಬಳಸಲಾಗುತ್ತದೆ. ಕೋಲ್ ಎಂಬ ಶಬ್ದದಿಂದ ಕೋಲಿ ಎಂಬ ಶಬ್ದ ಉತ್ಪತ್ತಿಯಾಗಿದ ಎಂಬ ವಾದವೂ ಇದೆ. ಕೋಲ್ ಎಂದರೆ ಉದ್ದನೆಯ ಕಟ್ಟಿಗೆ, ದೋಣಿ ನಡೆಸುವ ಸಾಧನ. ಹರಿಗೋಲ್ ಅಂದರೆ ಟೋಕ್ರೆ ನಡೆಸುವ ಹುಟ್ಟು. ಟೋಕ್ರೆ+ಕೋಲ್‌ವೇ ಟೋಕ್ರೆ ಕೋಳಿ ಎಂದಾಗಿರಬೇಕು.

ದಕ್ಷಿಣ ಭಾರತದಲ್ಲಿ ಕೋಲ್ ಎಂದರೆ ಹಡಗು ಎಂದು ಅರ್ಥೈಸಲಾಗುತ್ತದೆ. ಅಲ್ಲದೆ ನಾವಿಕ, ಮಲ್ಲಹಾ, ನಿಷಾದ (ಬೇಟೆಗಾರ) ಕೈವರ್ತ ಇವೆಲ್ಲ ಶಬ್ದಗಳು ಟೋಕ್ರೆ ಕೋಳಿಯ ಸಂಕೇತವನ್ನು ಒಳಗೊಂಡಿವೆ.

ಕೋಲಿಯ+ಅಂಗ=ಕಲಿಂಗ

ಕೋಲಿಯ+ಸ್ಥಲ=ಕೋಸಲ

ಕೋಲಂ+ಕತ್=ಕೋಲಕತ್ತ

ಕೋಲಿಯನರ್ (ಕಿನ್ನರ), ಕುಲೂ (ಕೋಲಿಯ ದೇಶ), ಕಪಿಲ ಇವೆಲ್ಲ ಸ್ಥಳಗಳು ಕೋಲಿ ಸಮುದಾಯದ ಪಳುವಳಿಕೆ ಹಾಗೂ ಅಸ್ಥಿತ್ವದ ಸಂಕೇತಗಳಾಗಿವೆ.

ಮಹಾವಸ್ತುವಿನ ಪ್ರಕಾರ ಇಕ್ಷುವಾಕು ಎಂಬುವನು ಕೋಸಲದ ಅರಸನಾಗಿದ್ದನು. ಇದರ ರಾಜಧಾನಿ ಸಾಕೇತ (ಅಯೋಧ್ಯ)ವಾಗಿತ್ತು. ಯಾವುದೋ ಕಾರಣಾಂತರಗಳಿಂದ ಸಾಕೇತದಿಂದ ಕೆಲವು ಜನರನ್ನು ಹೊರತೆಗೆದಾಗ ಅವರು ಕಪಿಲ ಋಷಿಯ ಆಶ್ರಮ ಸೇರಿದರು. ಕಪಿಲ ಋಷಿ(ಕೋಲ ಋಷಿ)ಯು ಕೋಲಿ ಸಮುದಾಯದ ಶ್ರೇಷ್ಠ ಋಷಿಯಾಗಿದ್ದನು. (ಕನ್ನಯ್ಯಲಾಲ ಚಂಚರಿಕ.,೧೯೯೫,ಪು.೪೦)

ನೀರಿನ ಮೇಲೆ ಪ್ರಯಾಣ ಮಾಡಲು ಉಪಯೋಗಿಸುವ ಸಾಧನವಾದ ನಾವೆಯನ್ನು ನಡೆಸುವವನಿಗೆ ನಾವಿಗ ಅಥವಾ ಅಂಬಿಗ ಎಂದು ಕರೆಯುತ್ತಾರೆ. ಅಂಬಿಗಾರರ ಸಾಂಪ್ರದಾಯಿಕ ವೃತ್ತಿ ಮೀನು ಹಿಡಿಯುವುದು, ದೋಣಿ ನಡೆಸುವುದು. ಆದರೆ, ಇಂದು ಕೃಷಿಕರು ಮತ್ತು ಕೃಷಿ ಕೂಲಿಕಾರರಾಗಿ ಕೆಲಸವನ್ನು ಮಾಡುತ್ತಿದ್ದಾರೆ. ಕೂಲಿ ಇವರ ಆದಾಯದ ಇನ್ನೊಂದು ಮೂಲ:

ಕಬ್ಬಲಿಗರನ್ನು ಗಂಗಾಕುಲ, ಗಂಗಾಮತ, ಗಂಗೆ ಮಕ್ಕಳು, ಗಂಗಾಪುತ್ರ, ಗೌರಿಮತ, ಅಂಬಿಗ, ಕಬ್ಬಲಿ ಹಾಗೂ ಕಬ್ಬೇರರೆಂದು ಕರೆಯಲಾಗುತ್ತದೆ. ಇವರು ಮೀನುಗಾರ ಸಮುದಾಯಕ್ಕೆ ಸೇರಿದ್ದು, ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ.

ಥರ್ಸ್ಟನ್ ಹೇಳುವಂತೆ ಕಬ್ಬೇರರನ್ನು ಎರಡು ಪಂಗಡಗಳಲ್ಲಿ ವಿಂಗಡಿಸಬಹುದು. ಗೌರಿಮಕ್ಕಳು ಹಾಗೂ ಗಂಗೆ ಮಕ್ಕಳು. ಅಂದರೆ ಕ್ರಮವಾಗಿ ಪಾರ್ವತಿ ಹಾಗೂ ಗಂಗೆಯ (ಜಲದೇವತೆ) ಮಕ್ಕಳು ಎಂದು. ಇವರಲ್ಲಿ ಪರಸ್ಪರ ಮದುವೆಯ ಸಂಬಂಧಗಳಿಲ್ಲ. ಆದರೆ, ಜೊತೆಯಲ್ಲಿ ಬದುಕುತ್ತಾರೆ.

ಟೋಕ್ರೆ ಕೋಳಿ ಬುಡಕಟ್ಟಿನವರು ನದಿ, ಕೊಳಗಳಿರುವ ಪ್ರದೇಶದ ಊರುಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಯಾಕೆಂದರೆ ಮೂಲ ಕಸುಬಾದ ಟೋಕ್ರೆಯನ್ನು ಕೊಳ, ನದಿಗಳಲ್ಲಿ ಹಾಕಿ ಜನರನ್ನು ಒಂದು ದಡದಿಂದ ಇನ್ನೊಂದು ದಡಕ್ಕೆ ತಲುಪಿಸುವುದಕ್ಕೆ ಇದು ಸಹಕಾರಿಯಾಗುವುದು. ಆದರೆ ಕಾಲ ಬದಲಾದಂತೆ ಆಧುನಿಕರಣಕ್ಕೆ ಒಳಗಾದ ಜನರು ಈ ವೃತ್ತಿಯಿಂದ ಜೀವನ ಸಾಗಿಸುವುದು ಅಸಾಧ್ಯವೆನಿಸಿದಾಗ ಬೇರೆ ಬೇರೆ ಕಸುಬುಗಳನ್ನು ಕೈಗೊಳ್ಳಲು ನಗರ, ಪಟ್ಟಣಕ್ಕೆ ಹೋಗಿರುವುದನ್ನು ಕ್ಷೇತ್ರಕಾರ್ಯದ ಮೂಲಕ ಕಂಡು ಬಂದಿದೆ.

ಟೋಕ್ರೆಯು ಗಾತ್ರದಲ್ಲಿ ಚಿಕ್ಕದಾಗಿದ್ದರಿಂದ ೧೨ ರಿಂದ ೧೫ ಜನರನ್ನು ಅಥವಾ ೧೧ ಕ್ವಿಂಟಲ್ ಪದಾರ್ಥಗಳನ್ನು ಸಾಗಿಸುವ ಸಾಮರ್ಥ್ಯ ಹೊಂದಿದೆ. ಸಮುದ್ರದಲ್ಲಿ ಅದನ್ನು ಹಾಕಿ ಜನರನ್ನು ಸಾಗಿಸುವುದು ಅಸಾಧ್ಯವಾಗಿದೆ. ಯಾಕೆಂದರೆ ಸಮುದ್ರದಲ್ಲಿ ಅಲೆಗಳು ಬರುವುದರಿಂದ ಟೋಕ್ರೆ ಮುಳುಗುವ ಸಾಧ್ಯತೆಯಿರುವುದರಿಂದ ಟೋಕ್ರೆಯ ಬದಲಾಗಿ ಹಡಗನ್ನು ಮಾತ್ರ ಬಳಸುತ್ತಾರೆ. ಹೊಳೆ, ನದಿಗಳಲ್ಲಿ ಟೋಕ್ರೆ ಹಾಕಿ ಕೋಲಿನಿಂದ ನೀರನ್ನು ಹೊಡೆದು ಜನರನ್ನು, ವಸ್ತುಗಳನ್ನು ಸಾಗಿಸುವಂಥ ಸಮುದಾಯದವರಿಗೆ ಟೋಕ್ರೆ ಕೋಳಿ ಎಂದು ಕರೆಯುವರು. ಕನ್ನಡದ ಕೊಳ>ಕೊಲ>ಕೋಲ ಎಂಬ ಪದದಿಂದ ಕೋಲಿ ಪದ ಉತ್ಪತ್ತಿಯಾಗಿರುವ ಸಾಧ್ಯತೆಯೂ ಇದೆ.

ಬೀದರ ಜಿಲ್ಲೆಯ ಬೀದರ, ಔರಾದ, ಬಸವಕಲ್ಯಾಣ ಹಾಗೂ ಭಾಲ್ಕಿ ತಾಲೂಕುಗಳಲ್ಲಿ 'ಕೋಲ್' ಪದ ಸೂಚಿಸುವ ಕೊಳ್ಳೂರ್, ಕೊಳಾರ, ಕೋಳವಾಡಿ ಎಂಬ ಹೆಸರುಗಳ ಗ್ರಾಮಗಳಿವೆ.

### ೮. ಟೋಕ್ರೆ ಕೋಳಿ ಪದದ ಅರ್ಥ ವಿವರಣೆ

ಟೋಕ್ರೆ ಕೋಳಿ ಎಂಬ ಶಬ್ದವು ಮರಾಠಿ ಮತ್ತು ಉರ್ದು ಭಾಷೆಯ ಮಿಶ್ರಿತ ರೂಪ. ಕೋಲಿ ಎಂದರೆ ಬೇಸ್ತ, ಅಂಬಿಗ, ಕಬ್ಬಲಿಗ ಎಂದರ್ಥ. ಕೋಲ್ ಎಂದರೆ ಉದ್ದನೆಯ ಕಟ್ಟಿಗೆ ಎಂದರ್ಥ. ನಾವೆ ನಡೆಸುವ ಹರಗೋಲಿಗೂ ಕೋಲ್ ಎಂದು ಹೇಳುವರು. ಆದ್ದರಿಂದ ಇವರಿಗೆ ಕೋಲಿ ಅಥವಾ ಕೋಳಿ ಎಂದು ಕರೆಯುತ್ತಾರೆ.

ಪ್ರಾಚೀನ ಕಾಲದಲ್ಲಿ ಹೊಳೆ, ಹಳ್ಳ ನದಿ, ಸಮುದ್ರಗಳಲ್ಲಿ ಸರಕು ಸಾಗಾಣಿಕೆ ಮಾಡುವ ಕೆಲಸ ಇವರದಾಗಿತ್ತು. ಇಡೀ ವಿಶ್ವದ ತುಂಬ ಈ ಜನ ಅಂದಿನಿಂದ ಇಂದಿನವರೆಗೆ ಹೊಳೆ, ಹಳ್ಳ, ನದಿ, ಸಮುದ್ರದ ದಂಡೆಗಳಲಿದ್ದ ಜನತೆಗೆ ಆಹಾರವಾಗಿ ಮೀನು ಕೊಡುವುದರ ಜೊತೆಗೆ ಅವರನ್ನು ಸೇತುವೆಯಿಲ್ಲದ ಆ ಕಾಲದಲ್ಲಿ ಅವರ ಸರಕು ಸಾಮಾನುಗಳನ್ನು ಸಾಗಿಸುವ ಕೆಲಸ ಇವರದ್ದಾಗಿತ್ತು. ಇದೊಂದು ಮಹಾವೈಜ್ಞಾನಿಕ ಸಂಶೋಧನೆಯೇ ಸರಿ(ವಾಲೀಕಾರ, ಚೆನ್ನಣ್ಣ:೨೦೦೦:೩.೨೩).

ಟೋಕ್ರೆ ಕೋಳಿ ಜನರು ಆಧುನಿಕತೆಗೆ ಒಳಗಾಗಿ ಈ ಜನ ಕಾಲ ದೇಶ ಪರಿಸರಗಳಿಗೆ ತಕ್ಕಂತೆ ಬೇರೆ ಬೇರೆ ವೃತ್ತಿಗಳನ್ನು ಕೈಗೊಂಡರೂ ಅವರು ಮೂಲತಃ ಕೋಲ ಜನಾಂಗ ಎಂಬುದು ಅವರೆಲ್ಲರ ನಡೆ-ನುಡಿ ರೂಪ-ರೇಷೆ, ಆಚಾರ-ವಿಚಾರ, ಸಂಪ್ರದಾಯಗಳಿಂದ ತಿಳಿದು ಬರುತ್ತದೆ. ಇಂದು ಅನೇಕ ಬುಡಕಟ್ಟುಗಳು ತಮ್ಮ ಹೊಟ್ಟೆಪಾಡಿಗಾಗಿ ನಗರದಲ್ಲಿ ವಾಸಿಸುತ್ತಿದ್ದಕ್ಕಾಗಿ ನಗರ ಸಂಸ್ಕೃತಿ ಅವರಿಗೆ ಗೊತ್ತಿಲ್ಲದ ಹಾಗೆ ಅವರ ಮೇಲೆ ಪ್ರಭಾವ ಬಿರುತ್ತಿದೆ. ಇದರಿಂದ ಮೂಲ ಸಂಸ್ಕೃತಿಗೆ ಧಕ್ಕೆ ಒದಗುವ ಸಾಧ್ಯತೆಯಿದೆ.

### ೯. ಕೋಲ್ ಜನಾಂಗದ ಮೂಲ

ಭಾರತದ ಮೂಲ ನಿವಾಸಿಗಳಲ್ಲಿ ಕೋಲಿ ಜನಾಂಗದವವರು ಪ್ರಮುಖರು. ಇವರನ್ನು ಕೋಲ್ ಅಥವಾ ಕೋರ್ ಎಂದು ಕರೆಯುತ್ತಾರೆ. ಸಂಸ್ಕೃತ ಸಿದ್ಧಾಂತ ಕೌಮುದಿ, ಪಾಣಿನಿಯಲ್ಲಿ ಲ್ ಮತ್ತು ರ್ ಕ್ಕೆ ಬೇಧವಿಲ್ಲವೆಂದು ಹೇಳಲಾಗಿದೆ, ಸುಮಾರು ೬೦೦೦ ವರ್ಷಗಳ ಹಿಂದೆ ಆರ್ಯರು ಮಧ್ಯ ಏಷ್ಯಾದಿಂದ ಸುಸಂಘಟಿತರಾಗಿ ಖೈಬರ ಕಣಿವೆಯ ಮೂಲಕ ಭಾರತಕ್ಕೆ ಬಂದು ಕೋಲಿ ಜನಾಂಗದ ಮೇಲೆ ಆಕ್ರಮಣ ಮಾಡಿದರು. ಆಗ ಕೆಲವು ಜನ ಕಾಡಿನಲ್ಲಿ ಓಡಿ ಹೋದರು, ಕೆಲವರು ಆರ‍್ಯರಿಗೆ ದಾಸ್ಯರಾಗಿ ಕೆಲಸ ನಿರ್ವಹಿಸುತ್ತಿದ್ದರು. ಕೆಲವರು ರಾಜಸ್ಥಾನ, ಸಿಂಧ, ಪಶ್ಚಿಮ ಗುಜರಾತದ ಕಡೆಗೆ ಮತ್ತು ಮಧ್ಯ ಪ್ರದೇಶದಿಂದ ಮಹಾರಾಷ್ಟ್ರ, ಕರ್ನಾಟಕ, ಕೇರಳ, ತಮಿಳನಾಡಿನ ದಕ್ಷಿಣದ ಕಡೆಗೆ ಓಡಿ ಹೋದರು. ದಕ್ಷಿಣದಲ್ಲಿ ಕೋಲಿ ಮೂಲ ನಿವಾಸಿಗಳ ಕೋಲವನ ಸಾಮ್ರಾಜ್ಯ ಉಳಿಯಿತು. ಇವರು ಕೋಲ್ ಸಾಮ್ರಾಜ್ಯ ನಡೆಸುತ್ತಿದ್ದರು. ಅವರ ರಾಜಧಾನಿ ಕೊಲ್ಲಾಪುರ. ಅಲ್ಲಿಯ ಯುವರಾಜ ಕರ್ವೀರ. ಅವನು ಬಹಳ ಶೂರ, ವೀರನಾಗಿದ್ದನು. ಸೈಯಾದಿ-ಸಾತಮಾಲಾ-ಬಾಲಘಾಟ-ಮಹಾದೇವ ಬೆಟ್ಟ ಸಮೀಪದ ಸಮತಲ ಪ್ರದೇಶಕ್ಕೆ ಕೋಲ್‌ವನವೆಂದು ಕರೆಯುತ್ತಾರೆ. ಇದು ಕೋಲ್ (ಕೋಲಿ) ಜನಾಂಗದ ಪಳುವಳಿಕೆಯ ಸಂಕೇತ.

ಕೋಳಿ ಬುಡಕಟ್ಟು ಭಾರತದ ಪ್ರಾಚೀನತಮ ಕೋಲ್ (Kol) ಬುಡಕಟ್ಟಿನಿಂದ ಬೇರ್ಪಟ್ಟು ಒಂದು ಸ್ವತಂತ್ರವಾದ ಬುಡಕಟ್ಟಾಗಿ ರೂಪಗೊಂಡಂತಿದೆ. ಸಿರಾಜ್-ಉಲ್-ಹಸನ್ ಅವರು ಕೋಳಿ ಎಂಬುದರಲ್ಲಿ ಕುಲ ಎಂಬ ಅರ್ಥವನ್ನು ಹಾಗೂ ಹಲವು ಕುಟುಂಬದಿಂದ ರಚಿಸಲ್ಪಟ್ಟಿರುವುದೆಂದು ಹೇಳುವರು. ಇದು ಕುಟುಂಬ ಹಾಗೂ ಕುಲದ ಉಗಮವನ್ನು ಪ್ರತಿನಿಧಿಸುವುದು. ಆದರೆ ಕೋಳಿಗರೆಂದರೆ ಮೀನುಗಾರರೆಂಬುದನ್ನು ಬಹುಸಂಖ್ಯಾತರು ಅಲ್ಲಗಳೆಯುವುದಿಲ್ಲ.

ಕೋಲರು ಭಾರತದಲ್ಲಿ ಆರ್ಯರು ಮತ್ತು ದ್ರಾವಿಡರಿಗಿಂತಲೂ ಮೊದಲು ಬಂದ ಜನ. ಅದು ಪೂರ್ವ ಭಾಗದಿಂದ ಎಂದರೆ ತಿಬೇಟ, ಬ್ರಹ್ಮದೇಶ, ಬಂಗಾಳದತ್ತಣಿಂದ ಬಂದು ಉಳಿದ ಕಡೆಗೂ ಹಬ್ಬಿತ್ತೆಂದು ಪಾಶ್ಚಿಮಾತ್ಯ ಸಂಶೋಧಕರು ನಿರ್ಣಯಿಸಿದ್ದಾರೆ. ಇದಕ್ಕೆ ಸಾಮಾನ್ಯವಾಗಿ ಎಲ್ಲ ವಿದ್ವಾಂಸರ ಒಪ್ಪಿಗೆಯೂ ದೊರೆತಿದೆ. ಪುರಾತನದ ಈ ಜನಗಳಲ್ಲಿ ಕೋಲರು ಮತ್ತು ಮುಂಡರ ಹರವಿನ ಎಡೆಗಳು ಕನ್ನಡ ನಾಡಿನಲ್ಲಿ ವಿಶೇಷವಾಗಿದೆ. ಕೊಲ್ಲೂರು, ಕೋಲಾರ, ಕೊಲ್ಲ, ಕೊಲ್ಲಗಿರಿ, ಕೋಲ್ಹಾಪುರ, ಕೊಳ್ಳೆಗಾಲ ಕೊಲ್ಲಿಪಾಕಿ ಮುಂತಾದವುಗಳು (ಜೋಶಿ ಶಂ.ಬಾ : ೧೯೯೭-೯೪). ಕೊಳ್ಳೂರು ಕೊಳಾರ ಈ ಹೆಸರಿನ ಗ್ರಾಮಗಳು ಕರ್ನಾಟಕದಲ್ಲಿ ಹಾಗೂ ಬೀದರ ಜಿಲ್ಲೆಯಲ್ಲಿವೆ. ಹೀಗಾಗಿ ಬೀದರ ಮೂಲನಿವಾಸಿಗಳಲ್ಲಿ ಟೋಕ್ರೆಕೋಳಿಗರೂ ಸೇರುವರು. ಬೇಡರೂ ಬಿಲ್ಲವರೂ ಅಂಬಿಗಾರರೂ ಇವರು ಕನ್ನಡ ನಾಡಿನ ಮೂಲನಿವಾಸಿಗಳು. ಕೋಲ ಎಂದು ಅವರನ್ನು ಕರೆಯುವರು. ಮುಂಬೈ ಕರಾವಳಿಯಲ್ಲಿ ಕೋಳಿಗಳೆಂಬ ಜನವಿದೆ. ಇವರೂ ಕೋಲ ಜನ ಇದ್ದಿರಲೂ ಸಾಧ್ಯವಿದೆ. ಜಂಜಿರಾದ ಅರಸು ಕೋಳಿ ವಂಶದವರು(ಅವರೇ: ೧೯೪೭:೯೭-೯೮).

ವಿಶ್ವದ ಅತ್ಯಂತ ಮುಖ್ಯ ಮತಗಳಲ್ಲಿ ಗಂಗಾಮತವೂ ಒಂದು. ಇದು ನೂರಾರು ನೀರು ಆಶ್ರಿತ ಸಮುದಾಯಗಳಿಗೆ ಜನ್ಮ ನೀಡಿರುವುದು. ಅಂಥ ಸಮುದಾಯಗಳಲ್ಲಿ ಟೋಕ್ರೆ ಕೋಳಿ ಬುಡಕಟ್ಟು ಒಂದೆಂದು ಹೇಳಬಹುದು. ಟೋಕ್ರೆ ಎಂದರೆ ನಾವೆ, ದೋಣಿ ಅಥವಾ ಹರಿಗೋಲ ಎಂದರ್ಥ. ಹಾಗೆಯೇ ಕೋಲ್ ಎಂಬುದಕ್ಕೂ ಅದೇ ಅರ್ಥವನ್ನು ಹೊಂದಿರುತ್ತದೆ. ಕೊಲ್>ಕೋಲ್>ಕೋಳ್>ಕೋಳಿ ಹೀಗೆ ಪರಿವರ್ತನೆ ಯಾಗಿರುವ ಸಾಧ್ಯತೆಗಳಿವೆ. ಕಬ್ಬಲಿ ಎಂಬ ಪದಕ್ಕೂ ಸಂಸ್ಕೃತದಲ್ಲಿ 'ನಾವು' ಇಲ್ಲವೆ 'ದೋಣಿ' ಎಂಬ ಅರ್ಥವನ್ನೇ ಕೊಡಲಾಗಿದೆ. ಕಬ್ಬಿಲರ ಹುಟ್ಟನ್ನು ಕುರಿತು ಶ್ರೀರುದ್ರ ಭಾರತವೆಂಬ ಬ್ರಹ್ಮಾಂಡ ಪುರಾಣ ಹೀಗೆ ಪ್ರಸ್ತಾಪಿಸುತ್ತದೆ. "ಆದಿ ರುದ್ರನ ಬಲ ಪಾದದ ಬೆರಳಿನಲ್ಲಿ ಬಿಲ್ಲ ಕಬ್ಬಿಲರು ಹುಟ್ಟಿದರು. ಆ ಕಬ್ಬಿಲರಿಗೆ ನೂರಾ ಒಂದು ಕುಲಮಿಶ್ರವು. ಅವರ ನಾಮ ಎಲುಕ, ಚಟಕ, ಹಲಿಸಿಗ, ಮಾಸಾಳ, ವ್ಯಾಧ, ಬ್ಯಾಟೆಗಾರ, ಜಾನಗಾರ, ಎರಳೆಗಾರ, ವ್ಯಾಘ್ರ, ಸಗಟಕಲ್ಲ, ಸಗಟಲಕ್ಷ್ಮಿ, ಸಗಟಅಂಬಿಗ, ತೆಪ್ಪಗಾರ, ಮೊಸಳೆಗಾರ, ಸರವಂದಿಗ, ತಳವಾರ, ಸುಣಗಾರ, ಬಿಲ್ಲುಗಾರ, ನಾಟಗಾರ, ಸಂಗತಳಗಾರ, ಎಲುಮಗಾರ, ಸಣಬಗಾರ, ಲೋಹಗಾರ, ಪಟೇಗಾರ, ಹುರಿಗಾರ, ಅಪಲಸಂಧಿ, ಅಲಗಸಂಧಿ, ಸುಂದಣಗಾರ, ಬೆಳ್ಳಿತಾಂಡರ, ಹಣ್ಣುಗಾರ, ಹಣಿಗಾರ, ಕರ್ಣಾಂಬುಜಿ, ಅಲ್ಲರ, ಚಿಕ್ಕಅಲ್ಲರ, ಕೌಹರ, ಅಂಬಿಗಸಾನಿ, ಮಾವತಿಗ, ಬೆಸ್ತರವ, ಅಹಿರ ಕೋಳಿಜ, ಗೌಸಣಿಗಾರ, ಬೈಲಗಮ್ಮಾರ, ಅತ್ತೆಗಾರ, ನೆಳೆಬಂಚಿಗಾರ, ಬಹೂರೂಪ, ಕೊರವಂಜಿ ಇತ್ಯಾದಿ ನೂರಾವೊಂದು ಕುಲದೊಳಗೆ ಮಿಶ್ರಕುಲ ಮೂರು. ಅವರ ನಾಮ ನವಿಲಕುಲ, ಹುಂಜಕುಲ,

ಜೋಕುಮಾರಕುಲ. ಇವರೆಲ್ಲರ ಕುಲ ಸ್ವಾಮಿ ಭೀಲ್ಲೇಶ್ವರ ಲಿಂಗವು. ಅದು ಚರಲಿಂಗದ ಶಾಖೆ. ಇವರಿಗೆ ಗರುಡ ಗಂಧರ್ವರ ಗೋತ್ರ ಧನುವಂಶ. ಅಲಗು ಶಸ್ತ್ರಂಗಳಕುಲ ಗಂಗೆಯ ಜೋಕುಮಾರ, ವೃತ್ತಿ ಮದು ಮಾಂಸದ ನಡತಿ ನಾನಾ ಜೀವಿಗಳ ಹಿಂಸಾಗಮ" ಕಬ್ಬಲಿ-ಕಬ್ಬಿಲಿ-ಕಬ್ಬಲಿಗರು ಇವರೆಲ್ಲರು ಭಿನ್ನರಾಗಿರದೆ ಟೋಕ್ರಿ ಕೋಳಿಗಳೇ ಆಗಿರುವರು. ಕೋಳಿಗಳನ್ನು ಕುರಿತು ಮುಂಬೈ ಗ್ಯಾಝೆಟೀಯರ್‌ನಲ್ಲಿ ಇವರು ಕಾನಡ ಜಿಲ್ಲೆಯಲ್ಲಿ ಸ್ವಲ್ಪ ಜನರು, ಉತ್ತರ ಕೊಂಕಣದಿಂದ ಬಂದು ವಾಸಿಸುತ್ತಾರೆ. ಫತ್ತೆ ಮಾರಿಗಳಲ್ಲಿ ಮಾಲು ಮಾರಾಟಕ್ಕಾಗಿ ದಕ್ಷಿಣದಿಂದ ಉತ್ತರಕ್ಕೂ ಉತ್ತರದಿಂದ ದಕ್ಷಿಣಕ್ಕೂ ವೈಯ್ಯುವದೇ ಇವರ ಮುಖ್ಯ ಹೊರೆಯು. ಕಬ್ಬಲಿಗರಿಗೆ ಮರಾಠಿ ಭಾಷೆಯಲ್ಲಿ 'ಕೋಳಿ' ಎಂದೆನ್ನುವರು ಎಂದು ಪ್ರಸ್ತಾಪಿಸಲಾಗಿದೆ. ಈ ಮೇಲಿನ ಹೇಳಿಕೆಯಿಂದ ಕೋಳಿಗಳೇ ಕಬ್ಬಲಿಗರೆಂದು ತಿಳಿದು ಬರುತ್ತದೆ(ಮೈತ್ರಿ,ಕೆ,ಎಂ:೨೦೦೨:೧೧೫).

ಎಡ್ಗರ್ ಥರ್ಸ್ಟನ್ ಮತ್ತು ಕೆ. ರಂಗಾಚಾರಿಯರು ಕೋಲಿಗಳನ್ನು ಕುರಿತು ತಮ್ಮ Castes and Tribes of Southern India" ಎಂಬ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ. In the Madras Census Report, 1901, the Kolis are the described as being a Bombay Caste of Fishermen and Boatmen in south Canara.......(Thurston E and K Rangachari:1906:301).ಅಂದರೆ ಕೋಳಿಗಳು ಮುಂಬೈಯ ಮೀನುಗಾರರು ಹಾಗೂ ದಕ್ಷಿಣ ಕನ್ನಡದ ನಾವಿಕರೆಂದು ಅಥವಾ ಅಂಬಿಗಾರರು ಎಂಬುದು ಸ್ಪಷ್ಟವಾಗುತ್ತದೆ.

ಭಾರತದ ಪ್ರಮುಖ ಬುಡಕಟ್ಟುಗಳಲ್ಲಿ ಕೋಳಿ ಬುಡಕಟ್ಟು ಒಂದು. ಇದು ಗುಜರಾತ್, ಮಹಾರಾಷ್ಟ್ರ, ದಾದ್ರ ಮತ್ತು ನಗರ ಹವೇಲಿ, ಕರ್ನಾಟಕ, ರಾಜಸ್ಥಾನ ಮತ್ತು ಒರಿಸ್ಸಾ ರಾಜ್ಯಗಳಲ್ಲಿ ಹರಡಿಕೊಂಡಿವೆ. ಈ ಬುಡಕಟ್ಟನ್ನು ವೈಟಿಕೋಳಿ, ಮಂಗೇಲಕೋಳಿ, ಚುನವಾಲಿಯ ಕೋಳಿ, ಡೋರ್‌ಕೋಳಿ, ಮಲ್ಹಾರಕೋಳಿ, ಸೋನ್‌ಕೋಳಿ, ತಳಪಡಕೋಳಿ, ಮಹಾದೇವಕೋಳಿ, ಕೋಳಿರಾಜಪೂತ್, ಟೋಕ್ರೆಕೋಳಿಗಳೆಂದು ಕರೆಯಲಾಗುವುದು. ಈ ಮೇಲಿನ ಹೆಸರುಗಳೆಲ್ಲ ಕಸುಬಿನ ಆಧಾರದ ಮೇಲೆ ಭೀನ್ನವಾಗಿರುವವು. ಇವು ಮೀನುಗಾರಿಕೆ ಕೃಷಿಕೂಲಿ, ಕೃಷಿ, ಬಿದಿರುಕೆಲಸ, ಪಶುಪಾಲನೆ ಇತ್ಯಾದಿ ಕಾಯಕಗಳನ್ನು ಒಳಗೊಂಡಿವೆ. ಇವರನ್ನು ಹಿಂದೆ ನಿಷಾದ ಹಾಗೂ ವ್ಯಾದರೆಂದು ಕರೆದಂತಿದೆ. ಮಹಾಭಾರತ ಹಾಗೂ ರಾಮಾಯಣ ಮಹಾಕಾವ್ಯಗಳನ್ನು ಬರೆದ ವ್ಯಾಸ ಹಾಗೂ ವಾಲ್ಮೀಕಿ ಋಷಿಗಳು ತಮ್ಮ ಪೂರ್ವಜರೆಂದು ಹೇಳಲಾಗಿದೆ(ಮೈತ್ರಿ,ಕೆ.ಎಂ:೨೦೦೨:೧೧೫).

## ೧೦. ಕೋಲ್‌ರ ಮೂಲದ ಬಗ್ಗೆ ಇರುವ ಹೇಳಿಕೆಗಳು ಮತ್ತು ಪ್ರಸಾರ

೧) ಡಾ.ಸ್ಟೇನ್ ಕೋನಾವುರವರ ಪ್ರಕಾರ "ಸಾವಿರಾರು ವರ್ಷಗಳ ಪೂರ್ವದಲ್ಲಿ ಕೋಲ್ ಎನ್ನುವವರು ಸಮಸ್ತ ಉತ್ತರ ಭಾರತ ಹಾಗೂ ದಕ್ಷಿಣ ಭಾರತದಲ್ಲಿ ತಮ್ಮ ಅದಿಪತ್ಯವನ್ನು ಸ್ಥಾಪಿಸಿದರು. ಭಾರತದ ಕೋಲ್ ಮುಂಡರು ಆದಿಮ ಜನಾಂಗದವರಾಗಿದ್ದರು. ಕೋಲ್ ಮುಂಡರ ಭಾಷೆ ಆಷ್ಟ್ರೋ ಏಷಿಯಾಟಿಕ್ ಆಗಿತ್ತು. ಇವರು ಇಂದು ಕೂಡ ಮಧ್ಯ ಭಾರತದ ಪೂರ್ವ ಭಾಗದಲ್ಲಿ ಹಿಮಾಲಯದ ದಕ್ಷಿಣ ಸೀಮಾಂತ ಪ್ರದೇಶದಲ್ಲಿ ಮತ್ತು ಕಾಶ್ಮೀರ, ನೇಪಾಳದ ಪೂರ್ವ ಭಾಗದಲ್ಲಿ ಈ ಭಾಷೆ ಮಾತಾಡುತ್ತಾರೆ. ಆರ್ಯ ಮತ್ತು ಮುಂಡ ಕೋಲ್ ಭಾಷೆಯಲ್ಲಿ ಕೊಡುಕೊಳ್ಳುವಿಕೆ ಕಂಡು ಬರುತ್ತದೆ. ಕದಲಿ(ಕೇಲಾ), ಕಪಾಸ (ಹತ್ತಿ), ಪಾನ (ಎಲೆ) ಬಾಲ್

(ಕೇಶ) ಶಾಲಮಲೀ (ರೇಷ್ಮೆ ಬಟ್ಟೆ) ಇಂಥ ಶಬ್ದಗಳು ಕೋಲ್ ಭಾಷೆಯಿಂದ ಆರ್‍ಯ ಭಾಷೆಗೆ ಬಂದವು (ಕನ್ಹೆಯಾಲಾಲ್,ಚಂಚರಿಕ್:೧೯೯೫:೩೬). ಕೋಲ್ ಜನಾಂಗದವರ ಉತ್ಪತ್ತಿಯು ಆದಿ ಬೇಟೆಗಾರರಿಂದಾಗಿದೆ. ಸಿಂಧೂ ಸಂಸ್ಕೃತಿಯ ಕೋಲಿ ಮತ್ತು ಬುದ್ಧ ಕಾಲದ ಕೋಲಿಯವರು ಈ ಹಿನ್ನೆಲೆಯವರೆ ಆಗಿದ್ದಾರೆ.

೨) ಬಿಷಪ್ ಕಾಲ್ಡವೆಲ್‌ರು ದ್ರಾವಿಡರ ಉನ್ನತ ಸಂಸ್ಕೃತಿಯ ವರ್ಣನೆ ಮಾಡುತ್ತಾರೆ. ಈಶ್ವರನಲ್ಲಿ ವಿಶ್ವಾಸ ಇರುವವರು, ನಗರ ರಚನೆ, ಶಾಸನವಿಧಿ, ಪೋತ (ಪುಸ್ತಕ) ನಿರ್ಮಾಣ, ಹೊಲದ ಕೆಲಸ, ನೇಕಾರಿಕೆಯ ಕೆಲಸ, ಯುದ್ಧಕಲೆ ಇವರಿಗೆ ಗೊತ್ತಿತ್ತು. ಕೋಲ್ ಕೋಯಗಳು ದ್ರಾವಿಡ ಸಂಸ್ಕೃತಿಯ ಒಂದು ಜನಜಾತಿಯಾಗಿತ್ತು. ಇಂಥ ಯಾವುದೋ ಅಂಧಕಾರ ಯುಗದಲ್ಲಿ ದ್ರಾವಿಡದ ಕೋಲ್ ಜನರು ಭೂಮಧ್ಯ ಸಾಗರದ ಪೂರ್ವದಿಂದ ಮೇಸೊಪೋಟೋಮಿಯ ಮತ್ತು ಬಲುಚಿಸ್ಥಾನ ಮಾರ್ಗದಿಂದ  ಬಂದರು ಎಂದು ಮಹಾಜನ ಅವರು ತಮ್ಮ ಪ್ರಾಚೀನ ಭಾರತ(Ancient India) ಎಂಬ ಪುಸ್ತಕದಲ್ಲಿ ತಿಳಿಸಿದ್ದಾರೆ. ೬೦೦೦ ವರ್ಷಗಳ ಹಿಂದೆ ಆರ್ಯರು ಭಾರತಕ್ಕೆ ಬಂದಾಗ ಆರ್‍ಯರ ಮತ್ತು ಕೋಲ್ ಮುಖಂಡರೊಡನೆ ಸಂಘರ್ಷವಾಯಿತು. ಇವರು ಸ್ವಲ್ಪ ಸ್ವಲ್ಪ ಕಾಡಿನಲ್ಲಿ ಗುಡ್ಡಗಾಡು ಪ್ರದೇಶದಲ್ಲಿ ವಾಸಿಸತೊಡಗಿದರು ಎಂದು ಹೇಳಲಾಗಿದೆ.

೩) Linguistic Survey of India ದಲ್ಲಿ ಕೋಲ್ ಜನಾಂಗದ ಮೂಲ ಆಸ್ಟ್ರೇಲಿಯ ಎಂದು ತಿಳಿಸಲಾಗಿದೆ. ಇವರು ಆಫ್ರಿಕಾ ಮೂಲದವರು. South East Asiaದಿಂದ ಆಸ್ಟ್ರೇಲಿಯಾಕ್ಕೆ ಬಂದವರು ಎಂದು ಹೇಳಲಾಗಿದೆ. ಕೋಲ್ ಎಂದರೆ ನಾವು ಅಥವಾ  ನಾವೆಯನ್ನು ನಡೆಸುವವರು. ಕೋಲಿ ಎಂದರೆ ನಾವಿಕ, ಆಸ್ಟ್ರೇಲಿಯಾದಿಂದ ಭಾರತಕ್ಕೆ  ವಿಶ್ವದ ಬೇರೆ ಬೇರೆ ಕಡೆಗಳಿಂದ ಮುಂಡಾ, ಸಂತಾಲ, ಗೊಂಡ ಜನಗಳಂತೆ ಈ ಕೋಲ್ ಜನಾಂಗ ಭಾರತಕ್ಕೆ ಬಂದವರು.

೪) ಫಾದರ್ ಹೆರಸ್ ಅವರ ಪ್ರಕಾರ ಮಹೆಂಜೋದಾರೊ ಸಂಸ್ಕೃತಿಯಲ್ಲಿ ಕೋಲ್ (ಕೋಲಿಕೊಸ್) ಜನಾಂಗದವರು ಉಪಸ್ಥಿತರಿದ್ದುದರ ಕುರಿತು ಹೇಳಿದ್ದಾರೆ. ಚೋಲೋ (ಕೋಲೋ) ವೂರೋಯಿವುರ ಇವರ ರಾಜಧಾನಿ. ಇದು ತಿರುಚನಪಳ್ಳಿಯ ಒಂದು ಭಾಗವಾಗಿತ್ತು. ಆ ಒಂದು ಸ್ಥಳಕ್ಕೆ ಕೋಲಿ ಎಂದು ಕರೆಯುತ್ತಿದ್ದರು. ಇದು ಅಲ್ಲಿನ ಮುದ್ರೆಯಿಂದ ಸಿದ್ಧವಾಗುತ್ತದೆ. ಅದರ ಮೇಲೆ ಆನೆ ಸೋಲಿಸುವ ಒಂದು ಹುಂಜದ ಚಿತ್ರವಿತ್ತು. ಶ್ರೇಷ್ಠರಾದ ಗಜಪೂಜೆ ಮಾಡುವಂಥವರನ್ನು ಸೋಲಿಸುವ ಹೋಲಿಕೆಯು ಆ ಮುದ್ರೆಯ ಮೇಲಿನ ಚಿತ್ರದಿಂದ ತಿಳಿದು ಬರುತ್ತದೆ. ಎತ್ತು ಮತ್ತು ಹುಲಿಯನ್ನು ಪೂಜಿಸುವಂಥದ್ದು ಉತ್ಖನನದಿಂದ ತಿಳಿದುಬರುತ್ತದೆ. 'ಮಹೆಂಜೋದಾರೊ ಭೂ ಅಗೆತದಲ್ಲಿ ದೊರೆತ ಹಲವಾರು ಮುದ್ರೆಗಳ ಮೇಲೆ ಗಜ ಪ್ರತೀಕ ವಾದ ಆರ್‍ಯರು ಕೋಲಿ ಜಾತಿಯವರಿಗೆ ಸೋಲಿಸಿದ ಚಿತ್ರಗಳೇ ಕಂಡುಬರುತ್ತವೆ' (New Indian Entiquary:1938:275-9).

೫) ಭಾರತದ ಆದಿವಾಸಿಗಳಾದ ಕೋಲ್, ಮುಂಡಾ, ಸಂತಾಲ ಮುಂತಾದ ಬುಡಕಟ್ಟಿನ ಜನಾಂಗವನ್ನು ಭಾರತೀಯ ಭೀಮಸೇನೆಯ ನಾವಿಕರಾದ ಶ್ರೀ ಬಿ. ಶ್ಯಾಮಸುಂದರ ಅವರು ತಮ್ಮ They Burn ಎಂಬ ಕೃತಿಯಲ್ಲಿ ಇವರಿಗೆ ಮೂಲ ಭಾರತೀಯರೆಂದಿದ್ದಾರೆ. ಇವರು ಪುರಾಣಗಳಲ್ಲಿ ಸೃಷ್ಟಿಸಿದ ಮಹಾ ಆದಿಗರು, ಮಾದಿಗರು ಎಂದು ಹೇಳಿದ್ದಾರೆ. ಇವರೇ ಆದಿಜಾಂಬವ ಜನ. ಪುರಣಗಳು ಏನೇ ಹೇಳಲಿ ಇವರು ಆದಿವಾಸಿಗಳೆಂಬುದು  ನಿಜ.

೬) ಡಾ. ಅಂಬೇಡ್ಕರ್ ಅವರ ವಾದ ಬೇರೆಯಾಗಿದೆ. ಅವರ Who was Shudrasದಲ್ಲಿ ದ್ರಾವಿಡ ಜನಾಂಗದಲ್ಲಿ ಇನ್ನೂ ಬೆರೆಯದೆ ಇದ್ದ ಗುಡ್ಡಗಾಡಿನಲ್ಲಿರುವ ಕೋಲ್, ಮುಂಡಾ, ಸಂತಾಲ್ ಜನರನ್ನು ಮೂಲ ಭಾರತೀಯರೆಂದು ಪುರಾಣಗಳ ಪ್ರಕಾರ ಮಹಾ ಆದಿಗ, ಮಾದಿಗ ಎಂದು ಬಿ.ಶ್ಯಾಮಸುಂದರ ಅವರು ಹೇಳಿರುವ ವಾದ ಬಿದ್ದು ಹೋಗಿರವುದು. ಇವರು ಪಂಚಮ ಅಂದರೆ ಶೂದ್ರ ವರ್ಗದಿಂದಲೇ ಬಂದು ಕಾಲಕಾಲಕ್ಕೆ ಬೇರೆಯಾದ ಜನ ಇರಬೇಕು ಎಂದು ಹೇಳಿರುವರು.

೭) ಕರ್ನಾಟಕ ಪ್ರದೇಶ ಟೋಕರೆ ಕೋಳಿ ಪರಿಶಿಷ್ಟ ವರ್ಗ(ರಿ) ಸಂಘ ಹುಬ್ಬಳ್ಳಿ-೫೮೦ ೦೨೪ ಜಿಲ್ಲೆ ಧಾರವಾಡ ಇವರು ಅಚ್ಚಿಸಿ ಸರ್ಕಾರಕ್ಕೆ ಮಾಡಿಕೊಂಡರುವ ವಿನಂತಿ ಪತ್ರದಲ್ಲಿ ಕೋಲ್ ಜನಾಂಗದ ವಿವರ ಹೀಗಿದೆ.

ಕೋಳಿಗಳ ಇತಿಹಾಸ ಮೂರ ಸಾವಿರಕ್ಕೂ ಹಿಂದಿನದು. ಇವರು ಕಾಶ್ಮೀರದ ಸಿಂಧೂ ನದಿಯ ಭಾಗದ 'ಕೋರಿ' ಕೊಳ್ಳದ ಮೂಲನಿವಾಸಿಗಳು. ಭಾರತದ ಮೇಲೆ ಆರ್ಯರ ದಾಳಿಗಳಿಂದ ಮತ್ತು ಮೇಲಿಂದ ಮೇಲೆ ಘಟಿಸಿದ ಭೀಕರ ಬರಗಾಲದಿಂದ ದೇಶದ ದಕ್ಷಿಣಕ್ಕೆ ಮೂರು ಭಾಗಗಳಾಗಿ ವಲಸೆ ಬಂದವರು. ದಕ್ಷಿಣಕ್ಕೆ ಮಧ್ಯದ (ಸೆಂಟ್ರೆಲ್ ವಿಂಗ) ಗುಂಪು ಮಹಾರಾಷ್ಟ್ರ, ಆಂಧ್ರ ಪ್ರದೇಶ, ಕರ್ನಾಟಕದಲ್ಲಿ ನೆಲೆಯೂರಿ, ಸಿಕ್ಕಂಥ ಕಸುಬುಗಳನ್ನು ಆಶ್ರಯಿಸಿ ಜೀವನ ಸಾಗಿಸಿಕೊಂಡು ಹೊರಟವರು.

ಸಂಸ್ಕೃತ ಭಾಷೆಯಲ್ಲಿ 'ರ' ಮತ್ತು 'ಲ' ಅಕ್ಷರಗಳಿಗೆ ಸಮಾನ ಅರ್ಥವಿದೆ. ಅಂದರೆ 'ರಿ' ಗೆ ಬದಲಾಗಿ 'ಲಿ' ಎಂತಲೂ ಬಳಸಬಹುದು. ಕಾರಣ ಆಡುಮಾತಿನಲ್ಲಿ ಅಥವಾ ಗ್ರಂಥಗಳಲ್ಲಿ ಮೂಲನಿವಾಸದ ಹೆಸರನ್ನು ಉದ್ದೇಶಿಸಿ ಬರೆಯುವ ಮುನ್ನ ಕೋಲಿ ಹೆಸರಿಗೆ ಬದಲಾಗಿ ಕೋಳಿ ಎಂದು ಬರುಬರುತ್ತಾ ಕಾಲ, ಪ್ರದೇಶ, ಭಾಷೆ ಉದ್ಯೋಗಗಳನುಸಾರ ಎಲ್ಲ ಹೆಸರುಗಳಿಗೂ ಅಪಭ್ರಂಶ ಹೆಸರುಗಳು ರೂಢಿಗೆ ಬಂದವು. ಕೋಳಿ ಹೆಸರಿಗೆ ಬದಲಾಗಿ ಕೋಲಿಯಾ, ಕೋಯಾ, ಕೊಳಚ, ಕೊಳಗೆ ಎಂತಲೂ ಕರೆಯುವದು ಆರಂಭವಾಯಿತು.

## ೧೧. ಇತಿಹಾಸದಲ್ಲಿ ಕೋಳಿಗಳು

ಸಾವಿರಾರು ವರ್ಷಗಳ ಹಿಂದೆ ಉತ್ತರ ಭಾರತದಲ್ಲಿ ಇಕ್ಷವಾಕು ವಂಶದ ಕ್ಷತ್ರಿಯ ರಾಜ ಅಜ ಆಳುತ್ತಿದ್ದ. ಇವನು ಕೋಲಿಯ ಶಕೆ ನಡೆಸಿದವನು. ಅಜನ ಪುತ್ರ ದಶರಥ. ರಾಮ, ಲಕ್ಷ್ಮಣ, ಭರತ, ಶತ್ರುಘ್ನ ಈತನ ಮಕ್ಕಳು. ಕೌಶಲ್ಯ (ಕೋಲ ಶ್ರೇಷ್ಠ) ರಾಮನ ತಾಯಿಯಾಗಿದ್ದಳು. ಕೈಕೈ (ಕೋಲಿ ಕಾಯ) ಭರತನ ತಾಯಿಯಾಗಿದ್ದಳು. ಇಕ್ಷುವಾಕು ವಂಶದಲ್ಲಿ ಮಹಾಸನ್ಮತಿ (ಮಹಾಸಮ್ಮತ್) ಹುಟ್ಟಿದರು. ಅವರು ಕ್ಷತ್ರಿಯ ಕೋಲಿ ಜಾತಿಯಲ್ಲಿ ಆದಿ ಪುರಷರೆಂದು ಹೇಳಲಾಗಿದೆ. ಶಾಖ್ಯ ಕೋಲಿಯವರು ಬುದ್ಧನ ಕಾಲದಲ್ಲಿ ಮಹತ್ವ ಪಡೆದಿದ್ದರು.

ಮಹಾವಸ್ತುವಿನ ಪ್ರಕಾರ ಇಕ್ಷವಾಕು ಕೋಸಲದ ಅರಸನಾಗಿದ್ದನು. ಇದರ ರಾಜಧಾನಿ ಸಾಕೇತ್ (ಅಯೋಧ್ಯ) ಆಗಿತ್ತು. ಯಾವುದೋ ಕಾರಣಾಂತರದಿಂದ ಸಾಕೇತದಿಂದ ಕೆಲವರನ್ನು ತೆಗೆದಾಗ ಕಪಿಲ ಋಷಿಯ ಆಶ್ರಮವನ್ನು ಸೇರಿದರು. ಕಪಿಲ (ಕೋಲ) ಋಷಿಯು ಕೋಲಿ ಶಾಖ್ಯಯರ ಬಹಳ ಶ್ರೇಷ್ಠ ಋಷಿಯಾಗಿದ್ದನು.

ಮಹಾಭಾರತದ ಗಾಂಧಾರಿ ಹಾಗೂ ಸತ್ಯವತಿ ಭಾರತದಲ್ಲಿ ಪ್ರಮುಖ ನಾರಿಯರು. ಕುರುವಂಶ ಇವರಿಂದಲೇ ಮುಂದುವರೆಯಿತು. ಈ ಹಿನ್ನೆಲೆಯಿಂದ ಕೋಲಿಯವರು ಕ್ಷತ್ರಿಯ ವಂಶದವರೆಂದು ಹೇಳಬಹುದು(ಕನ್ಹೈಯಾಲಾಲ್, ಚಂಚರಿಕ್:೧೯೯೫:೩೮-೪೦).

ಕ್ರಿ.ಶ. ಪೂರ್ವ ೮ನೇ ಶತಮಾನದಲ್ಲಿ ಆರ್ಯರು ಅಗಸ್ತ್ಯ ಮುನಿಯ ನೇತೃತ್ವದಲ್ಲಿ ವಿಂದ್ಯಾ, ಸಾತ್‌ಪೂಡಾ ಗುಡ್ಡಗಾಡು ದಾಟಿ ದಕ್ಷಿಣದ ಗೋದಾವರಿ ನದಿ ತೀರದಲ್ಲಿ ನೆಲೆಸಲು ಆರಂಭಿಸಿದರು. ಅಂತಹ ಸಮಯದಲ್ಲಿ ಕೋಲಿ ಮುಂತಾದ ಮೂಲ ನಿವಾಸಿಗಳಿಗೆ ಆರ್ಯರು ರಾಕ್ಷಸ, ಅಸೂರ, ದೈತ್ಯ, ದಾಸ, ಸೇವಕ ಎಂದು ಕರೆಯುತ್ತಿದ್ದರು. ಅವರ ನೇತಾರರಿಗೆ ದೇವ, ದೇವತಾಗಣ ಎಂದು ಕರೆಯುತ್ತಿದ್ದರು. ಕೊಲ್ಹಾಸುರವೆಂದು ಕೋಲ ಸಾಮ್ರಾಟನಿಗೆ ಹೆಸರಿತ್ತರು. ಕೋಲ್ಹಾ ಎಂದರೆ ನರಿ ಎಂದರ್ಥ. ಕರವೀರ ಯುವರಾಜನಿಗೆ ಕರವೀರ ರಾಕ್ಷಸನೆಂದು ಕರೆಯುತ್ತಿದ್ದರು. ಆರ್ಯರು ಕೋಲ್ ರಾಜನಿಗೆ ಮತ್ತು ಆತನ ಮಗನನ್ನು ಸಾಯಿಸಲು ಅಂಬಾ ಭವಾನಿ, ಮಹಾಲಕ್ಷ್ಮೀಗೆ ಪ್ರಾರ್ಥನೆ ಮಾಡಿದರು. ಕೋಲ ರಾಜನಿಗೆ ಘಾಯವಾದಾಗ ನಿನ್ನ ಕೊನೆಯ ಇಚ್ಛೆ ಏನೆಂದು ಕೇಳಿದಾಗ ಈ ನಗರಕ್ಕೆ ನನ್ನ ಹೆಸರಿಡಬೇಕೆಂದು ಹೇಳಿದನು. ಮಗ ಕರ್ವೀರ ತೀರಿದನು. ಆ ಮೇಲೆ ಕೊಲ್ಹಾಪುರಕ್ಕೆ ಸಂವಾದಿಯಾಗಿ ಕರ್ವೀರ ನಗರವೆಂದು ಸಹ ಕರೆಯುತ್ತಾರೆ. ಈ ರೀತಿ ಆರ್ಯರು ನೆಲೆಸಲು ಪ್ರಾರಂಭಿಸಿದರು. ಕಾಮಾಕ್ಷ ಮತ್ತು ರಕ್ತಾಕ್ಷಣ ಇತ್ಯಾದಿ ಮೂಲ ನಿವಾಸಿಗಳಿಗೆ ತ್ರಂಬೋಲಿ ದೇವಿ ಸಾಯಿಸಿದಳು. ಮಹಾಲಕ್ಷ್ಮಿ, ಅಂಬಾಭವಾನಿ ಮತ್ತು ತ್ರಂಬೋಲಿದೇವಿ ಇವು ಪ್ರಸಿದ್ಧ ಧಾರ್ಮಿಕ ಸ್ಥಳಗಳಾಗಿವೆ. ಇವು ಜಾಗೃತ ಶಕ್ತಿ ದೇವತೆಗಳಾಗಿವೆ. ಕೋಲಿ ಜನರೊಡನೆ ಹಿಂದೂಗಳು ಪೂಜೆ ಮಾಡುತ್ತಾರೆ(ಎಲ್ಲೊಂಡಾ:೧೯೯೫:೧೦೩).

ಕೋಲ್ ಎಂಬ ಶಬ್ದ ಸಂಸ್ಕೃತ ಭಾಷೆಯಿಂದ ಬಂದಿದೆ. ಕೋಲ್ ಇದು ಕೋಲಿ ಮೂಲನಿವಾಸಿಗಳ ಸಂಕೇತ. ಕೋಲ್ಹಾಪುರ, ಕೋಲವನ, ಕೋಲಿಗಳ ಮೂಲ  ಎಂದು ಹೇಳಲಾಗುತ್ತದೆ.

ಕ್ರಿ.ಶ. ೪೫೦ ರ ಹಲ್ಮಿಡಿ ಶಾಸನದ ೨ನೇ ವಾಕ್ಯದಲ್ಲಿ 'ನಮಃ ಶ್ರಿಮತ್ः ಕದಂಬಪ್ಪ ತ್ಯಾಗ ಸಂಪನ್ ಕಲಭೋರ ಅರಿಯ' ಎಂದು ಕಾಕುತ್ಸ ವರ್ಮನು ಬರೆಸಿದನು.  ಕಲ್ ಎಂದರೆ ನೀರಾ ಮತ್ತು  ಭೋರ ಎಂದರೆ ಹೆಂಡ. ಇವೆರಡನ್ನು ಕೂಡಿಸಿ ಕಲ್‌ಭೋರ ಎಂದು ಹೇಳಿದ್ದಾನೆ. ನೀರಾ ಮಧ್ಯಾಹ್ನದ ನಂತರ ಹೆಂಡವಾಗುತ್ತದೆ. ಈಚಲ ಮರಕ್ಕೆ ಕೋಲ್‌ವೃಕ್ಷ, ಕೋರಿವೃಕ್ಷ, ಕೋಲಿವೃಕ್ಷ ಎಂದು ಕರೆಯುತ್ತಾರೆ.

ವೆಂಕಟರಂಗೋ ಕಟ್ಟಿ ಬರೆದ ಬಾಂಬೆ ಗೆಜಿಟಿಯರ್‌ನಲ್ಲಿ ಹೀಗೆ ಹೇಳಲಾಗಿದೆ. ಭಾರತ ದೇಶದಲ್ಲಿರುವ ಎಲ್ಲಾ ರಾಜಕುಲಗಳು ಕಬ್ಬಲಿಗಿತ್ತಿಯಿಂದ ಹುಟ್ಟಿದವು. ಎಲ್ಲರೂ ಮಹಾತಾಯಿ ಕಬ್ಬಲಿಗಿತ್ತಿಯ ಮಕ್ಕಳು. ದೇಶದ ಮೂಲ ಜನಾಂಗವೇ ಕಬ್ಬಲಿಗರು. ಈ ಹಿನ್ನೆಲೆಯಲ್ಲಿ ಕಬ್ಬಲಿಗರೇ ಅಂದರೆ ಟೋಕ್ರೆ ಕೋಳಿಗಳೇ ಮೂಲ  ಜನಾಂಗವೆಂದತಾಯಿತು.

ದಕ್ಷಿಣ ಭಾರತದ ಮಳಖೇಡದ ರಾಷ್ಟ್ರಕೂಟರು ಜಮಾದಾರರಿದ್ದಿರಬೇಕೆಂದು ಇಂಗ್ಲೀಷರು (ಬ್ರಿಟಿಷರು) ಬರೆದಿದ್ದಾರೆ. ಕರ್ನಾಟಕವನ್ನು ಆಳಿದಂತಹ ರಾಷ್ಟ್ರಕೂಟರು ಜಮಾದಾರರಾಗಿದ್ದರು ಎಂದು ಬರೆದಿದ್ದಕ್ಕೆ ಬ್ರಿಟಿಷ ಗೌರ್ವನರ ಸಹಿ ಹಾಕಿದರು. ಇವರು ಹೀಗೆ ಬರೆಯಲು ಕಾರಣವೇನೆಂದರೆ ಬ್ರಿಟೀಷ ಸರ್ಕಾರ ಪ್ರಾಣಿ, ವಸ್ತುಗಳ

ಗಣನೆ (Census) ಮಾಡಿದರು. ಆನೆ, ಕುದುರೆ, ಬಂದೂಕು, ತಲವಾರಗಳು ಹೆಚ್ಚಾಗಿ ಇವರಲ್ಲಿ ದೊರೆತದ್ದರಿಂದ ಆ ಆಧಾರದ ಮೇಲೆ ಜಮಾದಾರರು ಆಳ್ವಿಕೆ ಮಾಡಿದ್ದರೆಂದು ಹೇಳಲಾಗಿದೆ. ಗುಲ್ಬರ್ಗಾದ ಶಂಕರ ಬಾಣೆ(ವಕ್ತೃ)ಯವರು ರಜಾಕರ ಸಂದರ್ಭದಲ್ಲಿ ನಮ್ಮ ಮನೆಯಲ್ಲಿದ್ದ ಆಯುಧಗಳನ್ನು ಬಂಡಿ ತುಂಬಿಕೊಂಡು ಒಯ್ದರೆಂದು ಹೇಳುವರು.

ಕರ್ನಾಟಕದ ಕನ್ನಡ ಭಾಷೆ ಒಂದನ್ನು ಬಿಟ್ಟು ಎಲ್ಲಾ ಭಾಷೆಗಳಲ್ಲಿ ಶಾಕ್ಯಕೋಲಿ, ಸಕೋಲಿ, ಕೋಲಿ ಎಂದು ಕೋಳಿಗಳನ್ನು ಕರೆಯುತ್ತಾರೆ. ಕೌಲರ ಮಹಾಋಷಿ ವಾಲ್ಮೀಕಿ. ಅಮೃತಸರದ ಸುವರ್ಣ ಮಂದಿರದಲ್ಲಿ ವಾಲ್ಮೀಕಿ ಋಷಿಯ ದೇವಸ್ಥಾನವಿದೆ. ನೇಪಾಳದಲ್ಲಿ ದೊಡ್ಡ ವಾಲ್ಮೀಕಿ ಪೀಠವಿದೆ. ಮಹಾರಾಷ್ಟ್ರದಲ್ಲಿ ಶಾಕ್ಯಕೋಲಿ ಎಂಬ ಶಕ ವರ್ಷ ೨೦೦೦ ವರ್ಷದಿಂದ ಇದೆ. ಬೇಡರೆ ಕೋಲರು ಎಂಬುದು ಯಮನಪ್ಪ ಮಾಸ್ತರ(ವಕ್ತೃ)ರ ಅಭಿಪ್ರಾಯವಾಗಿದೆ.

ಅಖಂಡ ಭಾರತವನ್ನು ಆಳಿದವರು ಕೋಲಿಯವರು. ಇದಕ್ಕೆ ೧೫೦೦ ವರ್ಷಗಳ ಇತಿಹಾಸವಿದೆ. ಹಿಂದೆ ರಾಜ ವಂಶಸ್ಥರಾದ ಇವರು ರಾಜತ್ವ ಹೋದ ಮೇಲೆ ಛಿದ್ರಛಿದ್ರವಾಗಿ ಹರಿದು ಹಂಚಿ ವೃತ್ತಿಗನುಗುಣವಾಗಿ ಈ ರೀತಿಯಾದರು. ಆ ವೃತ್ತಿ ಆಧಾರಿತವಾದ ಹೆಸರುಗಳು ಇಂದು ಪ್ರಸಿದ್ಧಿ ಪಡೆದವು. ಇವರು ಕ್ಷತ್ರಿಯರೆಂದು ಹೇಳಿಕೊಳ್ಳುವರು.

ಗುಜರಾತ ಗೆಜಿಟಿಯರ್ ಪ್ರಕಾರ ಕೋಲಿಯವರು ಯೋಧರು ಮತ್ತು ಶೂರವೀರರಾಗಿದ್ದವರು. ಇವರು ಮದ್ರಾಸ, ತಿರುಚನಪಲ್ಲಿ, ಹೈದ್ರಾಬಾದ ಮುಂತಾದ ಕಡೆಗಳಲ್ಲಿ ಹರಡಿರುವರು. ಇವರ ಹೆಸರಿನಲ್ಲಿ ವ್ಯತ್ಯಾಸಗಳಿದ್ದರೂ, ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಭಿನ್ನವಾಗಿದ್ದರೂ, ಆಧ್ಯಾತ್ಮಿಕ ದೃಷ್ಟಿಯಿಂದ, ಸಾಮಾಜಿಕ, ಸಾಂಸ್ಕೃತಿಕವಾಗಿ ಒಂದೇ ಆಗಿದ್ದಾರೆ. ಕೋಲಿಯ, ಕೋಲಿ, ಕೋರಿ, ಕೋಲಿಯಾನ ಇವರ ಹೆಸರುಗಳ ಮುಂದೆ ಸ್ಥಾನ ಭೇದ ಸೂಚಕ ಶಬ್ದಗಳನ್ನು ಜೋಡಿಸುತ್ತಾರೆ. ಇವರ ಪ್ರಮುಖ ಉದ್ಯೋಗ ಮೀನುಗಾರಿಕೆ, ಬಟ್ಟೆ ನೇಕಾರಿಕೆ ಇದಲ್ಲದೆ ಬೇರೆ ಬೇರೆ ಸಣ್ಣ ದೊಡ್ಡ ಉದ್ಯೋಗ ಮಾಡುವವರಾಗಿದ್ದಾರೆ.

### ೧೨. ಟೋಕ್ರೆ ಕೋಳಿ ಸಮುದಾಯದ ಚಾರಿತ್ರಿಕ ಮಹಾನ್ ವ್ಯಕ್ತಿಗಳು

ಸರಸ್ವತಿ ಇದ್ದಲ್ಲಿ ಲಕ್ಷ್ಮಿ ಇರುವುದಿಲ್ಲ, ಲಕ್ಷ್ಮಿ ಎಂದರೆ ಸುಖದ ಸುಪ್ಪತ್ತಿಗೆಯಿದ್ದು ಯಾವುದರ ಕೊರತೆ ಇರದವರಿಗೆ ಜ್ಞಾನ ಹೆಚ್ಚಾಗಿ ಕಂಡು ಬರುವುದಿಲ್ಲ. ಯಾವಾಗಲು ಮಹಾನ್ ವ್ಯಕ್ತಿಗಳು ಹುಟ್ಟಿ ಬರುವುದು ಕಷ್ಟ ಜೀವಿಗಳ ಒಡಲಿನಿಂದ ಇಲ್ಲಿ ಬುದ್ಧನ ಉದಾಹರಣೆಯನ್ನು ನಮಗೆ ದೊರೆಯುವದು. ವೃದ್ಧ, ರೋಗಿ, ಹೆಣ್ಣು ಇವು ಮೂರನ್ನು ಕಂಡ ಬುದ್ಧ ಮನ ಪರಿವರ್ತನೆಯಾದದ್ದು ಎಂದು ಹೇಳಿದರೆ. ಇನ್ನೊಂದು ರೀತಿಯಲ್ಲಿ ನದಿಯ ವ್ಯಾಜ್ಯದಿಂದ ಬೇಸತ್ತದಕ್ಕೆ, ಜೀವನದಲ್ಲಿ ನಾನಾ ದುಃಖ ಬಂದಿದ್ದಕ್ಕೆ, ಮನೆ ಬಿಟ್ಟು ಕಷ್ಟ ಬಂದದನ್ನು ಅನುಭವಿಸಿ ಜ್ಞಾನ ಪಡೆದನು. ಇದರಿಂದ ಕಷ್ಟವಿದ್ದಲ್ಲಿ ಮಾತ್ರ ಜ್ಞಾನದ ಉದಯ, ಜ್ಞಾನದ ಉದಯದಿಂದ ಮಹಾನ್ ವ್ಯಕ್ತಿಗಳಾಗಲು ಸಾಧ್ಯತೆ ಎಂಬುದನ್ನು ತಿಳಿದು ಬರುವುದು.

ಪೌರಾಣಿಕ ಕಾಲ, ಐತಿಹಾಸಿಕ ಕಾಲ ಮತ್ತು ಆಧುನಿಕ ಕಾಲದಲ್ಲಿ ಮಹಾನ್ ವ್ಯಕ್ತಿಗಳು ಹುಟ್ಟು ಬಂದದನ್ನು ಕಂಡುಬರುತ್ತದೆ.

**ಪೌರಣಿಕ ಕಾಲ :** ಅಗಸ್ತ್ಯ ಕಬ್ಬಿಲನಾದರೆ ವ್ಯಾಸ ಬೋಯತಿಯ ಮಗನಾಗಿದ್ದಾನೆ. ಸಮುದ್ರದ ನೀರು ಕುಡಿದ ಶಕ್ತಿ ಅಗಸ್ತ್ಯನದಾದರೆ ಮಹಾಭಾರತ ಮಹಾಕಾವ್ಯ ಬರೆದ ಕೀರ್ತಿ ವ್ಯಾಸನದು. ಭೀಷ್ಮ ಗಂಗೆಯ ಪುತ್ರ. ಇವನು ಮಹಾಭಾರತದಲ್ಲಿ ಆದಿಯಿಂದ ಅಂತ್ಯದವರೆಗೆ ಕಂಡು ಬರುವನು. ಕನ್ನಡದ ಆದಿ ಕವಿ ಪಂಪನು 'ಪಂಪಭಾರತ'ದಲ್ಲಿ ನೆನೆವೊಡೆ ಕರ್ಣನನ್ ನೆನೆ, 'ಕರ್ಣರಸಾಯನ ಮಲ್ತೆ ಭಾರತಂ' ಎಂದು ಪಂಪ ಕರ್ಣನನ್ನು ಗುಣಗಾನ ಮಾಡಿದ್ದಾನೆ. ಕರ್ಣ ರಾಧೇಯ ಮಗ, ಮೀನುಗಾರರ ಸಾಕು ಮಗನಾಗಿದ್ದಾನೆ.

**ಐತಿಹಾಸಿಕ ಕಾಲ :** ಐತಿಹಾಸಿಕ ಕಾಲದಲ್ಲಿ ಈ ಜನ ರಾಷ್ಟ್ರ ಮಟ್ಟದಲ್ಲಿ ಕಂಡು ಬರುವರು.

೧ ಬುದ್ಧನ ತಾಯಿ ಮತ್ತು ಹೆಂಡತಿ

೨ ಕಬೀರದಾಸ

೩ ಕಲ್ಯಾಣ ಚಾಲುಕ್ಯರ ಅಹವಮಲ್ಲ

೪ ಅಂಬಿಗಾರ ಚೌಡಯ್ಯ

೫ ಝಲಕಾರಿಬಾಯಿ

೬ ಸೈನಿಕರು

೭ ತಾನಾಜಿ ಮಾಲಸುರೆ

ಬುದ್ಧನ ತಾಯಿ ಮತ್ತು ಹೆಂಡತಿ ಶಾಕ್ಯಕೋಲಿ ಮನೆತನದವರು. ಸಂತ ಕಬೀರದಾಸನು ಕೋರಿ(ಕೋಲಿ)ಯವನು. ಇವನು ಮಹಾನ್ ವ್ಯಕ್ತಿತ್ವ ಹೊಂದಿದರಿಂದ ದ್ವೇಷ, ಅಸೂಯೆ, ಆಡಂಬರ, ಸಂಪ್ರದಾಯ ಮೊದಲಾದವನ್ನು ಬಿಟ್ಟು, ತ್ಯಾಗ, ಪ್ರೇಮ, ಉದಾರ ಭಾವನೆಯನ್ನು ಹೊಂದಿ ಸಮರ್ಥ ವ್ಯಕ್ತಿಯಾದನು. ೧೪೪೦ರಲ್ಲಿ ಜನ್ಮ ತಾಳಿದ ಕಬೀರನು ತಂದೆ ತಾಯಿಯೊಡನೆ ಬಟ್ಟೆ ನೇಕಾರಿಕೆಯಲ್ಲಿ ಸಹಾಯಕನಾಗಿದ್ದನು. ಇವನು ತನ್ನ ಗೀತೆಯಲ್ಲಿ ಕೋರಿ(ಕೋಲಿ)ಯವರ ಬಗ್ಗೆ ಹೇಳಿಕೊಂಡಿದ್ದಾನೆ. ಬಟ್ಟೆ ನೇಕಾರಿಕೆ ಇವರ ಕಸುಬಾಗಿತ್ತು. ಈ ಕಸುಬಿನಲ್ಲಿ ತನ್ನ ಸಮಯವನ್ನು ಆತ್ಮ ಚಿಂತನೆ ಮತ್ತು ಆಧ್ಯಾತ್ಮದಲ್ಲಿ ಕಳೆಯುತ್ತಿದ್ದನು.

ಕಲ್ಯಾಣ ಚಾಲುಕ್ಯರ ಅಹಮಲ್ಲನು ಕೋಲಿ ಜನಾಂಗದವನೆಂದು ಅವನನ್ನೇ ಮಲ್ಲಯ್ಯನನ್ನಾಗಿ ಮಾಡಿ ಈ ಜನ ದಸರೆಯ ನವಮಿಯ ದಿವಸ ಪೂಜಿಸುವರು ಮತ್ತು ಮೆರೆಸುವರು. ಹನ್ನೆರಡನೆಯ ಶತಮಾನದಲ್ಲಿ ಆಗಿ ಹೋದ ನಿಷ್ಠಾವಂತ ಶರಣ ಅಂಬಿಗರ ಚೌಡಯ್ಯ ಕೋಲಿ ಸಮುದಾಯದವನು. ಶಿವಾಜಿಯ ಬಲಗೈ ಬಂಟ ತಾನಾಜಿ ಮಾಲಸುರೆ ಇದೇ ಸಮುದಾಯದವ (ವಾಲೀಕಾರ,ಚನ್ನಣ್ಣ:೨೦೦೦:೩೭೩).

**ವೀರ ಮಹಿಳೆ ಝಲಕಾರಿ :** ಝಲಕಾರಿಬಾಯಿ ಕ್ರಿ.ಶ. ೧೮೩೦ ರಲ್ಲಿ ಬುಂದೆಲ ಖಂಡದ ಕೋರಿ ಸಮುದಾಯದಲ್ಲಿ ಜನ್ಮ ತಾಳಿದಳು. ಈಕೆಯ ವಿವಾಹವು ರಾಣಿ ಲಕ್ಷ್ಮೀಬಾಯಿಯ ಸೈನಿಕನಾದ ನಯಪುರದ ಶ್ರೀಪುರನ ಗೋಲನದಾಜನೊಡನೆ ಆಯಿತು. ರಾಣಿ ಲಕ್ಷ್ಮೀಬಾಯಿಯ ಆಸ್ಥಾನದಲ್ಲಿ ದುರ್ಗಾಬಾಯಿ, ಬಂಡೋನಿ ಮೊದಲಾದವರಿದ್ದರೂ ಝಲಕಾರಿಯು ಝಾನ್ಸಿಬಾಯಿ ಲಕ್ಷ್ಮೀಗೆ ಗುಪ್ತ ಸಲಹೆಗಾರಳಾಗಿದ್ದಳು. ಆದುದರಿಂದ ಈಕೆಗೆ ವಿಶೇಷ ಸ್ಥಾನವಿತ್ತು.

ಝಾನ್ಸಿಯ ರಾಣಿಗೆ ಮಕ್ಕಳಿಲ್ಲದ ಸಂದರ್ಭದಲ್ಲಿ ದತ್ತು ಸ್ವೀಕರಿಸಬೇಕೆಂದು ನಿಶ್ಚಯವಾಯಿತು. ಅದನ್ನು ತಿಳಿದ ಇಂಗ್ಲೀಷರು ಝಾನ್ಸಿಯ ಮೇಲೆ ಆಕ್ರಮಣ ಮಾಡಿದರು. ೧,೫೦೦ ಸೈನಿಕರು ಕೋಟೆಯ ಮುಖ್ಯ ದ್ವಾರಕ್ಕೆ ಬಂದಾಗ ಝಲಕಾರಿಯು ಲಕ್ಷ್ಮೀಬಾಯಿಗೆ ಕೋಟೆ ಬಿಡಲು ಹೇಳಿ ತಾನೇ ರಾಣಿ ಲಕ್ಷ್ಮೀಬಾಯಿಯ ರೂಪದಲ್ಲಿ ಬ್ರಿಟಿಷರೊಡನೆ ಹೋರಾಟ ಮಾಡಿ ವೀರ ಮರಣವನ್ನಪ್ಪಿದಳು. ಆದುದರಿಂದಲೇ ವೀರಾಂಗಿಣಿ ಝಲಕಾರಿಬಾಯಿ ಎಂದು ಪ್ರಸಿದ್ಧಿ ಪಡೆದಳು. ಮೈಥಿಲಿ ಶರಣ್ ಗುಪ್ತರು ಝಲಕಾರಿಬಾಯಿಯ ಶೌರ್ಯವನ್ನು ತಮ್ಮ ಕವನದಲ್ಲಿ ಹೀಗೆ ಗುಣಗಾನ ಮಾಡಿದ್ದಾರೆ.

ಜಾಕರ ರಣ ಮೆ ಲಲಕಾರಿ ಥಿ

ವಹ ಝಾನ್ಸಿ ಕಿ ಝಲಕಾರಿ ಥಿ

ಗೋರೋ ಕೋ ಲಡಾನ ಸಿಹಾ ಗಯಿ .

ಹೈ ಇತಿಹಾಸ ಮೆ ಝಲಕ ರಹಿ

ಮಹ ಭಾರತ ಕಿ ಸನ್ನಾರಿ ಥಿ (ಮೈಥಿಲಿ ಶರಣಗುಪ್ತ:೧೯೫೫:೭೭).

**ಆಧುನಿಕ ಕಾಲ :** ಬ್ರಿಟೀಷರು ಈ ದೇಶಕ್ಕೆ ಬಂದೊಡನೆ ದೇಶದಲ್ಲಿ ಹೊಸ ಅಲೆ ಎದ್ದಂತೆ ಈ ಸಮುದಾಯದಲ್ಲಿ ಕೂಡ ಹೊಸತನ ಕಂಡು ಬರಲು ಕಾರಣವಾಯಿತು. ಹಿಂದೆ ಎಂದೂ ಕಾಣದ ಜನಶಕ್ತಿ ಈ ಸಮಯದಲ್ಲಿ ವ್ಯಕ್ತಪಡಿಸಲು ಅನುಕೂಲವಾಯಿತು. ಜ್ಞಾನದಂಥ ವಸ್ತು ಇನ್ನೊಂದಿಲ್ಲ. ಇದು ಕತ್ತಲದಿಂದ ಬೆಳಕಿನೆಡೆಗೆ ದಾರಿ ತೋರುವುದು. ಈ ಸಮುದಾಯವು ಶಿಕ್ಷಣದಿಂದ ಬೆಳಕುಕಂಡು ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ವೈದಕೀಯ ಕ್ಷೇತ್ರದಲ್ಲಿ ತಮ್ಮ ಸೇವೆಯನ್ನು ಮಾಡುತ್ತಿದ್ದಾರೆ.

## ೧೩. ಟೋಕ್ರೆ ಕೋಳಿಯವರು ಬುಡಕಟ್ಟು ಪಟ್ಟಿಗೆ ಸೇರಿದ್ದು

ಕರ್ನಾಟಕ ರಾಜ್ಯದಲ್ಲಿ ಸಂವಿಧಾನಬದ್ಧವಾಗಿ ಕೋಳಿ ಢೋರ (Koli Dhor), ಟೋಕರೆ ಕೋಳಿ (Tokre Koli), ಕೋಲ್ಚಾ (Kolcha) ಹಾಗೂ ಕೋಲ್ಘಾ ಸಮುದಾಯಗಳು ಬುಡಕಟ್ಟು ಪಟ್ಟಿಗೆ ಸೇರಿವೆ. ೧೯೫೦ರಲ್ಲಿಯೇ ಮುಂಬೈ ರಾಜ್ಯದಲ್ಲಿ ಕೇವಲ ಕೋಳಿ ಢೋರ್ (Koli Dhor) ಕೋಳಿ ಮಹಾದೇವ (Koli Mahadev) ಸಮುದಾಯಗಳು ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿದವು. ಭಾಷಾವಾರು ಪ್ರಾಂತ ರಚನೆಯಾದ ನಂತರ ೧೯೬೦ರಲ್ಲಿ ಮುಂಬೈ ಕರ್ನಾಟಕ ಪ್ರದೇಶವಾದ ಬೆಳಗಾವಿ, ಬಿಜಾಪುರ, ಧಾರವಾಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಿಗೆ ಸೀಮಿತಗೊಂಡಂತೆ ಕೋಳಿಢೋರ ಜೊತೆಗೆ ಟೋಕ್ರೆ ಕೋಳಿ, ಕೋಲ್ಚಾ ಹೂಗೂ ಕೋಲ್ಘಾಗಳು ಕೂಡ ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿ ೧೯೭೭ರಲ್ಲಿ ಈ ಬುಡಕಟ್ಟುಗಳ ಪ್ರಾದೇಶಿಕ ಮಿತಿಯನ್ನು ಸಡಲಿಸಿ ಕರ್ನಾಟಕ ರಾಜ್ಯದಾದ್ಯಂತ ವಿಸ್ತರಿಸಲಾಯಿತು. ಆದರೆ ಈ ಬುಡಕಟ್ಟುಗಳಿಗೆ ಸಂಬಂಧಿಸಿದ ಇತರ ಹೆಸರುಗಳಲ್ಲಿ ಗುರುತಿಸಲ್ಪಡುವ ಹಲವಾರು ಪರ್ಯಾಯ ನಾಮಗಳು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರದೇ ಇರುವುದರಿಂದ ಮೀಸಲಾತಿಯನ್ನು ಸಮರ್ಪಕವಾಗಿ ಬಳಸಲಾಗಲಿಲ್ಲ. ಇದನ್ನು ಮನಗಂಡು ಕರ್ನಾಟಕ ಸರಕಾರ ಡಿ.ಕೆ. ನಾಯ್ಕರ ಉಪಸಮಿತಿ ಪತ್ತೆ ಹಚ್ಚಿದ ಗಂಗಾಮತದ ೩೯ ಪರ್ಯಾಯ ಜಾತಿಗಳನ್ನು ಪರಿಶಿಷ್ಟ

ಪಂಗಡದ ಪಟ್ಟಿಗೆ ಸೇರಿಸಲು ಕೇಂದ್ರ ಸರಕಾರಕ್ಕೆ ದಿನಾಂಕ ೧೪.೧೧.೧೯೯೬ರಂದು ಶಿಫಾರಸು ಮಾಡಿದೆ. ಶಿಫಾರಸುಗೊಂಡ ಪರ್ಯಾಯ ಜಾತಿಗಳ ಹೆಸರುಗಳು ಹೀಗಿವೆ.

| | | | | | |
|---|---|---|---|---|---|
| ೧ | ಗಂಗಾಮತ | (Gangamatha) | ೨೧ | ಹರಕಾಂತ್ರ | (Harakanthra) |
| ೨ | ಗಂಗಾಕುಲ | (GangaKula) | ೨೨ | ಹರಿಕಾಂತ್ರ | (Harikanthra) |
| ೩ | ಗೌರಿಮತ | (Gaurimatha) | ೨೩ | ಮೀನುಗಾರ | (Meenugara) |
| ೪ | ಅಂಬಿಗ | (Ambiga) | ೨೪ | ಖಾರಿಯ | (Kariya) |
| ೫ | ಕಬ್ಬಲಿಗ | (Kabbliga) | ೨೫ | ಸಿವಿಯಾರ್ | (Siviyar) |
| ೬ | ಕಬ್ಬೇರ | (Kabber) | ೨೬ | ಪರಿವಾರ | (Parivara) |
| ೭ | ಕಬ್ಬೇರಾ | (Kabbera) | ೨೭ | ಬುಂಡೆ ಬೆಸ್ತರ | (BundeBesthar) |
| ೮ | ಖಾರ್ವಿ | (Karvi) | ೨೮ | ಮಹಾದೇವ ಕೋಳಿ | (Mahadev Koli) |
| ೯ | ಭೊಯಿ | (Bhoyi) | ೨೯ | ತಳವಾರ | (Talawara) |
| ೧೦ | ಭೋಯಿ | (Bhoi) | ೩೦ | ಮಚಲ,ಕಹಾರ | (Machala,Kahar) |
| ೧೧ | ಬೊಯಿ | (Boyi) | ೩೧ | ಮೊಗವೀರ | (Migaveera) |
| ೧೨ | ತೊರೆಯ | (Thoreya) | ೩೨ | ಸುಣಗಾರ | (Sunagar) |
| ೧೩ | ಗಾಬ್ಬಿಟ್ | (Gabbit) | ೩೩ | ಬಾರ್ಕಿ | (Barki) |
| ೧೪ | ಗೊಬಿತ್ | (Gobit) | ೩೪ | ಬೆಸ್ತರ | (Besthar) |
| ೧೫ | ದಾವತ್ | (Daovat) | ೩೫ | ಸೂರ್ಯವಂಶಿ ಕೋಳಿ | (Suryavanshi Koli) |
| ೧೬ | ಗಂಗಾಮಕ್ಕಳು | (GangaMakkalu) | ೩೬ | ಜಾಲಗಾರ | (Jalagar) |
| ೧೭ | ಗಂಗಾಪುತ್ | (Gangaputa) | ೩೭ | ಮಚ್ಛಿ ಗಾಬಿಟ್ | (Machi Gabit) |
| ೧೮ | ಅಂಬಿಗ | (Ambig) | ೩೮ | ಗಬಿಟ್ | (Gabit) |
| ೧೯ | ಬೆಸ್ತ | (Bestha) | ೩೯ | ದಾಲಿಜಾ | (Daalija) |
| ೨೦ | ಕೋಳಿ | (Koli) | | | |

(ಮೈತ್ರಿ ಕೆ.ಎಂ.;೨೦೦೨:೧೧೭).

ಈ ಮೇಲಿನ ಗಂಗಾಮತದ ೩೯ ಪರ್ಯಾಯ ಜಾತಿಗಳನ್ನು ಪ್ರಾದೇಶಿಕ ಹಾಗೂ ಕಾಯಕಗಳಲ್ಲಿಯ ಭಿನ್ನತೆಯಿಂದ ವಿಭಿನ್ನ ಹೆಸರುಗಳಿಂದ ಗುರುತಿಸಲಾಗಿದೆ.

ಜೇಮ್ಸ್ ಎಂ. ಕ್ಯಾಂಪಬೇಲ್ ಅವರು ಕೋಳಿ ಜನರ ಕುರಿತು ಹೀಗೆ ಬರೆದಿರುತ್ತಾರೆ.

'Kolis or ferryman, are returned as numbering 6240 and as found all over the districts. They claimed desent from the sage Valmiki, the reputed author of the Ramayan. They are divided into Kabir Koli, Mahadevi Koli and Raj Kolis. Their surnames are Guttenavar, Hugadvar and they are hospitable people, rude, dirty and given to drink, they gather slake and sell lime and sell nodules catch and sell fish, and work ferries on rivers, some are village servants and labours and others make and sell sack cloth their, favourite dieties are Bairoba, Jyotiba, Mahadeva and their goddess Yallamma and their Priests are ordinary village Brahmins. Social disputes are settled at mass meetings by their head or Guru called Ganachari. They do not send their boys to schools being poor class. ಚಂದಗಡ ಮಹಾದೇವ ಕೋಳಿಗಳ ವರದಿಯಲ್ಲಿ ಈ ಜನ ಇಂಡಿಯಾದ ತುಂಬ ಬೇರೆ ಬೇರೆ ಹೆಸರುಗಳಲ್ಲಿ ಗುರುತಿಸಿಕೊಳ್ಳುತ್ತಿದ್ದುದು ತಿಳಿದುಬರುತ್ತದೆ.

ಮೇಲಿನ ಆಂಗ್ಲ ವಿವರದ ಕನ್ನಡಾನುವಾದ ಹೀಗಿದೆ. ಟೋಕ್ರೆ ಕೋಳಿಯವರ ಜನಸಂಖ್ಯೆ ೬೨೪೦. ರಾಮಾಯಣವನ್ನು ಬರೆದ ವಾಲ್ಮೀಕಿಯು ಇವರ ಮೂಲ ಪುರುಷನು ಇವರನ್ನು ಕಬೀರ ಕೋಲಿ, ಮಹಾದೇವ ಕೋಲಿ, ರಾಜಕೋಲಿ ಎಂದು ಮೂರು ರೀತಿಯಲ್ಲಿ ವಿಂಗಡಿಸಲಾಗಿದೆ. ಇವರ ಮನೆತನದ ಹೆಸರುಗಳೆಂದರೆ ಗುಟ್ಟನರ್ ಮತ್ತು ಹೂಗದವರ್. ಆದರ ಭಾವನೆಯುಳ್ಳವರು, ನಾಗರೀಕತೆಯಿಂದ ದೂರಯಿದ್ದವರು, ಸ್ವಚ್ಛತೆಯಿರದವರು ಹಾಗೂ ಮಧ್ಯಪಾನ ಸೇವಿಸುವವರಾಗಿರುವರು. ಇವರು ಸುಣ್ಣವನ್ನು ತಯಾರಿಸಿ ಮಾರಾಟ ಮಾಡುವರು. ಮೀನನ್ನು ಹಿಡಿದು ಮಾರಾಟ ಮಾಡುವರು. ದೋಣಿಯನ್ನು ನಡೆಸುವರು ಮತ್ತೇ ಕೆಲವರು ಹಳ್ಳಿಗಳಲ್ಲಿ ನೌಕರಿ ಮತ್ತು ಕೂಲಿ ಕೆಲಸ ಮಾಡುವರು. ಹಲವರು ತಟ್ಟು ನೆಯ್ದು, ಚೀಲ ತಯಾರಿಸಿ ಮಾರಾಟ ಮಾಡುವರು. ಇವು ಇವರ ನೆಚ್ಚಿಗೆಯ ಕೆಲಸಗಳು. ಇವರ ದೇವರು ಭೈರೊಬಾ, ಜ್ಯೋತಿಬಾ, ಮಹಾದೇವ ಮತ್ತು ಹೆಣ್ಣು ದೇವತೆಯಾದ ಯಲ್ಲಮ್ಮ. ಹಳ್ಳಿಯಲ್ಲಿ ಬ್ರಾಹ್ಮಣರೆ ಪೂಜಾರಿಗಳು. ಸಮಾಜದ ಒಪ್ಪಿಗೆಯ ಮೇರೆಗೆ ನೇಮಕವಾದ ಗುರುವನ್ನು ಗಣಾಚಾರಿ ಎಂದು ಕರೆಯುವರು. ಇವರು ಬಡತನದ ಕಾರಣದಿಂದ ತನ್ನ ಮಕ್ಕಳಿಗೆ ಶಾಲೆಗೆ ಕಳುಹಿಸುವುದಿಲ್ಲ ಎಂದು ಜೇಮ್ಸ ಎಂ. ಕ್ಯಾಂಪಬೆಲ್ ಅವರು ಹೇಳುವರು.

ಚಂದಗಡ ಮಹಾದೇವ ಕೊಳಿಗಳ ವರದಿಯಲ್ಲಿ ಕೋಳಿಗಳು ಇಂಡಿಯಾದ ತುಂಬ ಬೇರೆ ಬೇರೆ ಹೆಸರುಗಳಲ್ಲಿ ಗುರುತಿಸಲ್ಪಡುತ್ತಿರುವುದು ಕಂಡುಬರುತ್ತದೆ.

೧ ಕರ್ನಾಟಕ : ಗಂಗಾಮತ, ಮೊಗವೀರ, ಬೆಸ್ತ, ಕಬ್ಬಲಿಗ, ಬಾರ್ಕಿ, ಜಾಲಗಾರ, ಕೋಳಿ, ಟೋಕರೆಕೋಳಿ, ಢೋರಕೋಳಿ, ಕೋಲ್ಚಾ, ಕೋಲ್ಘಾ, ಕೋಯ, ಗಾಬಿಟ್, ಖಾರ್ವಿ ಇತ್ಯಾದಿ

೨ ಆಂಧ್ರ : ಬಾಂಕಿ

೩ ಕೇರಳ : ಮೀನುಗಾರ

೪ ತಮಿಳುನಾಡು : ಮೀನುಗಾರ

೫ ಮಹಾರಾಷ್ಟ್ರ : ಬಾಂಕಿ, ಕೋಲಿ, ಮೀನುಗಾರ

೬ ಪಂಜಾಬ : ಕೋಲಿ

೭ ಹರಿಯಾಣ : ಕೋಲಿ

೮ ಉತ್ತರ ಪ್ರದೇಶ : ಕೋಲಿ, ಕೋರಿ

೯ ಜಮ್ಮು ಮತ್ತು ಕಾಶ್ಮೀರ : ಕೋಲಿ

೧೦ ಸಿಕ್ಕಿಂ : ಕೋಲಿ

೧೧ ನಾಗಾಲ್ಯಾಂಡ್ : ಕೋರಿ

೧೨ ಮೇಘಾಲಯ : ಕೋಲಿ

೧೩ ಒಡಿಸಾ : ಬಾಂಕಿ

೧೪ ಬಿಹಾರ : ಕೋಲಿ

೧೫ ಪಶ್ಚಿಮ ಬಂಗಾಲ : ಮೀನುಗಾರ

೧೬ ಗುಜರಾತ : ಕೋಲಿ

೧೭ ರಾಜಸ್ಥಾನ : ಕೋಲಿ

೧೮ ಹಿಮಾಚಲ ಪ್ರದೇಶ : ಕೋಲಿ, ಕೋರಿ

೧೯ ಗೋವಾ,ದಮನ ಮತ್ತು ದಿವ್ : ಮೀನುಗಾರ

೨೦ ಅಸ್ಸಾಮ : ಕೋಲಿ, ಕೋರಿ

೨೧ ಮಧ್ಯ ಪ್ರದೇಶ : ಕೋಲಿ, ಕೋರಿ.

ಚಂದಗಡದ ಮಹಾದೇವ ಕೋಳಿಗಳ ವರದಿಯಂತೆ ಗಂಗಾಮತಸ್ಥರು, ಮೊಗವೀರ, ಬೇಸ್ತರು, ಬಾಂಕಿ, ಮೀನುಗಾರ, ಕೋಲಿ, ಕೋರಿ ಮೊದಲಾದ ಹೆಸರಗಳಿಂದ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ. ಇವೆಲ್ಲ ಇವರ ಕಸುಬಾಧಾರಿತ ಹೆಸರುಗಳಾಗಿವೆ.

## ೧೪. ಕರ್ನಾಟಕದಲ್ಲಿ ಕೋಳಿ ಜನಾಂಗದ ವಿವಿಧ ಹೆಸರುಗಳು

ಶ್ರೀಧರ ವೆಂಕಟೇಶ ಕೇತಕರ ಸಂಪಾದಿಸಿ ೧೯೩೫ರಲ್ಲಿ ಪ್ರಕಟಿಸಿದ ಮಹಾರಾಷ್ಟ್ರ ರಾಜ್ಯದ ಜ್ಞಾನಕೋಶದ ಪ್ರಥಮ ಭಾಗದ ಪುಟ ೩೯೦ರಲ್ಲಿ ಕೋಲಿ ಜನರು ಹೋದ ಕಡೆಯ ಸ್ಥಳಗಳಲ್ಲಿ ಭಾಷೆ, ದೇವರು, ಸ್ಥಳೀಯ

ಉದ್ಯೋಗಗಳನ್ನು ಅಂಗೀಕರಿಸುತ್ತಾ ಹೋದರು ಎಂದು ಕಾಣಿಸಲಾಗಿದೆ. ಕನ್ನಡಕ್ಕೆ ಭಾಷಾಂತರಿಸಿ ೧೮೮೩ರಲ್ಲಿ ಬ್ರಿಟಿಷರು ಪ್ರಕಟಿಸಿದ ಮುಂಬೈ ಕರ್ನಾಟಕ ಗೆಝೆಟಿಯರ್ ಪುಟ ೧೫೫ ರಿಂದ ೧೫೭ ರಲ್ಲಿ ಕೋಳಿ ಜನಾಂಗಕ್ಕೆ ಸ್ಥಾನಿಕ ಸ್ಥಾನಗಳ ಅನುಗುಣವಾಗಿ ಮತ್ತು ಅವರು ಮಾಡಿಕೊಂಡಿರುವ ವೃತ್ತಿಗಳ ಅನುಸಾರವಾಗಿ ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಾರೆಂದು ತಿಳಿಸಲಾಗಿದೆ. ಮೇಲೆ ಕಾಣಿಸಿದ ಜ್ಞಾನಕೋಶ ಪುಟ ೬೮ರಲ್ಲಿ ಘಟಪ್ರಭಾ, ಭೀಮಾ, ಮಲಪ್ರಭಾ, ತುಂಗಭದ್ರಾ, ಕೃಷ್ಣಾ ನದಿಗಳ ದಡದಲ್ಲಿ ಇವರು ವಾಸಿಸುತ್ತಿದ್ದರೆಂದು ತಿಳಿದು ಬರುತ್ತದೆ. ೧೯೧೧ರ ಜನಗಣತಿಯಂತೆ ಕೋಳಿ ಜನರ ಸಂಖ್ಯೆ ಸುಮಾರು ೮೦ ಸಾವಿರ ಎಂದು ಕಾಣುತ್ತದೆ.

ಶ್ರೀ ಯಶವಂತ ಆರ್. ದಾತೆಯವರು ಸಂಪಾದಿಸಿ ೧೯೩೫ರಲ್ಲಿ ಪ್ರಕಟಿಸಿದ ಮತ್ತೊಂದು ಮಹಾರಾಷ್ಟ್ರ ರಾಜ್ಯದ ಜ್ಞಾನಕೋಶ ಭಾಗ ೪ರಲ್ಲಿ 'ಕೋಳಿ' ಜನಾಂಗದ ಬಗ್ಗೆ ಬರೆಯುತ್ತ ಇವರಲ್ಲಿ ಕಬ್ಬಲಿಗ, ಬಾಕಿ, ಕೋಯಾ, ಕೋಳಿ ಮಹಾದೇವ, ಟೋಕ್ರೆಕೋಳಿ (ಅಂಬಿಗ), ತಳವಾರ ಮೊದಲಾದ ೧೧ ಪ್ರಬೇಧಗಳಿದ್ದು ಸುಮಾರು ೧೦೧ ಬೆಡಗುಗಳಿಂದ ಕೂಡಿರುವ ಉಪಜಾತಿಯ ಪದಗಳು ಇರುತ್ತವೆ ಎಂದು ಹೇಳಿದ್ದಾರೆ. ರೂ.೧೨ರಿಂದ ೧೦೦ರ ವರೆಗೆ ತೆರ (ವಧು ದಕ್ಷಿಣೆ) ಪಡೆಯುತ್ತಾರೆ, ಉಡಕಿ ವಿವಾಹ ಮಾಡುತ್ತಾರೆ. ಮಾಂಸ ತಿನ್ನುತ್ತಾರೆ, ಶೆರೆ ಕುಡಿಯುತ್ತಾರೆ, ಮೀನು ಹಿಡಿಯುತ್ತಾರೆ. ಮೀನು ಮಾರುತ್ತಾರೆ. ಹೊಳೆ ದಾಟಿಸುತ್ತಾರೆ. ಪಲ್ಲಕಿ ಹೊರುತ್ತಾರೆ. ಮುಂತಾದ ಉದ್ಯೋಗಗಳನ್ನು ಮಾಡುತ್ತಾರೆಂದು ಹೇಳಿರುತ್ತಾರೆ.

೧೯೫೬ರ ಭಾಷಾವಾರು ಪ್ರಾಂತ ಏಕೀಕರಣದಿಂದಾಗಿ ಕೋಳಿಗಳು ಮರಾಠಿ, ತೆಲುಗು, ತಮಿಳು, ಮಲೆಯಾಳಿ, ಕೊಂಕಣಿ, ತುಳು, ಹಳೇ ಮೈಸೂರಿನ ಕನ್ನಡ ಭಾಗಗಳಿಂದ ಬಂದು ಕನ್ನಡ ರಾಜ್ಯಕ್ಕೆ ಸೇರಿದರು. ಏಕೀಕರಣ ಮುಂಚೆ ಇವರಿಗೆ ಆಯಾ ಭಾಗಗಳಲ್ಲಿ ವಿವಿಧ ಹೆಸರುಗಳಲ್ಲಿ ಕರೆಯುತ್ತಿದ್ದರು. ಅದರಂತೆ ಆಯಾ ಭಾಗದ ರೀತಿನೀತಿ ನಡಾವಳಿಗಳೂ ಸಹ ವಿಭಿನ್ನವಾಗಿದ್ದವು. ಕರ್ನಾಟಕದಲ್ಲಿ ಈಗ ಈ ಕೆಳಗಿನ ಹೆಸರುಗಳು ಆಯಾ ಭಾಗದಲ್ಲಿ ಹೆಚ್ಚಾಗಿ ರೂಢಿಯಲ್ಲಿರುವವು.

ಅ. ಮರಾಠಿಯ ಮುಂಬಯಿ ಕರ್ನಾಟಕದ ಧಾರವಾಡ, ಕಾರವಾರ, ಬೆಳಗಾವಿ, ಬಿಜಾಪುರ ಜಿಲ್ಲೆಗಳಲ್ಲಿ ಕೋಳಿ, ಕೋಳಿ ಮಹಾದೇವ, ಟೋಕ್ರೆಕೋಳಿ, ಕೋಳಿಢೋರ, ಕೊಳಚಿ, ಕೊಳಗ, ಅಂಬಿಗ, ಮೀನುಗಾರ, ಸುಣಗಾರ, ತಳವಾರ, ತೊರೆಯ, ಹರಿಕಂತ್ರ, ಗಾಬಿತ್ ಮುಂತಾದವುಗಳು.

ಬ. ತೆಲುಗು ಮಾತನಾಡುವ ಹೈದರಾಬಾದ್ ಕರ್ನಾಟಕದ ಬೀದರ್, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳಲ್ಲಿ ಕೋಲಿ, ಕೋಯ, ರಾಜಕೋಯ, ಭಿಸೆಕೋಯ, ನಿವಾಲ್ಯಾಕೋಳಿ, ವಲ್ಯಾಕೋಳಿ, ಕಬ್ಬಲಿಗ, ತಳವಾರ ಮುಂತಾದವುಗಳು.

ಕ. ತಮಿಳು ಭಾಷೆಯ ಮದ್ರಾಸ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿ ಬಾರಿಕಿ, ಬೆಸ್ತ, ಮಚಲಾ, ಅಂಬಿಗ, ಗಂಗೆಮಕ್ಕಳು, ಗಂಗೆಪುತ್ರ ಮುಂತಾದವುಗಳು ಹಾಗೂ ಕೊಂಕಣಿ ತುಳು ಭಾಷಾ ಪ್ರದೇಶವಾದ ಮಂಗಳೂರು ಜಿಲ್ಲೆಯಲ್ಲಿ ಮೀನುಗಾರ, ಭೋಯಿ, ಮೊಗವೀರ, ಖಾರ್ವಿ, ಕಹಾರ ಮುಂತಾದವುಗಳು.

ಡ. ಹಳೇ ಮೈಸೂರಿನ ಬೆಂಗಳೂರು, ಮೈಸೂರು, ಮಂಡ್ಯ, ಚಿತ್ರದುರ್ಗ, ಹಾಸನ, ಶಿವಮೊಗ್ಗ ಮುಂತಾದ ಜಿಲ್ಲೆಗಳಲ್ಲಿ ಬೆಸ್ತರ, ಪರಿವಾರ, ನಾಯಕ, ಗಂಗಾಮತ, ಗಂಗಾಕುಲ ಮುಂತಾದ ಹೆಸರುಗಳು ರೂಢಿಯಲ್ಲಿರುವವು(ವಾಲೀಕಾರ,ಚನ್ನಣ್ಣ:೨೦೦೦:೩೨೭-೮).

## ೧೫. ಕರ್ನಾಟಕಕ್ಕೆ ಕೋಳಿ ಜನಾಂಗ ಬಂದದ್ದು

ಕರ್ನಾಟಕಕ್ಕೆ ಕೋಳಿ ಜನಾಂಗ ವಲಸೆ ಬಂದ ವಿಷಯ ಮಹಾರಾಷ್ಟ್ರದ ಚಾಂದಗಡ ತಾಲೂಕಿನ ಮಹಾದೇವ ಕೋಳಿಯವರು ೨೬.೭.೧೯೯೪ ರಲ್ಲಿ ರಾಜ್ಯ ಸರಕಾರಕ್ಕೆ ಒಪ್ಪಿಸಿದ ವರದಿಯ ಪುಟ ೮೮ ರಲ್ಲಿ ಹೀಗೆ ಪ್ರಸ್ತಾಪಿಸಲಾಗಿದೆ.

When the Aryans of North pole who migrated Via Russia, cancasus and Iran, attecked Indian ab-originals in north India more than four thousand years ago, ab-original tribes like Koli, Munda etc., started emegreting for shelter in different parts of India. Some aboriginal Kol or Koli Tribes went to east and some moved to South via Shindhu river and west coast of Gajarath and some move to south via central India of Madhy Pradesh. ಇದರ ಕನ್ನಡಾನುವಾದ-ಕರ್ನಾಟಕದಲ್ಲಿ ಕೋಳಿ ಜನಾಂಗ ಬಂದುದರ ಕುರಿತು ಚಾಂದಗಡ ತಾಲೂಕಿನ ವರದಿ ಹೀಗಿದೆ. ಸುಮಾರು ೪೦೦೦ ವರ್ಷಗಳ ಹಿಂದೆ ಉತ್ತರ ದ್ರುವದಿಂದ ಆರ್ಯರು ರಷ್ಯಾ, ಕ್ಯಾನಕಸ್ ಮತ್ತು ಇರಾನ ಮಾರ್ಗವಾಗಿ ಭಾರತಕ್ಕೆ ವಲಸೆ ಬಂದು ಭಾರತದ ಮೂಲ ನಿವಾಸಿಗಳಾದ ಕೋಲಿ, ಮುಂಡ ಇತ್ಯಾದಿ ಜನಾಂಗಗಳ ಮೇಲೆ ಆಕ್ರಮಣ ಮಾಡಿದರು. ಇದರಿಂದ ಭಾರತದ ಕೋಲ್ ಬುಡಕಟ್ಟು ಪೂರ್ವದ ಕಡೆಗೆ, ಕೆಲವರು, ಸಿಂಧೂನದಿಯ ಮಾರ್ಗವಾಗಿ ಹಲವರು ಗುಜರಾತದ ಪಶ್ಚಿಮದ ಕಡೆಗೆ ಮತ್ತು ಕೆಲವರು ಮಧ್ಯ ಭಾರತದ ಮಾರ್ಗವಾಗಿ ದಕ್ಷಿಣ ಕಡೆಗೆ ಚದುರಿ ಅಲ್ಲಲ್ಲಿ ನೆಲೆನಿಂತರು ಎಂದು ಮಹಾರಾಷ್ಟ್ರದ ಚಾಂದಗಡ ತಾಲೂಕಿನ ಕೋಳಿ ಸಮಾಜದವರು ೨೬.೭.೧೯೯೪ರಲ್ಲಿ ರಾಜ್ಯ ಸರ್ಕಾರಕ್ಕೆ ಒಪ್ಪಿಸಿದ ವರದಿಯ ಪುಟ ೮೮ರಲ್ಲಿ ಪ್ರಸ್ತಾಪಿಸಲಾಗಿದೆ.

## ೧೬. ಕೋಳಿ ಜನಾಂಗ ಕುರಿತ ದಾಖಲೆಗಳು

೧) ಮುಂಬೈ ರಾಜ್ಯದ ಬೆಳಗಾವಿ ವಿಭಾಗದ ೧೮೮೪ರಲ್ಲಿ ಬ್ರಿಟಿಷರು ಬರೆದ ಗೆಜೆಟಿಯರ್ ೨೧ನೇ ವಿಭಾಗದ ೩೦೮ನೆ ಪುಟದಲ್ಲಿ ಕೋಳಿ ಜನ ಜೀವನ ಕುರಿತು ಹೇಳಲಾಗಿದೆ. ತುಂಗಭದ್ರ, ಮಲಪ್ರಭ, ಘಟಪ್ರಭ, ಭೀಮ, ದೋಣಿ, ಕೃಷ್ಣ ಇತ್ಯಾದಿ ನದಿ ದಡಗಳ ಊರುಗಳಲ್ಲಿ ಕೋಳಿ ಜನರ ಬದುಕು, ವೃತ್ತಿ, ಟೋಕ್ರೆ ಹಾಸಿಲ (ಶುಲ್ಕ) ವಿವರ ಟೋಕ್ರೆ(ನಾವೆ)ಯ ಉದ್ದಗಲ, ಹೊಳೆ ದಡದ ಊರುಗಳಲ್ಲಿ ಅಂಬಿಗಾರಲ್ಲಿರುವ ಟೋಕ್ರೆಗಳ ಸಂಖ್ಯೆ ಇತ್ಯಾದಿಗಳ ವಿವರವನ್ನು ತಿಳಿಸಲಾಗಿದೆ.

೨) ಕನ್ನಡಕ್ಕೆ ಭಾಷಾಂತರಿಸಲ್ಪಟ್ಟ ೧೮೮೩ರ ಮುಂಬೈ ಕರ್ನಾಟಕ ಗೆಜೆಟಿಯರ್‌ದಲ್ಲಿಯೂ ಕೂಡ ಕೋಳಿ ಜನಾಂಗದ ಜನ ಜೀವನ ಚಿತ್ರವನ್ನು ದಾಖಲಿಸಲಾಗಿದೆ.

೩) ೧೯೫೫ರಲ್ಲಿ ಪ್ರಕಟಿಸಲಾದ ಮಹಾರಾಷ್ಟ್ರದ ಜ್ಞಾನಕೋಶದ ಸಂಪಾದಕರು ಡಿ. ಶ್ರೀಧರ ವೆಂಕಟೇಶ ಕೇತಕರ ಪುಣಾ ಇವರ ಪ್ರಥಮ ಭಾಗದ ಪಟ್ಟಿ ೩೪೨ರ ಪುಟ ೩೯೦ರಲ್ಲಿ ಬರೆದಿರುವಂತೆ ಕೋಳಿ ಜನರು ಹೋದ ಕಡೆಯ ಸ್ಥಳಗಳಲ್ಲಿಯ ಭಾಷೆ, ದೇವತೆಗಳನ್ನು ಅಂಗಿಕರಿಸುತ್ತಾ ಹೋದರು. ಈ ಜನಾಂಗದ ಆಯಾ ಸ್ಥಾನಿಕ ಸ್ಥಾನಗಳಿಗೆ ಅನುಗುಣವಾಗಿ ಬೇರೆ ಬೇರೆ ಹೆಸರುಗಳು ಬಿದ್ದವು. ಕರ್ನಾಟಕದಲ್ಲಿರುವ ಕೋಳಿ ಜನತೆಗೆ ಅವರು ಯಾವ ಉದ್ಯೋಗ ಮಡುತ್ತಾರೋ ಆ ಪ್ರಕಾರ ಹೆಸರುಗಳು ಬಂದಿವೆ. ಬೆಳಗಾವಿ ಗೆಜೆಟಿಯರ್ ಪುಟ ೧೫೫ ರಿಂದ ೧೫೭ ರಲ್ಲಿರುವಂತೆ ಕೆಳಗೆ ತಿಳಿಸಿದೆ.

ಅಂಬಿಗೇರ = ನಾವೆ ನಡೆಸುವವರು

ಕಬ್ಬಲಿಗೇರ = ಮೀನು ಹಿಡಿಯುವರು

ಚುನಾರಿ = ಸುಣ್ಣ ಸುಡುವ ಸುಣಗಾರರು

ಬಾರಕೇರ = ಬಾರಿಕತನ, ಮುಸರೆ ತಿಕ್ಕುವರು

ತಳವಾರ = ತಳವಾರಿಕೆ ಮಾಡುವವರು

ಇದೇ ಜ್ಞಾನ ಕೋಶದ ೧೦ನೇ ಭಾಗದಲ್ಲಿ ೬೮ನೇ ಪುಟದಲ್ಲಿರುವಂತೆ ಮುಂದೆ ಕರ್ನಾಟಕದ ತುಂಗಭದ್ರಾ, ಮಲಪ್ರಭ, ಘಟಪ್ರಭ, ಕೃಷ್ಣ, ಭೀಮಾ ನದಿಗಳ ದಡದ ಊರುಗಳಲ್ಲಿ ನೆಲೆಸಿರುವ ಕೋಳಿ ಜನಾಂಗದ ಜನಸಂಖ್ಯೆ ೧೯೧೧ರ ಜನಗಣತಿಯಂತೆ ೬೦ ಸಾವಿರ ಎಂದು ನಮೂದಿಸಲಾಗಿದೆ.

೪) ೧೯೬೧ರ ಜನಗಣತಿಯ ಪ್ರಕಾರ ಬರೀ ಬಿಜಾಪುರ ಜಿಲ್ಲೆಯ ಪರಿಶಿಷ್ಟ ಜನಾಂಗದ ಜನಸಂಖ್ಯೆ ೧೦ ಸಾವಿರ ಎಂದು ದಾಖಲಿಸಿದೆ. ಇತ್ತೀಚಿನ ಜನಗಣತಿಯಂತೆ ಪರಿಶಿಷ್ಟ ಜನಾಂಗದ ಜನಸಂಖ್ಯೆ ಸುಮಾರು ಒಂದು ಲಕ್ಷಕ್ಕೂ ಹೆಚ್ಚು.

೫) ೧೯೬೮ರ ಮುದ್ರಣದ ಡಿ.ಪಿ.ಐ. ಅವರ ಶಿಷ್ಯವೇತನದ ಅಂಕಿ ಸಂಖ್ಯಾವಿವರಣೆ ಪಟ್ಟಿಯ ಪುಟ ೪ರಲ್ಲಿ ಮುಂಬೈ ಕರ್ನಾಟಕದ ಧಾರವಾಡ, ಬಿಜಾಪುರ,ಬೆಳಗಾವಿ,ಕಾರವಾರ ಈ ನಾಲ್ಕು ಜಿಲ್ಲೆಗಳಲ್ಲಿರುವ ಪರಿಶಿಷ್ಟ ಜನಾಂಗದ ಹೆಸರಿನ ಪಟ್ಟಿಯಲ್ಲಿ ಅ.ನಂ. ೧೨ರಂತೆ ಟೋಕ್ರೆಕೋಳಿ, ಕೋಳಿಢೋರ ಹೆಸರುಗಳನ್ನು ನೋಡಬಹುದಾಗಿದೆ(ವಾಲೀಕಾರ,ಚನ್ನಣ್ಣ:೨೦೦೦:೩೩೨-೩).

## ೧೭. ಉತ್ತರ ಕರ್ನಾಟಕದಲ್ಲಿ ಕೋಳಿ ಜನರು

ಉತ್ತರ ಕರ್ನಾಟಕದ ಕೋಲಿಗಳು ಮೂಲತಃ ಮಹಾರಾಷ್ಟ್ರದ ಸಹ್ಯಾದ್ರಿ ಪರ್ವತದಲ್ಲಿಯ ಮಹಾದೇವ ಕೋಲಿಗಳಾಗಿರವವೆಂಬ ಸಂಗತಿ ಈ ಕೆಳಗಿನ ವರದಿಯಿಂದ ತಿಳಿದುಬರುವುದು.

We are original Mahadev Kolis. While Mahadev Kolis have come from North Karnataka as his people are having Kannada words of 'Unde - Ladu' kus-Child and Hule-Tiger and have mixed with Gavali and Ghadashi people as per his book (26-

7-1994, Chandagada Taluka divasi Mahadev koli reprot). ಈ ಮೇಲಿನ ವರದಿಯಲ್ಲಿದ್ದ ಕೋಳಿಗಳು ಕರ್ನಾಟಕದ ಬೀದರ, ಗುಲ್ಬರ್ಗಾ, ರಾಯಚೂರು, ಬಳ್ಳಾರಿ, ಬಿಜಾಪುರ, ಬೆಳಗಾವಿ, ಧಾರವಾಡ, ಕಾರವಾರ ಜಿಲ್ಲೆಗಳಲ್ಲಿ ಇರುವರು ಎಂದು ತಿಳಿದು ಬರುತ್ತದೆ.

### ೧೮. ಬೀದರ ಜಿಲ್ಲೆಯಲ್ಲಿ ಕೋಳಿ ಬುಡಕಟ್ಟು

ಬೀದರ ಜಿಲ್ಲೆಯ ಬುಡಕಟ್ಟುಗಳಲ್ಲಿ ಮೊದಲನೆಯ ಬಹುಸಂಖ್ಯಾತ ಬುಡಕಟ್ಟು 'ಗೊಂಡ' ಆಗಿದ್ದರೆ ಎರಡನೆಯ ಸ್ಥಾನದಲ್ಲಿ ಟೋಕ್ರೆಕೋಳಿ ಬುಡಕಟ್ಟು ನಿಲ್ಲುವುದು. ಮೀಸಲಾತಿಯ ಬಳಕೆಯಿಂದಾಗಿ ನೂರಾರು ಹಳ್ಳಿಗಳಲ್ಲಿ ಗ್ರಾಮ ಪಂಚಾಯಿತಿ,ತಾಲೂಕು ಪಂಚಾಯಿತಿಯ ಸದಸ್ಯರು ಆಯ್ಕೆಯಾಗಿರುವರು. ಟೋಕ್ರೆಕೋಳಿಗಳನ್ನು ಕೋಳಿ, ಕಬ್ಬಲಿಗ ಎಂತಲೂ ಕರೆಯಲಾಗುತ್ತದೆ. ಇತ್ತೀಚೆಗೆ ಹುಮನಾಬಾದ ತಾಲೂಕಿನ ಹಳ್ಳಿಖೇಡ(ಕೆ)ವಾಡಿ ಗ್ರಾಮದ ಬೆಟ್ಟದ ಮೇಲೆ ಮಹರ್ಷಿ ವಾಲ್ಮೀಕಿಯವರ ಆಶ್ರಮ ಒಂದನ್ನು ಸಂಸ್ಕೃತಿಕ ಕೇಂದ್ರವಾಗಿ ಸ್ಥಾಪಿಸಲಾಗಿದೆ. ಬೇಟೆ, ಪಶುಪಾಲನೆ, ಕೃಷಿಕೂಲಿ, ಕೃಷಿ ಇತ್ಯಾದಿಗಳು ಇವರ ಕಾಯಕಗಳಾಗಿವೆ. ಬಡತನದಿಂದ ಸಾಕ್ಷರತೆ ಅಭಿವೃದ್ಧಿಗೊಂಡಿರುವುದಿಲ್ಲ. ಕರಾವಳಿ ಕರ್ನಾಟಕದ ಜೊತೆಗೆ ಮಾಂಜರಾ, ಕಾರಂಜಾ, ಭೀಮ, ಗೋದಾವರಿ, ಕೃಷ್ಣಾ, ತುಂಗಭದ್ರ ಇತ್ಯಾದಿ ಜಲಾನಯನ ಪ್ರದೇಶಗಳಲ್ಲಿ ಇವರು ಹೆಚ್ಚಾಗಿರುವರು(ಮೈತ್ರಿ,ಕೆ.ಎಂ.;೨೦೦೨:೧೧೭).

ಬೀದರ ಜಿಲ್ಲೆಯಲ್ಲಿ ಕೋಳಾರ, ಕೋಳ್ಳುರು, ಕೋಳವಾಡಿ ಎಂಬಿ ಹೆಸರಿನ ಊರುಗಳಿವೆ. ಅಲ್ಲಿ ಅಧಿಕ ಸಂಖ್ಯೆಯಲ್ಲಿ ಗೊಂಡರು ಮತ್ತು ಟೋಕ್ರೆ ಕೋಲಿಯವರು ವಾಸಿಸುವರು. ಬೇಡ ಮತ್ತು ಕೋಲಿಗಳನ್ನು ಕರ್ನಾಟಕದ ಅಥವಾ ಕನ್ನಡ ನಾಡಿನ ಮೂಲ ನಿವಾಸಿಗಳೆಂದು ಕರೆಯುವರು. ಮುಂಬೈ ಕರಾವಳಿಯಲ್ಲಿ ಕೋಳಿಗಳೆಂಬ ಜನವಿದೆ. ಇವರು ಕೋಲ ಜನ ಇದ್ದಿರಲೂ ಸಾಧ್ಯವಿದೆ. ಬೀದರ ಜಿಲ್ಲೆಯಲ್ಲಿ ಕೋಲಿ ಜನಾಂಗವು ಹುಮನಬಾದ ಮತ್ತು ಬಸವಕಲ್ಯಾಣ ತಾಲೂಕುಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ. ಇವರಿಗೆ ಟೋಕ್ರೆಕೋಳಿ, ಅಂಬಿಗಾರ, ತಳವಾರ, ಕಬ್ಬಲಿಗ, ಸುಣ್ಣಗಾರ, ಮೀನುಗಾರ ಮೊದಲಾದ ಹೆಸರಿನಿಂದಲೂ ಕರೆಯುವರು. ಬೀದರ ಜಿಲ್ಲೆಯಲ್ಲಿ ಕೋಲಿ ಹೆಸರನ್ನು ಸೂಚಿಸುವ ಕೊಳ್ಳೂರು ಎಂಬ ಹೆಸರಿನ ಕೆಲವು ಗ್ರಾಮಗಳಿವೆ. ಕೋಳವಾಡಿ ಎಂಬ ಗ್ರಾಮದಲ್ಲಿ ಕೋಲಿ ಸಮುದಾಯದವರೆ ನೆಲೆಸಿದ್ದಾರೆ.

### ಆಧಾರ ಗ್ರಂಥಗಳು

೦೧. ಎಲ್ಗೊಂಡಾ(ಲೇ).,'ಕೊಲ್ಹಾಪುರ ಔರ ಮೂಲ ನಿವಾಸಿ ಕೋಲಿ', ಕನ್ನಯ್ಯಲಾಲ್ ಚಂಚರಿಕ್(ಸಂ).,೧೯೫೫, *ಅಖಿಲ ಭಾರತೀಯ ಕೋಲಿ ಸಮಾಜದ ರಜತ ಜಯಂತಿ ಸ್ಮರಿಕಾ*(ಹಿಂದಿ), ಕೇಂದ್ರೀಯ ಕಾರ್ಯಾಲಯ,೫೭, ಸೌಥ ಅವೇನ್ಯೂ, ಹೊಸ ದೆಹಲಿ,ಪುಟ,೧೦೩-೬

೦೨. ಕನ್ನಯ್ಯಲಾಲ್ ಚಂಚರಿಕ್(ಸಂ).,೧೯೫೫, 'ಭಾರತಕ ಕೋಲಿ ಸಮಾಜ ಇತಿಹಾಸ ಔರ ಪರಂಪರಾಯ' ಅಖಿಲ

*ಭಾರತೀಯ ಕೋಲಿ ಸಮಾಜದ ರಜತ ಜಯಂತಿ ಸ್ಮರಣ(ಹಿಂದಿ)*, ಕೇಂದ್ರೀಯ ಕಾರ್ಯಾಲಯ,೫೭, ಸೌಥ ಅವೇನ್ಯೂ, ಹೊಸ ದೆಹಲಿ,ಪುಟ,೩೬-೪೮

೦೩. ಖಂಡೋಬಾ,ಪಿ.ಕೆ.,೧೯೯೩,*ಜಾನಪದ ಮುನ್ನೋಟ* (ಗುಲಬರ್ಗಾ:ಸಂಗೀತಾ ಪಬ್ಲಿಕೇಶನ್ಸ)

೦೪. ಜ್ಯೋಶಿ,ಶಂ.ಬಾ.,೧೯೪೭,*ಎಡೆಗಳು ಹೇಳುವ ಕಂನಾಡ ಕತೆ* (ಧಾರವಾಡ: ಮಾಧವ ಬಲ್ಲಾಳ ಬಂಧುಗಳು)

೦೫. ದೇಸಾಯಿ,ಗೋವಿಂದಮೂರ್ತಿ(ಲೇ)., ಕೋಳಿವಾಡದ ಅಪೂರ್ವ ಹೋಳಿ, ಪ್ರಜಾವಾಣಿ ಸಾಪ್ತಾಹಿಕ ಪುರವಣಿ ೧೯.೩.೨೦೦೦ ಪುಟ೧,೩.

೦೬. ಪರಮಶಿವಯ್ಯ,ಜೀ.ಶಂ(ಸಂ).,೧೯೮೨,*ಕರ್ನಾಟಕ ಜಾನಪದ ಸಮೀಕ್ಷೆ* (ಬೆಂಗಳೂರು:ಕನ್ನಡ ಮತ್ತು ಸಂಸ್ಕೃತಿ ಇಲಾಖೆ)

೦೭. ಬುಳ್ಳಾ, ನಾಗಾಬಾಯಿ (ವಕ್ತೃ)., ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ, ಸಂದರ್ಶನ ೪.೩.೨೦೦೧.

೦೮. ಮೈತ್ರಿ ಕೆ.ಎಂ.,೧೯೯೪,ಬೀದರ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯ: ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯಕ್ಕೆ ಸಮರ್ಪಿಸಿದ ಪಿಎಚ್.ಡಿ ಮಹಾಪ್ರಬಂಧ (ಅಪ್ರಕಟಿತ)

೦೯. ........,೨೦೦೨,*ಬುಡಕಟ್ಟು ಕುಲಕಸುಬುಗಳು* (ವಿದ್ಯಾರಣ್ಯ:ಕನ್ನಡ ವಿಶ್ವವಿದ್ಯಾಲಯ,ಹಂಪಿ)

೧೦. ಯಮುನಪ್ಪ ತಂದೆ ಸೈಬಣಪ್ಪ ಸುರಪೂರ(ವಕ್ತೃ)., ಒಕಳಿ ಕ್ಯಾಂಪ್, ಗುಲ್ಬರ್ಗಾ,ಸಂದರ್ಶನ ೭.೪.೨೦೦೨

೧೧. ವಾಲೀಕಾರ,ಚನ್ನಣ್ಣ(ಲೇ).,೨೦೦೦, 'ಟೋಕ್ರೆ ಕೋಳಿ' ಲಕ್ಕಪ್ಪಗೌಡ ಹೆಚ್.ಜೆ. (ಪ್ರಸಂ)., *ಕನಾಟಕ ಬುಡಕಟ್ಟುಗಳು*(ಬೆಂಗಳೂರು:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ) ಸಂಪುಟ-೨

೧೨. ಶಂಕರ ಬಾಣಿ ಮತ್ತು ಶೋಭಾ ಬಾಣಿ(ವಕ್ತೃ)., ಒಕಳಿ ಕ್ಯಾಂಪ್; ಗುಲ್ಬರ್ಗಾ,ಸಂದರ್ಶನ ೬.೪.೨೦೦೨

೧೩. ಹರೀಶ,ಪಿ.ಎಸ್.,೧೯೮೮,ಕೊಡಗಿನ ಎರವರು: ಒಂದು ಅಧ್ಯಯನ, ಅಪ್ರಕಟಿತ ಮಹಾಪ್ರಬಂಧ ಮೈಸೂರು, ಮಾನವ ವಿಜ್ಞಾನ ಅಧ್ಯಯನ ವಿಭಾಗ ಮಾನಸಗಂಗೋತ್ರಿ, ಮೈಸೂರು.

14. New Indian Entiquary:1938:275-9

15. Thurston,E and K. Rangachari (ed)., 1909, The Castes and Tribes of Southern India, Govt. press, Madrass

16. Vidyarthi,L.P.,1987, *Social Anthropology in India: A Social Science Orientation,* Concept Publication Co.,NewDelhi.

ಅಧ್ಯಾಯ ೩

# ಟೋಕ್ರೆ ಕೋಳಿ ಬುಡಕಟ್ಟಿನ ಸಂಸ್ಕೃತಿ

೧. ಸಂಸ್ಕೃತಿ ಪದ ವಿವೇಚನೆ

೨. ಸಂಸ್ಕೃತಿ ವ್ಯಾಖ್ಯೆಗಳು

೩. ಸಂಸ್ಕೃತಿಯ ಪ್ರಭೇದಗಳು

೪. ಜೀವನಾವರ್ತಕ ಸಂಸ್ಕಾರಗಳು

## ಅಧ್ಯಾಯ ೩
# ಟೋಕ್ರೆ ಕೋಳಿ ಬುಡಕಟ್ಟಿನ ಸಂಸ್ಕೃತಿ

ಅಮಿಬಾದಂತಹ ಏಕಕೋಶ ಜೀವಿಯಿಂದ ವಿಕಸನಗೊಂಡ ಇಂದಿನ ಸಕಲ ಜೀವರಾಶಿಗಳಲ್ಲಿ ಮನುಷ್ಯ ಶ್ರೇಷ್ಠವೆನಿಸಿಕೊಂಡ. ಆತನು ಅಭಿವೃದ್ಧಿಶೀಲ ವ್ಯವಸ್ಥಿತ ಜೀವನವನ್ನು ನಡೆಸುತ್ತಾ ಬಂದ. ಈ ಒಂದು ವ್ಯವಸ್ಥೆಯೇ ಆತನ ಜೀವನ ವಿಧಾನವಾಗಿದೆ. ಮಾನವ ತನ್ನ ಬದುಕಿನುದ್ದಕ್ಕೂ ಪ್ರಾಣಿಗಳಿಗಿಂತ ಭಿನ್ನವಾಗಿ ಬಾಳುತ್ತ ತನಗನುಕೂಲಕರವಾದ ಅನೇಕ ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳನ್ನು ರೂಢಿಸಿಕೊಂಡಿದ್ದಾನೆ. ಇವುಗಳ ಮೊತ್ತವೆ ಸಂಸ್ಕೃತಿ. ಈ ಸಂಸ್ಕೃತಿಯು ಮಾನವನ ಬುದ್ಧಿ ವಿಕಾಸ ಮತ್ತು ಮಾನಸಿಕ ಪಕ್ವತೆಯಿಂದ ರೂಪಗೊಂಡಿರುವುದು. ಅದು ತನ್ನ ದೇಶದ ಮತ್ತು ಅಲ್ಲಿನ ಜನಾಂಗದ ಮಾನಸಿಕ ಸಾಧನೆ ಯಾಗಿರುತ್ತದೆ. ಈ ಸಂಸ್ಕೃತಿಯು ವೈಯಕ್ತಿಕ ಆಚರಣೆಗಳಿಂದ ಸಮುದಾಯದ ಸಂಪ್ರದಾಯಗಳವರೆಗೆ ವ್ಯಾಪಿಸಿರುವುದು.

### ೧. ಸಂಸ್ಕೃತಿ ಪದ ವಿವೇಚನೆ

ಸಂಸ್ಕೃತಿಯೆಂಬ ಪದ ಇತ್ತೀಚಿನದಾದರೂ ಅದು ಒಳಗೊಳ್ಳುವ ಅರ್ಥ ಬಹು ಪ್ರಾಚೀನದಾಗಿದೆ. ಇಂದು ಸಂಸ್ಕೃತಿ ಇಂಗ್ಲೀಷಿನ Culture ಪದಕ್ಕೆ ಸಂವಾದಿಯಾಗಿ ಬಳಸುತ್ತೇವೆ. Culture ಎನ್ನುವುದು ಲ್ಯಾಟಿನ ಭಾಷೆಯ Cultus ಎಂಬುದರಿಂದ ಬಂದಿದೆ. Cultus ಎಂದರೆ ಗೌರವಿಸು, ಆರಾಧಿಸು, ಸೇವೆಮಾಡು, ಭೂಮಿಯನ್ನು ಆರಾಧಿಸು ಎಂದರ್ಥ ಕೊಡುತ್ತದೆ. ಬಹುಮುಖ್ಯ ಸಂಸ್ಕೃತಿ ಅಮೂರ್ತವಾದದ್ದು, ಅಭೌತಿಕ ಬೆಳವಣಿಗೆಗಳೇ ಸಂಸ್ಕೃತಿಯ ಪರಿಧಿಯೊಳಗೆ ಬರುತ್ತವೆ.

ಸಂಸ್ಕೃತಿಯನ್ನು ಕುರಿತು ಚರ್ಚಿಸುವಾಗ ಭೂದೇವಿಯ ಆರಾಧನೆ ಗಮನಾರ್ಹವಾದದ್ದು. ರೈತನ ದಿನನಿತ್ಯದ ಪ್ರಕ್ರಿಯೆಗಳು ಆರಂಭವಾಗುವುದು ಭೂಮಿ ಆರಾಧನೆಯಿಂದಲೆ. ಜನಪದರಲ್ಲಿಯ ಗರತಿಯು ಮುಂಜಾನೆ ಎದ್ದು ಮುಖ ತೊಳೆದು ಮೊದಲು ಹೀಗೆ ಧ್ಯಾನಿಸುವಳು.

ಏಳುತಲೆ ಎದ್ದು ಯಾರ್‍ಯಾರ ನೆನೆಯಲಿ

ಎಳ್ಳು ಜೀರಿಗೆ ಬೆಳೆಯೋಳ |ಭೂಮಿತಾಯಿ|

ಎದ್ದೊಂದು ಗಳಿಗೆ ನೆನೆವೆನು|| (ಹಲಸಂಗಿ ಚನ್ನಮಲ್ಲಪ್ಪ:೧೯೯೦:೪೯)

ಹೀಗೆ ಭೂಮಿಗೆ ಸಂಭಂಧಿಸಿದ ಒಂದು ಪದ Agriculture ಎಂಬುದು ಇಂಗ್ಲೀಷ ಪದದಿಂದ ಉಗಮಗೊಂಡಿದೆ. Agriculture ಅಂದರೆ, ಭೂ ವ್ಯವಸಾಯ ಎಂದರ್ಥ. ಇಲ್ಲಿನ Culture ಪದದ ಅರ್ಥ

ಸಂಸ್ಕೃತಿ ಎಂದಾಗುವುದು. ಸಂಸ್ಕೃತಿ ಭಾವನಿಷ್ಠವೂ ಹೌದು. ಇದು ಹಲವಾರು ಅರ್ಥಗಳನನ್ನು ಹೊಂದಿದೆ. ಈ ಕುರಿತು ಹಲವಾರು ತಜ್ಞರು ಅನೇಕ ವ್ಯಾಖ್ಯೆಗಳನ್ನು ನೀಡಿದ್ದಾರೆ.

**೨. ಸಂಸ್ಕೃತಿ ವ್ಯಾಖ್ಯೆಗಳು**

ಸಂಸ್ಕೃತಿಯನ್ನು ಕುರಿತು ಅನೇಕ ಭಾರತೀಯ ಮತ್ತು ಪಾಶ್ಚಾತ್ಯ ವಿದ್ವಾಂಸರು, ಚಿಂತಕರು ವ್ಯಾಖ್ಯಾನಗಳನ್ನು ನೀಡಿದ್ದಾರೆ. ಆದರೆ ಯಾವುದೊಂದು ವ್ಯಾಖ್ಯಾನವೂ ಪರಿಪೂರ್ಣವಲ್ಲ. ಆದರೂ ಸಹ ಮೊಟ್ಟ ಮೊದಲ ಬಾರಿಗೆ ಆದಿವಾಸಿಗಳ ಸಂಸ್ಕೃತಿಯ ಅಧ್ಯಯನ ಮಾಡಿದ ಇ.ಬಿ. ಟೈಲರ್ ಅವರು Culture ಎಂಬ ಪದಕ್ಕೆ ಶಾಸ್ತ್ರೀಯವಾದ ವಿವರಣೆ ನೀಡಿ ಸಂಸ್ಕೃತಿಯ ಸ್ವರೂಪವನ್ನು ಸೂತ್ರ ರೂಪದಲ್ಲಿ ಹೇಳಿದ್ದಾರೆ.

೧.ಇ.ಬಿ. ಟೈಲರ್ ಅವರ ಪ್ರಕಾರ ಸಂಸ್ಕೃತಿಯೆಂದರೆ "ಸಮಾಜದ ಒಬ್ಬ ಸದಸ್ಯನಾಗಿ ಮನುಷ್ಯನು ಗಳಿಸಿಕೊಂಡ ಜ್ಞಾನ, ನಂಬಿಕೆ, ಕಲೆ, ನೀತಿ, ನಿಯಮ, ಆಚರಣೆ, ಸ್ವಭಾವ ಮತ್ತು ಯಾವುದೇ ಶಕ್ತ ಸ್ಥಿತಿಯನ್ನು ಒಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ" ಎಂದು ವ್ಯಾಖ್ಯಾನಿಸಿದ್ದಾರೆ(ಇ.ಬಿ.ಟೈಲರ್:೧೮೯೧:೨೫). ಮಾನವ ಸಮಾಜಜೀವಿ. ಆತನು ಸಮಾಜ ಬಿಟ್ಟು ಉಳಿಯಲು ಸಾಧ್ಯಾವಿಲ್ಲ. ಸಂಸ್ಕೃತಿ ಮತ್ತು ಸಮಾಜ ಒಂದು ನಾಣ್ಯದ ಎರಡು ಮುಖಗಳು. ಅತನು ಸಮಾಜದಲ್ಲಿದ್ದು ಸಂಪಾದಿಸಿದ ಪ್ರತಿಯೊಂದು ಜ್ಞಾನವು ಸಂಸ್ಕೃತಿಯಿಂದ ಪಡೆದದ್ದು ಅವುಗಳನ್ನೆಲ್ಲ ಒಳಗೊಂಡ ಸಂಕೀರ್ಣವೆ ಸಂಸ್ಕೃತಿ.

೨.ಕ್ರೋಬರ್ ಅವರ ಪ್ರಕಾರ ಸಂಸ್ಕೃತಿ ಎನ್ನುವುದು ನಾವು ಕಲಿತ ಹಾಗೂ ಪ್ರಸಾರ ಮಾಡುವ ಸ್ವಭಾವ, ತಂತ್ರವಿಧಾನ, ಚಿಂತನೆ ಮತ್ತು ಮೌಲ್ಯಗಳ ಮೊತ್ತವಾಗಿದೆ(Crober,A.L:1976:82). ಮಾಡಿ ಕಲಿ ನೋಡಿ ತಿಳಿ ಎಂಬಂತೆ ಅದು ಪ್ರಯತ್ನದಿಂದ ಕಲಿಯಬೇಕಾಗುತ್ತದೆ ಹೊರತು ವಂಶಪರಂಪರಾಗತವಾಗಿ ಬರುವುದಿಲ್ಲ. ಮಾನವ ತನ್ನ ಸ್ವಾಭಾವ, ಗುಣ, ನಡವಳಿಕೆ, ತಂತ್ರವಿಧಾನ ಹಾಗೂ ಚಿಂತನೆಯನ್ನು ಅರಿತೋ ಅರಿಯದೋ ಪರಿಸರದಿಂದ ಕಲಿತುಕೊಳ್ಳುತ್ತಾನೆ. ಹೀಗೆ ಸತತ ಕಲಿಕೆ ಸಂಸ್ಕೃತಿಯನ್ನು ಚಲನಶೀಲವಾಗಿಡುತ್ತದೆ.

೩.ಒಂದು ಗೊತ್ತಾದ ಪರಂಪರೆಗೆ ಸೇರಿದ ಜನ ಕಲಿಯುವ, ಹಂಚಿಕೊಳ್ಳುವ ಮತ್ತು ಗೌರವಿಸುವ ಕಾರ್ಯಗಳ ಮೊತ್ತವೇ ಸಂಸ್ಕೃತಿ (ಕಿಸಿಂಗ,F.M.:೧೯೬೨:೨೫). ಯಾವುದೇ ಒಂದು ಜನಾಂಗಕ್ಕೆ ತನ್ನದೆಯಾದ ಸಂಸ್ಕೃತಿ ಇರುತ್ತದೆ. ಆ ಜನಾಂಗದವರು ಸಂಸ್ಕೃತಿಯಲ್ಲಿ ಒಳಗೊಂಡ ಆಚಾರ,ವಿಚಾರ, ನಂಬಿಕೆ, ಸಂಪ್ರದಾಯ ಕಲೆ ಮೊದಲಾದವುಗಳ ಕಲಿಕೆ ಹಾಗೂ ಹಂಚಿಕೆಯನ್ನೇ ಸಂಸ್ಕೃತಿಯೆಂದು ಹೇಳಿದಂತಾಗುತ್ತದೆ.

೪.ಜನರು ಒಂದು ಸ್ಥಳದಲ್ಲಿ ಒಂದಾಗಿ ಜೀವಿಸುತ್ತಿರುವಾಗ ಅವರಿಂದ ಹೊರಬರುವ ಕಲೆಗಳಲ್ಲಿ, ಸಂಪ್ರದಾಯ ಪದ್ಧತಿಗಳಲ್ಲಿ, ಸ್ವಭಾವ ಧರ್ಮಗಳಲ್ಲಿ, ಉತ್ತಮ ಆಚಾರ-ವಿಚಾರ, ಸತ್ಕೃತಿ, ತತ್ವಜ್ಞಾನ, ಸಾಹಿತ್ಯ ನಾಟಕ, ಸಂಗೀತ ಶಿಕ್ಷಣ, ಆಹಾರ-ವಿಹಾರ, ಹಬ್ಬ-ಹರಿದಿನಗಳಲ್ಲಿ, ಗುಡಿ-ಗುಂಡಾರ ಮುಂತಾದವುಗಳಲ್ಲಿ ಸಂಸ್ಕೃತಿಯನ್ನು ಗುರುತಿಸಬಹುದಾಗಿದೆ. ಮನುಷ್ಯನ ಪ್ರತಿಭೆ ಯಾವ ಯಾವ ರೀತಿಗಳಲ್ಲಿ ತನ್ನ ಜೀವನದ ಪ್ರಕಾರಗಳನ್ನು ಚಿತ್ರಿಸಬಲ್ಲುದೋ ಅವೆಲ್ಲ ಸಂಸ್ಕೃತಿಯ ಪಡಿಯಚ್ಚುಗಳಾಗುವವು (ಡಿ.ವಿ.ಜಿ:೧೯೫೬:೧). ನಮ್ಮ ದೃಷ್ಟಿಗೆ ಒಳಗಾಗಿರುವ ಎಲ್ಲಾ ವಸ್ತುಗಳಲೆಲ್ಲಾ ಸಂಸ್ಕೃತಿಯ ಚಿನ್ಹೆಯನ್ನು ಕಾಣುಬಹುದು. ಮೇಲಿನವುಗಳಲ್ಲಿ

ಯಾವುದೇ ಒಂದನ್ನು ತೆಗೆದುಕೊಂಡು ಸಂಸ್ಕೃತಿಯೆಂದು ಹೇಳಲು ಸಾಧ್ಯವಿಲ್ಲ. ಇದು ಹಳೆಯದರ ಜೊತೆಗೆ ಹೊಸದನ್ನು ಸೇರಿಸಿಕೊಂಡು ಸ್ವಲ್ಪ ಪರಿವರ್ತನೆಯಾಗಿ ಹೊಸ ಜನಾಂಗಕ್ಕೆ ಎರವಲಾಗುತ್ತ ಹೋಗುವುದು. 'ಹಳೆಯ ಬೇರು ಹೊಸ ಚಿಗುರು' ಎನ್ನುವ ಗಾದೆಯಂತೆ ಹಳೆಯ ಮೂಲ ಬೇರಿನಿಂದ ಹೊಸ ಚಿಗುರು ಹುಟ್ಟಲು ಸಾಧ್ಯ. ಹಳೆಯ ಜನಾಂಗದ ಸಂಸ್ಕೃತಿ ಹೊಸ (ಆಧುನಿಕ) ಜನಾಂಗಕ್ಕೆ ಮಾದರಿಯಾಗುವುದು. ಪ್ರಾಚೀನ ಸಂಸ್ಕೃತಿಯ ಮೂಲ ಬೇರಿನಿಂದ ನಾವು ಹೂ, ಕಾಯಿ, ಹಣ್ಣು ಪಡೆಯಬಹುದು. ಆದ್ದರಿಂದಲೇ ಮೂಲ ಬೇರಾದ ಹಳೆಯ ಸಂಸ್ಕೃತಿಯ ಸಂರಕ್ಷಣೆ ಆಗಬೇಕು. ಅಂದಾಗಲೇ ಮೂಲ ಸಂಸ್ಕೃತಿ ಉಳಿಯಲು ಸಾಧ್ಯ.

೫.ಸಂಸ್ಕೃತಿಯೆಂಬುದು 'ವ್ಯಕ್ತಿಯ ಸ್ವಭಾವಕ್ಕೆ ಸಂಸ್ಕಾರವನ್ನು ಕೊಡುವ ಶಕ್ತಿ' ಎಂಬ ಅರ್ಥವನ್ನು ಪಡೆದಿದೆ. ವೈಯಕ್ತಿಕ ವಿಕಾಸವೇ ಸಂಸ್ಕೃತಿ ಎಂಬುದು ಅದೇ ಮಾತನ್ನು ಸಮರ್ಥಿಸುವುದು. ವೈಯಕ್ತಿಕಾಗಿ ವ್ಯಕ್ತಿಯ ಮನಸ್ಸಿನ ಮೇಲೆ ಪರಿಣಾಮ ಬೀರಿ ಸಂಸ್ಕಾರ ಉಂಟು ಮಾಡಿ ಆತನನ್ನು ಪೂರ್ಣವಾಗಿ ಮಾಡುವುದು ಸಂಸ್ಕೃತಿಯ ಕರ್ತವ್ಯವಾಗಿದೆ(ತಿಪ್ಪೆರುದ್ರಸ್ವಾಮಿ,ಹೆಚ್:೧೯೮೫:೧೨).

೬.ಸೌಂದರ್ಯೋಪಾಸನೆಯೇ ಸಂಸ್ಕೃತಿ, ನುಡಿದಂತೆ ನಡೆಯುವುದೇ ಸಂಸ್ಕೃತಿ, ಸಾಮಾಜಿಕ ಸಹಬಾಳ್ವೆಯೇ ಸಂಸ್ಕೃತಿ, ಶೀಲದ ಸೌಭಾಗ್ಯವೇ ಸಂಸ್ಕೃತಿ, ಆತ್ಮ ಶಿಕ್ಷಣವೇ ಸಂಸ್ಕೃತಿ, ಜೀವನ ವಿಧಾನವೇ ಸಂಸ್ಕೃತಿ(ಅವರೇ:೧೯೮೫:೧೪). ಹೀಗೆ ಮೊದಲಾದ ರೀತಿಯಲ್ಲಿ ಸಂಸ್ಕೃತಿಯನ್ನು ಕುರಿತು ಭಾರತೀಯರ ಹೇಳಿಕೆಗಳಿವೆ.

ಸುಸಂಸ್ಕೃತ ವ್ಯಕ್ತಿಗಳನ್ನು ನೋಡಿ ಕಲಿತು ಕೊಳ್ಳುವುದು ಮನುಷ್ಯನ ಕರ್ತವ್ಯವಾಗಿದೆ. ನಮ್ಮ ವಿಚಾರ ಶಕ್ತಿ ಅಭಿವೃದ್ಧಿ ಪಡೆದಂತೆ ಸಂಸ್ಕೃತಿಗೆ ಮತ್ತಷ್ಟು ಹೊಳಪು ಬರುತ್ತದೆ. ಯಾರೋ ಒಂದು ಮಾತು ಹೇಳಿದಾಕ್ಷಣ ನಂಬಿ ಬಿಡುವುದು, ವಿಚಾರಿಸದೆ ಮುಂದೆ ಸಾಗುವುದು ಅವಿವೇಕದ ಲಕ್ಷಣ. ಆದ್ದರಿಂದ ವಿಚಾರ ಮಾಡಿ ಹೆಜ್ಜೆ ಇಡಬೇಕು. ಸಂಸ್ಕೃತಿ ಮನುಷ್ಯನ ಒಳ್ಳೆಯ ಗುಣಕ್ಕೆ ಬೆಲೆ ಕೊಟ್ಟು ಮನಸ್ಸು ಪರಿಶುದ್ಧವಾಗುವರೆಗೆ ತಿದ್ದುತ್ತಲೇ ಇರುವುದು. ಅದು ವಿವಿಧ ರೂಪಗಳಲ್ಲಿ ಅಭಿರುಚಿಯನ್ನು ಹೆಚ್ಚಿಸಿ ಪ್ರಜ್ವಲಿಸುತ್ತಿರುತ್ತದೆ.

ಮನಷ್ಯ ತನ್ನ ಅನುಕೂಲಕ್ಕಾಗಿ ಏನೆಲ್ಲವನ್ನು ನಿರ್ಮಿಸಿಕೊಂಡಿರುವನೋ ಅವೆಲ್ಲವನ್ನು ಸಂಸ್ಕೃತಿ ಒಳಗೊಂಡಿರುವುದು. ಆತನು ಬಳಸುವ ಸಾಮಗ್ರಿಗಳು, ಉಡುಗೆ ತೊಡುಗೆಗಳು, ಭಾಷೆ, ನಂಬಿಕೆ, ಸಂಪ್ರದಾಯ, ಆಚರಣೆ, ಕಲೆ, ಸಾಮಾಜಿಕ ಸಂಬಂಧಗಳು ಇವೆಲ್ಲವನ್ನು ಸಂಸ್ಕೃತಿ ಪದದಲ್ಲಿ ಒಳಗೊಳ್ಳುತ್ತವೆ. ಆದ್ದರಿಂದ ಒಟ್ಟು ಜನರ ಜೀವನ ವಿಧಾನವೇ ಸಂಸ್ಕೃತಿ ಎಂದು ಹೇಳಲಾಗುವುದು (ಚಿದಾನಂದಮೂರ್ತಿ,ಎಂ,.(ಲೇ): ಕನ್ನಡನುಡಿ:೬,೧೧,೧೮).

## ೩. ಸಂಸ್ಕೃತಿಯ ಪ್ರಭೇದಗಳು

ಸಂಸ್ಕೃತಿ ಎಂಬುದು ವ್ಯಾಪಕವಾದ ಒಂದು ಪರಿಕಲ್ಪನೆ. ಮಾನವ ಇತಿಹಾಸ ಕಾಲದ ಮತ್ತು ಇತಿಹಾಸ ಪೂರ್ವಕಾಲದ ಎಲ್ಲ ಸಂಸ್ಕೃತಿ ಅವಸ್ಥೆಗಳನ್ನು ಒಳಗೊಳ್ಳುತ್ತದೆ. ೧.ಆದಿಮ ಸಂಸ್ಕೃತಿ ೨.ಬುಡಕಟ್ಟು ಸಂಸ್ಕೃತಿ

೩.ಗ್ರಾಮೀಣ ಸಂಸ್ಕೃತಿ ೪.ನಗರ ಸಂಸ್ಕೃತಿ ಎಂಬುದಾಗಿ ಸಂಸ್ಕೃತಿಯ ವಿಕಾಸದ ನಾಲ್ಕು ಹಂತಗಳನ್ನು ಗುರುತಿಸಬಹುದು. ಆದಿಮ ಸಂಸ್ಕೃತಿಯಿಂದ ಸ್ವಲ್ಪ ಭಿನ್ನವಾಗಿರುವುದನ್ನು ಬುಡಕಟ್ಟು ಸಂಸ್ಕೃತಿ, ಬುಡಕಟ್ಟು ಸಂಸ್ಕೃತಿಯ ಕೆಲವು ಅಂಶಗಳನ್ನು ಉಳಿಸಿಕೊಂಡು, ನಗರ ಸಂಸ್ಕೃತಿಯ ಕೆಲವು ಅಂಶಗಳನ್ನು ರೂಢಿಸಿಕೊಂಡದ್ದು ಗ್ರಾಮೀಣ ಸಂಸ್ಕೃತಿ. ಬುಡಕಟ್ಟು (ಆದಿಮ) ಸಂಸ್ಕೃತಿಗೆ ವಿರುದ್ಧವಾದ ಲಕ್ಷಣಗಳನ್ನು ಹೊಂದಿರುವ ನಗರ ಸಂಸ್ಕೃತಿಯನ್ನು ಶಿಷ್ಟ ಸಂಸ್ಕೃತಿಯೆಂದು ಕರೆಯುತ್ತಾರೆ.

ಸಂಸ್ಕೃತಿಯನ್ನು ಜನಾಂಗಿಕವಾಗಿ ಅಧ್ಯಯನ ಮಾಡುವಾಗ ಒಟ್ಟು ಜನಜೀವನದ ವಿಧಗಳು, ನೆಲೆಗಳನ್ನು ಕೂಲಂಕುಷವಾಗಿ ಪರಿಗಣಿಸಬೇಕಾಗುತ್ತದೆ. ಆ ನಿಟ್ಟಿನಲ್ಲಿ ಬುಡಕಟ್ಟಿನ ಸಂಸ್ಕೃತಿಯು ವ್ಯಕ್ತಿಯ ವೈಯಕ್ತಿಕತೆಯಿಂದ ಹಿಡಿದು ಸಾಮೂಹಿಕವಾದ ಸಂದರ್ಭಗಳವರೆಗೆ ಅದರ ಹರವು ಚಾಚಿರುತ್ತದೆ.

ಸಂಸ್ಕೃತಿಯಲ್ಲಿ ಸಾಮಾನ್ಯ ಹಾಗೂ ಶಾಸ್ತ್ರೀಯ ಎಂಬೆರಡು ರೀತಿಯ ವ್ಯತ್ಯಾಸಗಳನ್ನು ಹೇಳಬಹುದು. ಈ ಸಾಮಾನ್ಯ ಸಂಸ್ಕೃತಿಯಲ್ಲಿ ವ್ಯಷ್ಟಿ ಸಂಸ್ಕೃತಿ ಹಾಗೂ ಸಮಷ್ಟಿ ಸಂಸ್ಕೃತಿ ಎಂದು ಪ್ರಭೇದ ಮಾಡಲಾಗಿದೆ.

೧.ವ್ಯಷ್ಟಿ ಸಂಸ್ಕೃತಿಯು ಒಬ್ಬ ವ್ಯಕ್ತಿಯಿಂದ ನಿರ್ಮಿತವಾಗಿರುತ್ತದೆ. ಇದರಲ್ಲಿ ವೈಯಕ್ತಿಕತೆಯಿಂದಲೇ ಆರಂಭವಾದ ಸಂಸ್ಕೃತಿಯಿರುವುದು. ಆದರೆ ಸಮಷ್ಟಿ ಸಂಸ್ಕೃತಿಯು ದೇಶ, ಕಾಲ, ಭಾಷೆ, ಜನಾಂಗವನ್ನು ಒಳಗೊಂಡಿರುವುದು. ಇದು ದೇಶಕ್ಕೆ ಸಂಬಂಧಿಸಿದ ಸಂಸ್ಕೃತಿ ಇರುವುದರಿಂದ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಭಿನ್ನವಾಗಿರುವುದು. ಅದೇ ಕಾಲಕ್ಕೆ ತಕ್ಕಂತೆ ಮೂಲದ ಸಂಸ್ಕೃತಿ ಬದಲಾವಣೆಯಾಗುತ್ತದೆ. ಭಾಷೆಯ ಅನುಗುಣವಾಗಿ ಸಂಸ್ಕೃತಿಯು ಭಿನ್ನವಾಗಿರುತ್ತದೆ. ಉದಾಹರಣೆ ಕರ್ನಾಟಕ ಮತ್ತು ಮಹಾರಾಷ್ಟ್ರದ ಸಂಸ್ಕೃತಿಯಲ್ಲಿ ಭಿನ್ನತೆಯನ್ನು ಎದ್ದು ಕಾಣುತ್ತದೆ. ಅದೇ ರೀತಿ ಭೌಗೋಳಿಕ, ಪ್ರಾದೇಶಿಕ ಹಾಗೂ ಜನಾಂಗಕ್ಕೆ ಸಂಬಂಧಿಸಿದಂತೆ ಸಮಷ್ಟಿ ಸಂಸ್ಕೃತಿಯಲ್ಲಿಯೂ ಭಿನ್ನತೆಯನ್ನು ಕಾಣುವ ಸಾಧ್ಯತೆಯಿದೆ.

೨. ಶಾಸ್ತ್ರೀಯವಾಗಿ ಸಂಸ್ಕೃತಿಯನ್ನು ಅಭ್ಯಸಿಸುವಾಗ ಸಂಸ್ಕೃತಿ ಮಾನವನಿಗೆ ಸಂಬಂಧಿಸಿದುದರಿಂದ ಅದರ ಅಧ್ಯಯನ ಮಾನವಶಾಸ್ತ್ರದ ವ್ಯಾಪ್ತಿಯಲ್ಲಿ ಬರುತ್ತದೆ. ಮಾನವ ಮತ್ತು ಆತನ ಸಂಸ್ಕೃತಿಯ ಸಮಗ್ರ ಅಧ್ಯಯನ ನಡೆಸುವುದು ಮಾನವಶಾಸ್ತ್ರದ ಗುರಿ. ಮಾನವಶಾಸ್ತ್ರದಲ್ಲಿ ಎರಡು ವಿಧಗಳು. ಅವು

೧. ಭೌತಿಕ ಮಾನವಶಾಸ್ತ್ರ (Physical Anthropology)

೨. ಸಾಂಸ್ಕೃತಿಕ ಮಾನವಶಾಸ್ತ್ರ (Cultural Anthropology)

ಭೌತಿಕ ಮಾನವಶಾಸ್ತ್ರವು ಮಾನವನ ಭೌತಿಕ ಗುಣಲಕ್ಷಣಗಳನ್ನು ಕುರಿತು ಅಧ್ಯಯನ ಮಾಡಿದರೆ ಸಾಂಸ್ಕೃತಿಕ ಮಾನವಶಾಸ್ತ್ರವು ಮಾನವನ ಸಂಸ್ಕೃತಿಯ ಅಧ್ಯಯನ ಮಾಡುತ್ತದೆ. ಮತ್ತೇ ಸಂಸ್ಕೃತಿಕ ಮಾನವಶಾಸ್ತ್ರದಲ್ಲಿ ನಾಲ್ಕು ವಿಧಗಳು. ಅವು

೧. ಪ್ರಾಕ್ತನಶಾಸ್ತ್ರ (Pre-historic Archaeology)

೨. ಭಾಷಾವಿಜ್ಞಾನ (Linguistics)

೩. ಮಾನವಕುಲಶಾಸ್ತ್ರ (Ethnology)

೪. ಸಾಮಾಜಿಕ ಮಾನವಶಾಸ್ತ್ರ (Social Anthropology).

ಇವು ಒಂದೊಂದು ಒಂದೊಂದು ಅಧ್ಯಯನದ ಗುರಿಯನ್ನು ಹೊಂದಿವೆ. ಇತಿಹಾಸ ಪೂರ್ವಕಾಲದ ಸಂಸ್ಕೃತಿಯನ್ನು ಅಧ್ಯಯಿಸುವುದು ಪ್ರಾಕ್ತನಶಾಸ್ತ್ರದ ಗುರಿಯಾದರೆ, ಮಾನವ ಭಾಷೆಯ ಸ್ವರೂಪವನ್ನು ಅಭ್ಯಸಿಸುವುದು ಭಾಷಾಶಾಸ್ತ್ರದ ಉದ್ದೇಶ. ಮಾನವಕುಲಶಾಸ್ತ್ರದಲ್ಲಿ ಮಾನವ ಕುಲ ವಿವರಣ ಶಾಸ್ತ್ರ ಎಂಬ ಇನ್ನೊಂದು ಉಪವಿಭಾಗವಿದೆ. ಸಂಪ್ರದಾಯಗಳ ವಿವರಣಾತ್ಮಕ ಅಧ್ಯಯನ ಮಾನವ ಕುಲ ವಿವರಣಶಾಸ್ತ್ರದ ಉದ್ದೇಶವಾದರೆ, ಬೇರೆ ಬೇರೆ ಸಂಸ್ಕೃತಿಗಳಿಗಿರುವ ಸಾಮ್ಯ ವೈಷಮ್ಯಗಳನ್ನು ಚಾರಿತ್ರಿಕ ವಿಧಾನದಿಂದ ಅಭ್ಯಸಿಸುವುದು ಮಾನವ ಕುಲಶಾಸ್ತ್ರದ ಗುರಿ. ಮಾನವಶಾಸ್ತ್ರ ಪ್ರಪಂಚದ ಸಂಸ್ಕೃತಿಗಳ ಅಧ್ಯಯನಕ್ಕೆ ಮತ್ತು ಮಾನವ ಕುಲಶಾಸ್ತ್ರ ಆದಿವಾಸಿ ಸಂಸ್ಕೃತಿಗಳ ಅಧ್ಯಯನಕ್ಕೆ ಸೀಮಿತವಾಗಿದೆ. ಇವು ಒಂದೊಂದು ಉದ್ದೇಶದ ಮೂಲಕ ಪರಿಪೂರ್ಣವಾಗಿ ಅಭ್ಯಸಿಸಲು ಸಾಧ್ಯ(ಅಂಬಳಿಕೆ ಹಿರಿಯಣ್ಣ:೧೯೮೪:೧೨).

## ೪. ಜೀವನಾವರ್ತಕ ಸಂಸ್ಕಾರಗಳು

೪.೧ ಜನನ : ಸೂಲಗಿತ್ತಿಯು ಮಗು ಜನಿಸಿದ ತಕ್ಷಣ ತಾಯಿಯ ಕಳ್ಳುಬಳ್ಳಿಯನ್ನು ಕತ್ತರಿಸಿ ಅದಕ್ಕೆ ದಾರದಿಂದ ಕಟ್ಟುತ್ತಾಳೆ. ಮಗು ಮತ್ತು ತಾಯಿಗೆ ಸ್ನಾನ ಮಾಡಿಸುತ್ತಾಳೆ. ಮಾಸನ್ನು ಹೊಸ ಕುಳ್ಳಿಯಲ್ಲಿ ಹಾಕಿ ದನದ ಕೊಟ್ಟಿಗೆ ಅಥವಾ ಅಂಗಳದಲ್ಲಿ ಹುಗಿಯುತ್ತಾಳೆ/ಹುಗಿಸುತ್ತಾಳೆ. ಅದರ ಮೇಲೆ ಅತ್ತಿ ಹಾಗೂ ಬೇವಿನ ಫಳ್ಳಿಯನ್ನು  ನೆಟ್ಟಿಸುತ್ತಾಳೆ. ಮಾಸಿನ ಕುಳ್ಳಿ ಹುಗಿಯುವಾಗ ಓರೆಯಾದರೆ, ಮಗು ವಾಂತಿ ಮಾಡುತ್ತದೆಂಬ ನಂಬಿಕೆ ಅವರಲ್ಲಿದೆ. ಆದುದರಿಂದ ಅದನ್ನು ಆದಷ್ಟು ನೇರವಾಗಿಟ್ಟು ತಗ್ಗನ್ನು ಮುಚ್ಚುವರು.

೪.೨ ಐದೇಸಿ ಕಾರ್ಯ : ಜನನವಾದ ಐದನೇ ದಿವಸಕ್ಕೆ ಐದೇಸಿ ಮಾಡುವರು. ಅಂದು ಮನೆ ಸಾರಿಸಿ ಸ್ವಚ್ಛಗೊಳಿಸಿ, ಬಟ್ಟೆಯನ್ನು ಒಗೆಯುತ್ತಾರೆ. ಸಂಜೆ ಹೊತ್ತಿಗೆ ಅಗಸಗಿತ್ತಿ ಬಂದು ಬಚ್ಚಲು ಪೂಜೆ ಮಾಡುತ್ತಾಳೆ. ಈ ಪೂಜೆಗೆ ಜೋಳ ಅಥವಾ ಗೋಧಿ ಹಿಟ್ಟಿನಿಂದ ಎರಡು ದೀಪ ಮಾಡಿ ಹಚ್ಚುವರು. ಬಚ್ಚಲಕ್ಕೆ ಅರಷಿಣ, ಕುಂಕುಮದಿಂದ ಪೂಜೆಮಾಡಿ ಊದುಬತ್ತಿ ಹಚ್ಚಿ ಅಗಸಗಿತ್ತಿ ಆರತಿ ಮಾಡುವಳು. ಮಡಿವಾಳದವಳು ಬಂದು ಬಚ್ಚಲ ಪೂಜೆ ಮಾಡಿದರೆ ಮೈಲಿಗೆ ಹೋಯಿತು ಎಂಬುದು ಅವರ ಭಾವನೆಯಾಗಿರಬೇಕು. ಆಕೆ ಪೂಜೆ ಮಾಡಿ ಹೋಗುವಾಗ ಮನೆಯವರು ಸೇರಪಾವ (ಜಪಾವ) ಜೋಳ, ಸವ್ವಾರೂಪಾಯಿ (ಒಂದು ರೂಪಾಯಿ ಇಪ್ಪತ್ತೈದು ಪೈಸೆ) ಮತ್ತು ಒಂದು ಕೊಬ್ಬರಿ ಗುಂಡು ಕಾಣಿಕೆಯಾಗಿ ಕೊಡುವರು. ಅಗಸಗಿತ್ತಿ ಮುಂದೆ ಹೋಗುತ್ತಿದ್ದರೆ ಆಕೆ ನಡೆದ ದಾರಿಗೆ ನೀರು ಚಿಮುಕಿಸುತ್ತಾರೆ. ಹೀಗೆ ನೀರು ಚಿಮುಕಿಸುವುದರಿಂದ ಆಕೆಯೊಂದಿಗೆ ಮೈಲಿಗೆ ಹೋಗುತ್ತದೆ ಎಂದು ಹೇಳುವರು. ಚಿಕ್ಕವರು ಅಗಸಗಿತ್ತಿ ಎದುರಿಗೆ ಹೋಗುವುದಿಲ್ಲ. ವಯಸ್ಸಾದವರು ಮಾತ್ರ ಈ ಕಾರ್ಯ ಮಾಡುತ್ತಾರೆ. ಬಾಣಂತಿಯ ಕೋಣೆಯ ಬಾಗಿಲಿಗೆ ಬೇವಿನ ತಪ್ಪಲು ಕಟ್ಟುವರು. ಸ್ನಾನ ಮಾಡುವ ನೀರಿನಲ್ಲಿ ಬೇವಿನ ತಪ್ಪಲು ಹಾಕುವರು, ಎಣ್ಣೆಯಲ್ಲಿ ಬೇವಿನ ಎಸಳನ್ನು ಹಾಕಿ ಕಾಯಿಸಿ ಮೈಗೆ ಹಚ್ಚುವರು. ಇದರಿಂದ ಬಾಣಂತಿಗೆ ರೋಗಗಳು ತಗಲಬಾರದೆಂದು ಅವರ ಉದ್ದೇಶ. ಬೇವಿನಲ್ಲಿ ರೋಗ ವಿರೋಧಕ  ಶಕ್ತಿ ಇರುವುದು.

ನಂತರ, ರಾತ್ರಿ ಹೊತ್ತಿಗೆ ಶಟವಿ ಪೂಜೆ ಮಾಡುವರು. ಬಾವಿಯಿಂದ ತುಂಬಿದ ತಂಬಿಗೆ ತರುವಾಗ ಅಲ್ಲಿಂದ ಐದು ಹರಳು ತರುವರು. ಅವನ್ನೇ ಸಟವಿ ಲಿಂಗವೆಂದು ಕರೆಯುವರು. ಇವುಗಳನ್ನು ಎಲೆ ಅಥವಾ ಬಟ್ಟೆಯನ್ನು

ಬಾಣಂತಿ ಕೋಣೆಯಲ್ಲಿ ಹಾಸಿ ಅದರ ಮೇಲೆ ತಂಬಿಗೆ ಇಟ್ಟು ಅದರ ಮುಂದೆ ಬಾವಿಯಿಂದ ತಂದ ಐದು ಹರಳಿಟ್ಟು ಅರಷಿಣ, ಕುಂಕುಮದಿಂದ ಪೂಜೆ ಮಾಡುವರು. ಹಿಟ್ಟಿನಿಂದ ಮಾಡಿದ ೫ ಕುಳ್ಳಿಯಲ್ಲಿ ದೀಪ ಹಚ್ಚಿ ಮುಂದೆ ಇಡುವರು. ಕಾಚು, ಬೋಳು, ಹಿಪ್ಪಲಿ, ಮುಡಿ, ಅಂಟು, ದಾಚಿನ, ಬಜೆ, ಜಾಜಿಕಾಯಿ ರಸ, ಕರ್ಪೂರ ಇತ್ಯಾದಿಗಳೆಲ್ಲ ಬಾಣಂತಿಯ ಮುಂದೆ ಇಡುವರು. ಹಳೆಯ ಬಟ್ಟೆಯಿಂದ ತಯಾರಿಸಿದ ಕುಂಚಿ ಕುಲಾಯಿ ಖಲುಗಲ್ಲಿಗೆ ತೊಡಿಸಿದ  ನಂತರ ಕೂಸಿಗೆ ತೊಡಿಸುವರು. ಕಲ್ಲಿನಂತೆ ಮಗು ಗಟ್ಟಿಯಾಗಿರಲಿ ಎಂಬುದೇ ಅವರ ನಂಬಿಕೆ. ನಂತರ ಮಗುವಿಗೆ ತಾಯಿಯ ಕೈಯಲ್ಲಿ ಕೊಟ್ಟು ಶಟವಿಗೆ ನಮಸ್ಕರಿಸಿದ ನಂತರ ತಾಯಿ ಕೂಡ ನಮಸ್ಕರಿಸುವಳು. ಮಗು ಶಟವಿಯನ್ನು ನಮಸ್ಕರಿಸುವಾಗ ಮಗುವಿನ ನೋಟ ಓರೆಯಾಗಿದ್ದರೆ ಅದರ ಕಣ್ಣಿನ ನೋಟ ಓರೆಯಾಗುವುದೆಂದು ಬೇಗ ಹಿಂತೆಗೆದುಕೊಳ್ಳುವರು. ಶಟವಿಯ ನೈವಿದ್ಯ ಆಕಳಿಗೆ ಕೊಡುವರು.

ಐದನೆಯ ದಿವಸದ ಐದೇಸಿ ಮಾಡುವಾಗ ಪ್ರದೇಶಕ್ಕೆ ಅನುಗುಣವಾಗಿ ಅಡಿಗೆ ಭಿನ್ನವಿರಬಹುದು. ಆದರೆ ಬೀದರ ಜಿಲ್ಲೆಯ ಟೋಕ್ರೆ ಕೋಳಿಯವರು ಕಡಬು (ದಿವಡಿ), ಸಪ್ಪನ ಬೇಳೆ, ಕಿಚಡಿ (ಜೋಳದ ಅನ್ನ)ಯಂತಹ ಅಡುಗೆ ಮಾಡುವರು. ಬಾಣಂತಿಗೂ ಸಹ ಅದೇ ಅಡಿಗೆ ಊಟಕ್ಕೆ ಕೊಡುವರು.

ಶೆಟವಿ ಮುಂದಿಟ್ಟು ಪೂಜಿಸಿದ ಮೇಲಿನ ಕಾಚು, ಬೋಳು, ಅಂಟು ಮೊದಲಾದ ದಿನಸುಗಳು ತಲಾ ಮೂರು ದಿವಸ ತಿನ್ನಲು ಬಾಣಂತಿಗೆ ಕೊಡುವರು. ಅನಂತರ ಹನ್ನೆರಡು ಅಥವಾ ಇಪ್ಪತ್ತು ದಿವಸದಿಂದ ಬಾಣಂತಿಗೆ ಎಚ್ಚ ಕೊಡಲು ಪ್ರಾರಂಭಿಸುವರು. ಮೇಲಿನ ದಿನಸುಗಳೆಲ್ಲ ಕೊಡುವುದರಿಂದ ಬಾಣಂತಿಯ ಮೈ ಗಟ್ಟಿಯಾಗಿರುತ್ತದೆ. ಥಂಡಿಯಾಗುವುದಿಲ್ಲ. ಒಂದು ವೇಳೆ ಥಂಡಿಯಾದರೆ ಶೀತವಾತವಾಗಿ ಮೂರ್ಛೆರೋಗ ಬರುವ, ಕೀಲು ಹಿಡಿಯುವ ಸಂಭವವಿರುತ್ತದೆ. ಆದುದರಿಂದಲೇ ಬಾಣಂತಿಗೆ ೨೧ ದಿವಸ ಉಪ್ಪಿಲ್ಲದ ಅನ್ನ ಹಾಗೂ ತುಪ್ಪ ಊಟಕ್ಕೆ ಕೊಡುವರು. ಕುಡಿಯಲು ಚೆನ್ನಾಗಿ ಕಾಯಿಸಿದ  ನೀರು ಕೊಡುವರು. ಕಾಯಿಸಿದ ನೀರಿನಲ್ಲಿ ರೋಗಾಣಗಳು ಇರುವುದಿಲ್ಲವಾದ್ದರಿಂದ್ದಾ ನೀರು ಕುಡಿಯಲು ಕೊಟ್ಟರೆ ಯಾವ ರೋಗಗಳು ಬರುವುದಿಲ್ಲ.

ಐದೇಸಿಯ ದಿವಸ 'ಶಟವಿ' ಹಣೆ ಬಹರ ಬರೆಯುತ್ತಾಳೆಂದು ಸಾಮಾನ್ಯವಾಗಿ ಎಲ್ಲ ಜನಾಂಗದವರಲ್ಲಿ ನಂಬಿಕೆಯಿದೆ. ಆದುದರಿಂದ ಶಟವಿಯ ಮುಂದೆ ಹಚ್ಚಿದ ದೀಪವನ್ನು ಹೋಗದಂತೆ ನೋಡಿಕೊಳ್ಳುವರು. ಬಾಣಂತಿ ಇದ್ದ ಕೋಣೆಯ ಬಾಗಿಲ ಗೋಡೆಗೆ ಜವಾನರೆಂದು ಇದ್ದಲಿಯಿಂದ ಮನುಷ್ಯನ ಆಕಾರ ಬರೆಯುವರು. ಶಟವಿಯ ಕುರಿತು ಹಳೆಯ ಕಾಲದಿಂದಲೂ ಹಲವಾರು ನಂಬಿಕೆಗಳು ಜನಪದರಲ್ಲಿವೆ. ಈ ಕುರಿತು ವೃತ್ತಿಗಾಯಕರು ಹಾಡಿದ ಶಟವಿ ಬರಹದ ಲಾವಣಿಯೊಂದು ನಿಂಗಣ್ಣ ಸಣ್ಣಕ್ಕಿಯವರು ಹೀಗೆ ಸಂಪಾದಿಸಿರುವರು.

ಪೂರ್ವದ ಗೆರೆ ಪೂರ್ವದ ಹಿರೆರಿಗೆ ತಪ್ಪಿಲ್ಲ
ನರ ಮನುಷ್ಯರದು ಇನ್ನು ಪಾಡೇನಾ ||ಪಲ್ಲವಿ||
ಪರಮಾತ್ಮನ ವಿಧಿ ಬಂದು ಕಾಡಿಲ್ಲೇನ್ಯಾ
ಹರಿಶ್ಚಂದ್ರ ಕಾಯ್ದ ಸುಡುಗಾಡ ವನಾ
ಮೂರು ಲೋಕ ಬರೆಯುವಂತಹ ಸೆಟವಿ

ತನ್ನ ಮಗಳ ಅಂತ ತಿಳಿಲಿಲ್ಲೇನಾ
ಬರೆದ ಲಿಖಿತವನಾ
ಹರಿಹರ ಬ್ರಹ್ಮರದಾರಿರಿ ತಿಳಿದಿಲ್ಲ
ವಿದಿ ಬಂದ ಕಾಡಿತ ತಿಳಿಗೊಡವ (ನಿಂಗಣ್ಣ,ಸಣ್ಣಕ್ಕಿ:೧೯೯೩:೩೩).

ದೇವ ದೇವತೆಗಳಿಗೂ, ರಾಜ ಮಹಾರಾಜರಿಗೂ ಸಹ ಹಣೆಬರಹ ತಪ್ಪಿಲ್ಲ. ಹಣೆ ಬರೆಹದಂತೆ ನಮ್ಮ ಜೀವನ ಸಾಗುವುದೆಂದು ಟೋಕ್ರೆಕೋಳಿಗಳು ನಂಬುವರು.

ಶಟವಿ ಹಣೆ ಬರಹ ಮಗುವಿಗೆ ಚೆನ್ನಾಗಿ ಬರೆಯಲೆಂದು ಐದೇಶಿಯಂದು ಪೂಜೆ ಮಾಡಿ ನಮಸ್ಕಾರಿಸುತ್ತಾರೆ. ಆದರೆ ಇಂದಿನ ದಿನಗಳಲ್ಲಿ ಹತ್ತು ಹನ್ನೆರಡು ದಿವಸ ಮಗುವಿನ ಜನನದ ನಂತರವೂ ಆಸ್ಪತ್ರೆಯಲ್ಲಿ ಇರುವುದರಿಂದ ಐದು ದಿವಸದ ಐದೇಸಿ ಮಾಯವಾಗುತ್ತಲಿದೆ. ಕೆಲವರು ಆಸ್ಪತ್ರೆಯಿಂದ ಬಂದ ನಂತರವೂ ಇದನ್ನು ಆಚರಿಸುತ್ತಲಿದ್ದಾರೆ. ಇದರಿಂದ ಶಟವಿಯ ಪ್ರಭಾವ ಇವರ ಮೇಲೆ ಗಾಢವಾಗಿರುವುದು ವ್ಯಕ್ತವಾಗುವುದು.

ಮಗುವಿನ ಜನನದ ಏಳನೇ ದಿವಸಕ್ಕೆ ಮಗುವಿಗೆ ಸೂಜಿಯಿಂದ ಹೊಕ್ಕಳ ಸುತ್ತ ಐದು ಬರೆ ಹಾಕುವ ಸಂಪ್ರದಾಯವಿದೆ. ಇದರಿಂದ ಹೊಟ್ಟೆಬೇನೆ ಬರಲಾರದು ಎಂದು ತಿಳಿಯುವರು. ಪ್ರಸ್ತುತದಲ್ಲಿ ಆಸ್ಪತ್ರೆಗಳಿರುವುದರಿಂದ ಹೊಟ್ಟೆರೋಗ ಬಂದರೂ ಆಸ್ಪತ್ರೆಗಳಿಗೆ ಕರೆದುಕೊಂಡು ಹೋಗಿ ವಾಸಿಮಾಡಿಕೊಳ್ಳುವರು. ಹಿಂದಿನ ಕಾಲದ ಜನರು ಈ ರೋಗ ಬರದಂತೆ ಮುಂದಾಲೋಚನೆಯಿಂದ ನೋಡಿಕೊಳ್ಳುತ್ತಿದ್ದರು.

**೪.೩ ನಾಮಕರಣ :** ನಾಮಕರಣವೆಂದರೆ ಹೆಸರಿಡುವುದು. ಗಂಡು ಮಗುವಿನ ಜನನದ ಹನ್ನೆರಡು ದಿವಸಕ್ಕೆ, (ಬಾಲನ ತೊಟ್ಟಿಲು ಬಾರ ದಿವಸಕ್ಕೆ) ಹೆಣ್ಣಾಗಿದ್ದರೆ ೧೭ ದಿವಸಕ್ಕೆ ನಾಮಕರಣ ಮಾಡುವರು. ಒಬ್ಬ ವ್ಯಕ್ತಿಯನ್ನು ಗುರುತಿಸಬೇಕಾದರೆ ಆತನ ಸಂಕೇತವಾಗಿ ಒಂದು ಹೆಸರು ಇರಲೇಬೇಕು. ಐದೇಸಿಯ ನಂತರ ಮಗುವಿಗೆ ಹೆಸರಿಡುವ ಕಾರ್ಯವನ್ನು ನೆರವೇರಿಸುತ್ತಾರೆ.

ಚೊಚ್ಚಲ ಹೆರಿಗೆ ತವರು ಮನೆಯಲ್ಲಿ ಆಗುವುದರಿಂದ ಚೊಚ್ಚಲ ಮಗುವಿನ ನಾಮಕರಣ ತವರು ಮನೆಯಲ್ಲಿ ನಡೆಯುತ್ತದೆ. ಪ್ರಸ್ತುತದಲ್ಲಿ ಹನ್ನೆರಡು ದಿವಸಕ್ಕೆ ನಡೆಯುವ ನಾಮಕರಣ ಸವ್ವಾ ತಿಂಗಳಿಗೆ (೧ ತಿಂಗಳ ೮ ದಿವಸ) ಮಾಡುತ್ತಲಿದ್ದಾರೆ. ಅಂದು ಮಗುವಿನ ಅಜ್ಜಿ, ತಾತಾ, ಸೋದರತ್ತೆ ಮೊದಲಾದ ಬಂಧು ಬಳಗದವರು ಬರುವರು. ಅಜ್ಜಿಯ ಮಗುವಿಗೆ ದಿಟ್ಟಿ ಮಣಿ, ಹಾಲಗಡಗ, ಅಂಗಿ, ಕುಂಚಿ, ಕುಲಾಯಿ, ಎರಡು ಸೀರೆ, ರವಿಕೆ, ತರುವಳು.

ರಾತ್ರಿ ಏಳೆಂಟು ಗಂಟೆಗೆ ತೊಟ್ಟಿಲ ಕಾರ್ಯ ಆರಂಭಿಸುವರು. ಐದು ಸಣ್ಣ ಹೋಳಿಗೆಯ ನೈವಿದ್ಯ ಮಾಡಿ ಅದರ ಮೇಲೆ ಹಿಟ್ಟಿನಿಂದ ಮಾಡಿದ ಐದು ಕುಳ್ಳಿಯಲ್ಲಿ ದೀಪ ಹಟ್ಟಿ ತೊಟ್ಟಿಲ ಕೆಳಗೆ ಬಟ್ಟೆ ಹಾಸಿ ಅದರ ಮೇಲಿಡುವರು. ಅಲ್ಲದೆ ಒಂದು ತಂಬಿಗೆಯಲ್ಲಿ ನೀರು ತುಂಬಿ ಅದರ ಮೇಲೆ ನೈವಿದ್ಯವಿಟ್ಟು ಮೇಲೊಂದು ದೊಡ್ಡದೊಂದು ದೀಪ ಹಚ್ಚಿಡುವರು. ಅದಕ್ಕೆ 'ಕಮಯಿ ಕೊಡ' ವೆಂದು ಹೇಳುವರು. ತೊಟ್ಟಿಲ ಕೆಳಗೆ ಶಟವಿ

ಪೂಜೆ ಮಾಡಿ, ಅದರ ಮುಂದೆ ತಾಯಿ ಮಗುವಿನ ಬಟ್ಟೆ ಇಟ್ಟು ಪೂಜೆಮಾಡಿದ ನಂತರ ತಾಯಿ ಮತ್ತು ಮಗುವಿಗೆ ಉಡಿಸುತ್ತಾರೆ. ತಾಯಿಗೆ ಮಗುವನ್ನು ಕೊಟ್ಟು ಉಡಿಯಕ್ಕಿ ಹಾಕುವರು.

ತೊಟ್ಟಿಲಿಡುವ ಮುಂಚೆಯೇ ಜೋಳ ಹಾಗೂ ಕಡಲೆ ಕೂಡಿಸಿ ಕುದಿಸಿ ಗುಗ್ಗರಿ ತಯಾರಿಸುವರು. ತೊಟ್ಟಿಲಲ್ಲಿ ಎರಡು ವಿಳೆದೆಲೆ ಹಾಗೂ ಗುಗ್ಗರಿ ಐದು ಸ್ಥಳದಲ್ಲಿ ಇಟ್ಟಿರುತ್ತಾರೆ. ಇದಕ್ಕೆ ಬಾಗಿನ ಎಂದು ಕರೆಯುತ್ತಾರೆ. ತೊಟ್ಟಿಲು ಹಿಡಿಯುವ ಐದು ಜನ ಮುತ್ತೈದೆಯರಿಗೆ ತೊಟ್ಟಿಲಲ್ಲಿನ ಬಾಗಿನವನ್ನು ಕೊಟ್ಟು ಗಂಡನ ಹೆಸರು ಕೇಳಿಸಿಕೊಳ್ಳುವರು. ಮುತ್ತೈದೆಯಾಗಿದ್ದವರಲ್ಲಿ ಬಸುರೆ ಇದ್ದವರು, ಉಡಕಿ ಮದುವೆಯಾದವರು, ಬಂಜೆಯವರು ತೊಟ್ಟಿಲು ಹಿಡಿಯುವಂತಿಲ್ಲ. ಇಬ್ಬರು ಸೋದರತ್ತೆಯವರು ತೋಟ್ಟಿಲ ಆಕಡೆ ಈಕಡೆ ಎದುರುಬದುರಾಗಿ ನಿಂತು ಕೂಸನು ತೆಗೆದುಕೊಂಡು ತೊಕೊಯವ್ವ ಸಹದೇವ, ತಾಯವ್ವ, ಮಹಾದೇವ ಎನ್ನುತ್ತ ಹೀಗೆ ಐದು ಸಲ ಒಬ್ಬರ ಕೈಯಿಂದ ಇನ್ನೊಬ್ಬರು ತೆಗೆದುಕೊಂಡು ಕೂಸನ್ನು ಆಡಿಸಿ ತೊಟ್ಟಿಲಲ್ಲಿ ಮಲಗಿಸುತ್ತಾರೆ. ಬಾಗಿನವನ್ನು ತೆಗೆದುಕೊಂಡ ಮೇಲೆ ಮುತ್ತೈದಿಯರು ಐದು ಹಾಡುಗಳನ್ನು ಹೀಗೆ ಹಾಡುತ್ತಾರೆ.

ತೊಟ್ಟಿಲು ಹಾಡು

ಶಿಂದೀಗೀ ತಳದಲ್ಲಿ ಸಂಗಮ್ಮನ ತಳ
ಶಂಬೋ ಮಠದೇವ ಇಂದುದಯನಾಗೋ ಜೋ ಜೋ
ಬಂಗಾರ ತೊಟ್ಟಿಲ ಧೋರಿತಾಯಿ ಕುಂದಲ
ಸಿಂಗರದಾನ ಶ್ರೀ ಕೃಷ್ಣಗ ಛಂದಾಗಿ ತೂಗಿರಿ ಜೋ ಜೋ
ಕರೆದು ಬಂದೆವು ಓಣಿ ನೆರೆದು ಬಂದಿತು ಮಂದಿ
ಬಂದು ನಿಂತಾರವ್ವ ಕನ್ನಿ ಮುತ್ತೈದ್ಯಾರು ಜೋ ಜೋ
ಸಕ್ಕರಿ ಪಾಯಸ ಬಸಿದು ಬಟ್ಟಲು ತುಂಬಿ
ತುತ್ತಮಾಡಿ ಉಣಸಿದರ ಬಿಕಿ ಬಿಕ್ಕಿ ಅಳತಾನ ಜೋ ಜೋ
ಸಾದ ಸಿರಿಗಂಧ ತಯದು ಬಟ್ಟಲು ತುಂಬಿ
ತೀಡಿ ತೀಡಿ ಹಚ್ಚಿದರ ಕಾಡಿ ಕಾಡಿ ಅಳತಾನ ಜೋ ಜೋ
ಬಿಂದೂಲಿ ಇಡಸೀದ ಬಳಿಯಂಗಿ ತೊಡಸಿದ
ಆಡಿ ಬಾ ಕಂದಂದ್ರು ಕಾಡಿ ಕಾಡಿ ಅಳತಾನ ಜೋ ಜೋ
ನೀರಾಗ ನೆಳ್ ನೋಡಿ ಸೂರ್ಯ ಚಂದ್ರನ ಬೇಡಿ
ಅದು ತಂದು ಕೊಡುವಂತ ಜೋರ್‍ಯಾಡಿ ಅಳತಾನ ಜೆ

ಕಮಯ ಕೊಡದ ಹಾಡು

ರನ್ನದುಡುಗುಣಿ ಚಿನ್ನದ ಕೊಂಡಿ
ಹೊನ್ನಿನಾ ಡಾಬಾ ಇಟ್ಟಿದಳು
ಎಣಕಿನಿಲ್ಲದ ಮಾಣಿಕಸರ
ಎದಿಬಿದಿ ತಾನು ಹಾಕುವಳ

ಕಡಿಯ ಕಂಕಣ ಕಮಳದ ಮುಖಿಯ
ಹೊಳಿವ ಮುತ್ತಿನ ವಾಲಿಗಳ
ಮಂಗಳ ಜಯ ಮಂಗಳ ||೧||

ಕಸೂತಿ ಕುಬಸಾ ಕೈಯಲಿ ಕನ್ನಡಿ
ನೆರಳ ನೋಡಿ ಹಿಗ್ಗುವಳ
ಬಸವೇಸೂರನ ಎಡದಲಿ ಕುಂತು
ಹಾಸ್ಯಮಾಡಿ ತಾನಗುವಳ
ಕಡಿಯ ಕಂಕಣ ಕಮಲದ ಮುಖಿಯ
ಹೊಳಿವ ಮುತ್ತಿನ ವಾಲಿಗಳ
ಮಂಗಳ ಜಯ ಮಂಗಳ ||೨||

ಮುಗಿನಾಗ ಹೊಳೆವ ಮುತ್ತಿನ ಮೂಗುತಿ
ಮಿಗಿಲಾದ ಆಭರಣಿಟ್ಟಿದಳ
ಅಚ್ಚರಂಗದ ಶಾಲನುಟ್ಟು
ಅನಂತ ಕೋಟಿ ರೂಪವಳು
ಕಡಿಯ ಕಂಕಣ ಕಮಲದ ಮುಖಿಯ
ಹೊಳಿವ ಮುತ್ತಿನ ವಾಲಿಗಳ
ಮಂಗಳ ಜಯ ಮಂಗಳ ||೩||

ದುಂಡುಗ್ಗೆಯವಳು ದಿಮಿದಿಮಿಗಾರಳು
ದುಂಡ ಮುತ್ತಿನ ವಾರಳ
ಹಿಂಡ ಗೆಳದ್ಯಾರು ಕಂಡುಸಿ ಕರದರ
ಹೆಣೂಲ ಭಂಗಾರರ ಹಾಕುವಳ
ಕಡಿಯ ಕಂಕಣ ಕಮಳ ಮುಖಿಯ
ಹೊಳಿವ ಮುತ್ತಿನ ವಾಲಿಗಳ
ಮಂಗಳ ಜಯ ಮಂಗಳ ||೪||

ಈ ಸಂದರ್ಭದಲ್ಲಿ ಒಟ್ಟು ಐದು ಹಾಡುಗಳನ್ನು ಮುತ್ತೈದೆಯರಿಂದ ಹಾಡಲ್ಪಡುತ್ತವೆ. ಅದರಲ್ಲಿ ಕಮಯಿ ಕೊಡದ ಹಾಡೂ ಒಂದಿರುತ್ತದೆ. ತೊಟ್ಟಿಲ ಹಿಡಿದ ಐದೂ ಜನ ಮುತ್ತೈದೆಯರು ತೊಟ್ಟಿಲ ಕೆಳಗೆ ಹಚ್ಚಿದ ಕಮಯಿಕೊಡ ತೆಗೆದುಕೊಂಡು ಬಾಣಂತಿಯ ಎದುರಿಗೆ ಹಿಡಿಯುವರು. ಬಾಣಂತಿಯು ತಲೆಯ ಮೇಲೆ ಅಷ್ಟ ಸೆರಗ ಹಾಕಿಕೊಂಡು ತಲೆಗೆ ಕೈಹಿಡಿದು ಕೂಡುವಳು. ಕಮಯಿ ಕೊಡದ ಹಾಡು ಹೇಳಿದ ನಂತರ "ಹಾಲಕೊಡ ತುಪ್ಪದ ಕೊಡ ನಮ್ಮಣ್ಣಾ ಮಾಡಿಸಿದ ಕಮಯಿ ಕೊಡ ಹಳ್ಳಗದ ವಜ್ಜಿಯದ" ಎಂದು ಕೇಳಿದಾಗ ಆಕೆ ಹಳ್ಳಗೆಂದು ಹೇಳಬೇಕು. ಅನಂತರ ಬಾಣಂತಿಯ ಗಂಡನ ಹೆಸರನ್ನು ಮುತ್ತೈದೆಯರು ಕೇಳುವರು ಅಲ್ಲಿಗೆ ಕಮಯಿ ಕೊಡದ ಕೆಲಸ ಮುಗಿಯಿತು.

ಮಗು ಹುಟ್ಟಿದ ಹನ್ನೆರಡನೆಯ ದಿವಸಕ್ಕೆ ಮಗುವನ್ನು ತೊಟ್ಟಿಲಲ್ಲಿ ಹಾಕಿ ಹೆಸರಿಡುತ್ತಾರೆ. ಅಂಥ ಸಂದರ್ಭದಲ್ಲಿ ಮೇಲಿನ ತೊಟ್ಟಿಲ ಹಾಡನ್ನು ಹಾಡಲಾಗುತ್ತದೆಡಿದರಲ್ಲಿ ತನ್ನ ಮಗುವನ್ನು ಶ್ರೀಕೃಷ್ಣನಿಗೆ

ಹೋಲಿಸಲಾಗಿದೆ. ಆತನ ಊಟದ ಬಗೆ, ಶೃಂಗಾರದಿಂದ ಹಚ್ಚಿದ ಕಾಡಿಗೆ, ವಸ್ತ್ರ ಆಭರಣದ ಬಗೆಯನ್ನು ವರ್ಣಿಸಲಾಗಿದೆ. ಮಗು ಸೂರ್ಯ ಚಂದ್ರನ ನೆರಳು ನೀರಿನಲ್ಲಿ ನೋಡಿ ಅದನ್ನು ತಂದು ಕೊಡಬೇಕೆಂದು ಹಟ ಮಾಡಿ ಅಳುವ ಪರಿಯನ್ನು ಬಣ್ಣಿಸಲಾಗಿದೆ.

ಕಮಯದ ಕೊಡ ಎಂಬೀ ಎರಡನೆಯ ಹಾಡಿನಲ್ಲಿ ವಸ್ತ್ರಾಭರಣಗಳ ವರ್ಣನೆಯಿದೆ. ಆಕೆ ಡಾಬು ಮತ್ತು ಮಾಣಿಕ್ಯದ ಸರ ಎಣಿಕೆಯಿಲ್ಲದಷ್ಟು ಧರಿಸಿದ, ಕೈಯಿಂದ ಹೆಣಿಕೆ ಮಾಡಿದ ಕುಬಸಾ ತೊಟ್ಟು ಕನ್ನಡಿ ಹಿಡಿದು ತನ್ನ ನೆರಳನ್ನು ನೋಡಿ ಸಂತೋಷ ಪಡುವ, ಆಕೆಯ ಗಂಡನನ್ನು ಬಸವೇಶ್ವರನಿಗೆ ಹೋಲಿಸುವ, ಆತನ ಎಡದಲ್ಲಿ ಕುಳಿತು ಹಾಸ್ಯಮಾಡಿ ಆಕೆ ನಗುವ ಮತ್ತು ಮೂಗಿನಲ್ಲಿ ಮೂಗುತ್ತಿ ಇನ್ನಿತರ ಆಭರಣಗಳನ್ನು ಇಟ್ಟುಕೊಂಡು ಶಾಲನ್ನು ಹೊದ್ದುಕೊಂಡು ಕಿವಿಯಲ್ಲಿ ಮುತ್ತಿನ ಓಲೆಯನ್ನು ಇಟ್ಟು ಸೌಂದರ್ಯ ರೂಪದಿಂದ ಕೂಡಿದ ಪರಿ ಇಲ್ಲಿ ವರ್ಣಿಸಲಾಗಿದೆ.



ಐದು ಹಾಡುಗಳನ್ನು ಹಾಡಿದ ನಂತರ ಮಗುವಿನ ಸೋದರತ್ತೆ ಹೆಸರಿಡುತ್ತಾಳೆ. ಮಗುವಿಗೆ ಹೆಸರಿಡುವುದಕ್ಕೆ ಸೋದರತ್ತೆಯರಿಗೆ ಮೊದಲ ಆದ್ಯತೆ ಕೊಡುತ್ತಾರೆ. ಅವಳು ಮೊದಲಿಗೆ ದೇವರ ಹೆಸರಗಳನ್ನು, ಸತ್ತ ಹಿರಿಯರ ಹೆಸರನ್ನು ಇಟ್ಟು ಅನಂತರ ತಮಗೆ ಬೇಕಾದ ಹೆಸರಿಡಬಹುದು. ಟೋಕ್ರೆ ಕೋಳಿ ಸಮುದಾಯದವರು ಮಕ್ಕಳಿಗೆ ಹೆಸರಿಡಬೇಕಾದರೆ ದೇವರ ಹೆಸರನ್ನೇ ಮೊದಲು ಇಡುವರು. ಉದಾಹರಣೆಗೆ ಎಲ್ಲಪ್ಪ-ಎಲ್ಲಮ್ಮ, ಗಂಗಪ್ಪ-ಗಂಗಮ್ಮ, ಪೋಚಪ್ಪ-ಪೋಚಮ್ಮ, ರಾಮ-ರಾಮವ್ವ, ನರಸಪ್ಪ-ನರಸವ್ವ ಇತ್ಯಾದಿ. ಪ್ರಕೃತಿಯನ್ನು ಪ್ರತಿನಿಧಿಸುವ ಗಾಳೆಪ್ಪ-ಗಾಳೆಮ್ಮ, ಧೂಳಪ್ಪ-ಧೂಳವ್ವ, ಗುಂಡಮ್ಮ-ಗುಂಡಪ್ಪ, ಬಂಡೆಮ್ಮ-ಬಂಡೆಪ್ಪ, ನೀಲಮ್ಮ-ನೀಲಪ್ಪ, ತಿಪ್ಪಣ್ಣ-ತಿಪ್ಪಮ್ಮ, ಜಗಪ್ಪ-ಜಗಮ್ಮ, ಗಿರೆಪ್ಪ-ಗಿರೆಮ್ಮ, ದುರ್ಗಪ್ಪ-ದುರ್ಗಮ್ಮ ಇತ್ಯಾದಿ; ಪ್ರಾಣಿ ಪಕ್ಷಿಗಳನ್ನು ಪ್ರತಿನಿಧಿಸುವ ಬಸಪ್ಪ-ಬಸಮ್ಮ, ಹುಲೆಪ್ಪ-ಹುಲೆಮ್ಮ, ಇತ್ಯಾದಿ; ಇತ್ತೀಚೆಗೆ ಕೆಲವು ನವೀನ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುತ್ತಿದ್ದಾರೆ. ಪಲ್ಲವಿ, ರಾಹುಲ, ಗೌತಮ್, ವಿರೇಶ, ಭದ್ರೇಶ, ಸುರೇಖಾ, ಸೌಂದರ್ಯ ಇತ್ಯಾದಿಗಳು.



ಕೆಲವು ಸಂದರ್ಭಗಳಲ್ಲಿ ಮೇಲಿನ ಹೆಸರುಗಳು ಮಕ್ಕಳಿಗೆ ಇಟ್ಟರು ಸಹ ಯಾವುದೋ ಕಾಯಿಲೆ ಬಂದು ನರಳುತ್ತಿದ್ದರೆ ತಮ್ಮ ಕುಲದೇವರಿಗೆ ಹಾಗೂ ಯಾವ ದೇವರಿಗೆ ಹರಕೆಹೊತ್ತು ಕಡಿಮೆಯಾಗಲೆಂದು ಬೇಡಿಕೊಳ್ಳುವರೋ, ಮಗುವಿಗೆ ಗುಣವಾದ ಮೇಲೆ ದೇವರಿಗೆ ಹರಕೆ ಮುಟ್ಟಿಸಿ ಆ ದೇವರ ಹೆಸರಿಟ್ಟು ಕರೆಯುತ್ತಾರೆ. ಕೆಲವರು ಆ ದೇವರಿಗೆ ಜವಳ (ಕೂದಲು) ಕೊಡುವರು. ಜವಳ ಕೊಡುವುದರಿಂದ ದೇವರಿಗೆ ಸಂತೃಪ್ತಿಯಾಗುತ್ತದೆ ಎಂಬ ನಂಬಿಕೆ ಟೋಕ್ರೆ ಕೋಳಿಯವರಲ್ಲಿದೆ. ತೊಟ್ಟಿಲ ಹಿಡಿದ ಮುತ್ತೈದೆಯರು ಮಗುವಿಗೆ ಹೆಸರಿಡುತಾ ಕುರ್ರೆ ಎಂದು ಮಗುವಿನ ಕಿವಿಯಲ್ಲಿ ಕೂಗುತ್ತಾರೆ. ಹೆಸರಿಟ್ಟಂತಹ ಸೋದರತ್ತೆಯ ಬೆನ್ನ ಮೇಲೆ ಕಪ್ಪೆರೊಟ್ಟಿಯನ್ನು ಮುತ್ತೈದೆಯರು ಬಡಿಯುತ್ತಾರೆ. ಸಣ್ಣಾಕಾರದ ಹೋಳಿಗೆಗೆ ಕಪ್ಪೆರೊಟ್ಟಿ ಎಂದು ಕರೆಯುವರು. ಆಕೆ ಕೈ ಹಿಂದೆ ಮಾಡಿ ಕಪ್ಪೆರೊಟ್ಟಿಯನ್ನು ಎಡಗೈಯಿಂದ ತೆಗೆದುಕೊಂಡು ಸೂರ ಕೆಳಗೆ ಹೋಗಿ ಊಟ ಮಾಡುವಳು. ಇದು ಇವರ ಕಳ್ಳುಬಳ್ಳಿಯ ಸಂಬಂಧದ ಮುಂದುವರಿಕೆಯ ಪ್ರಕ್ರಿಯೆಯಾಗಿರುವುದು. ತೊಟ್ಟಿಲಕ್ಕೆ ಬರುವಾಗ ಜನರು ಬಟ್ಟಲಲ್ಲಿ ಗೋಧಿ, ಅಕ್ಕಿ, ಜೋಳ ಏನಾದರೂ ತರುವರು. ಆ ಬಟ್ಟಲಲ್ಲಿ ಗುಗ್ಗರಿ ಹಾಕಿ ನಾಮಕರಣದ ಮನೆಯವರು ಕೊಡುವರು.

ತೊಟ್ಟಿಲ ಕಾರ್ಯಕ್ಕೆ ಬರುವವರು ಮಗುವಿಗೆ ಕಾಣಿಕೆಯಾಗಿ ಬಂಗಾರದ ಉಂಗುರ, ರೂಪಾಯಿ, ಬಟ್ಟೆ, ಉಡುಗೊರೆಗಳನ್ನು ಕೊಡುವುದರೊಂದಿಗೆ ನಾಮಕರಣದ ಮಗುವಿನ ತಾಯಿಗೆ ಎರಡು ಕುಪ್ಪಸ ತರುವ ವಾಡಿಕೆಯಿದೆ. ತೊಟ್ಟಿಲ ದಿನಸ ಊಟಕ್ಕಾಗಿ ಹೋಳಿಗೆ, ಹುಗ್ಗಿ, ಲಡ್ಡು, ಅನ್ನ, ಚಪಾತಿ,ಪೂರಿ ಇವುಗಳಲ್ಲಿ ಯಾವುದಾದರೂ ಮಾಡಿ, ಸಂಬಂಧಿಕರಿಗೆ ನೆರೆಹೊರೆಯವರಿಗೆ ಊಟಕ್ಕೆ ಬರಹೇಳುವರು. ಅವರ ಆರ್ಥಿಕ ಸ್ಥಿತಿಗತಿಗಳಿಗೆ ಅನುಗುಣವಾಗಿ ನಾಮಕರಣ ಕಾರ್ಯ ನೆರವೇರಿಸುವರು.

**೪.೪ ತಣ್ಣೀರು ಮುಟ್ಟುವುದು :** ಬಾಣಂತಿಗೆ ತಣ್ಣೀರು ಮುಟ್ಟಿಸುವ ಆಚರಣೆಯನ್ನು ಮಗುವಿನ ಜನನದ ಸವ್ವಾ ತಿಂಗಳಿನಿಂದ ಮೂರು ತಿಂಗಳದ ಅವಧಿಯಲ್ಲಿ ನೆರವೇರಿಸುವರು. ಈ ಆಚರಣೆಯ ನಂತರ ಬಾಣಂತಿಯು ಮನೆಹೊಲದ ಕೆಲಸ ಮಾಡಬಹುದಾಗಿದೆ. ಈ ಆಚರಣೆ ಹೀಗೆ ಮಾಡುವರು. ನೈವಿದ್ಯಕ್ಕೆ ಶಾವಿಗೆ ಅನ್ನ ಮಾಡಿ ಅದರ ಮೇಲೆ ಹಿಟ್ಟಿನಿಂದ ಮಾಡಿದ ಎರಡು ದೀಪ ಹಚ್ಚುವರು. ಒಂದು ತಂಬಿಗೆ ಬಾವಿ ಅಥವಾ ಹಳ್ಳಕ್ಕೆ ತೆಗೆದುಕೊಂಡು ಹೋಗಿ, ನೀರು ಸಂಗ್ರಹಿಸಿ ಕೈ ಕಾಲು ಮುಖ ತೊಳೆದುಕೊಂಡು ತಂಬಿಗೆ ತುಂಬಿಕೊಳ್ಳುವರು. ಬಾವಿ ಅಥವಾ ಹಳ್ಳಕ್ಕೆ ಅರಷಿಣ ಕುಂಕುಮದಿಂದ ಪೂಜೆ ಮಾಡಿ, ಹೂ ಏರಿಸಿ, ಊದುಬತ್ತಿ ಹಚ್ಚಿ ನೈವಿದ್ಯ ತೋರಿಸಿ ನಮಸ್ಕರಿಸಿ ಕಡಲೆಬೇಳೆ, ಬೆಲ್ಲ ದೀಪ ಇಟ್ಟು, ಕಡಲೆಬೇಳೆ, ಬೆಲ್ಲ ಬಂದವರಿಗೆಲ್ಲ ಕೊಡುವರು.

**೪.೫ ಕಿವಿ ಚುಚ್ಚುವುದು :** ಮಗು ಜನಿಸಿದ ಮೂರು ತಿಂಗಳ ಒಳಗಾಗಿ ಒಳ್ಳೆಯ ವಾರ ಅಂದರೆ ಮಂಗಳವಾರ ಅಥವಾ ಶುಕ್ರವಾರ ನೋಡಿ ಕಿವಿ ಚುಚ್ಚುವರು. ಅಂದು ಕಿವಿ ಚುಚ್ಚಬೇಕಾದರೆ ಅಕ್ಕಸಾಲಿಗನಿಗೆ ಕಿವಿಚುಚ್ಚಲು ಬರಲು ಹೇಳುವರು. ಆತನು ತಾಮ್ರದ ಕಡ್ಡಿಯಿಂದ ಕಿವಿ ಚುಚ್ಚುವನು. ಕಿವಿ ಚುಚ್ಚಿದ ಅಕ್ಕಸಾಲಿಗನಿಗೆ ಕಾಣಿಕೆಯಾಗಿ ಕೊಬ್ಬರಿ ಗುಂಡು, ಬೇಳೆ, ಬೆಲ್ಲ, ಅಕ್ಕಿ, ಗೋಧಿಹಿಟ್ಟನ್ನು ಕಾಣಿಕೆಯಾಗಿ ಕೊಡುತ್ತಾರೆ. ಇದಕ್ಕೆ ಟೋಕ್ರೆಕೋಳಿಗಳು ಸೀದಾ ಎಂದು ಕರೆಯುತ್ತಾರೆ. ಆದರೆ ನಗರಗಳಲಿ ಅಕ್ಕಸಾಲಿಗನ ಅಂಗಡಿಗೆ ಹೋಗಿ ಕಿವಿ ಚುಚ್ಚಿಸಿ ೫ ಅಥವಾ ೧೧ ರೂಪಾಯಿ ಕೊಟ್ಟು ಬರುತ್ತಿರುವುದು ಕಂಡು ಬರುತ್ತಲಿದೆ. ಕಿವಿ ಚುಚ್ಚಿದನ್ನು ನೋವಾಗಬಾರದೆಂದು ಅಕ್ಕಸಲಿಗನು ತನ್ನ ಕುಂಡದಲ್ಲಿನ ಭಸ್ಮ(ಬೂದಿ)ವನ್ನು ಹಚ್ಚುವನು. ಇಲ್ಲವೆ ಕುಂಕುಮದಲ್ಲಿ ಎಣ್ಣೆ ಕಲಿಸಿ ಹಚ್ಚುವನು. ಇದರಿಂದ ನೋವು ಬೇಗ ವಾಸಿಯಾಗುತ್ತದೆನ್ನುವರು.

**೪.೬ ತಂದೆಯ ಮನೆಯಲ್ಲಿ ನಾಮಕರಣ :** ಮೊದಲನೆಯ ಮಗುವಿಗೆ ತಾಯಿಯ ತವರಿನಲ್ಲಿ ಹಾಗೂ ಮಗುವಿನ ತಂದೆಯ ಮನೆಯಲ್ಲಿ ಹೀಗೆ ಎರಡು ಸಲ ನಾಮಕರಣ ಮಾಡುವರು. ತವರು ಮನೆಯಿಂದ ಮಗುವನ್ನು ಕರೆದುಕೊಂಡು ಹೋಗುವಾಗ ಬೆಳ್ಳಿ ಕಡಗ, ಬಂಗಾರದ ಮುರು ಲೋಲಕ, ತೊಟ್ಟಿಲು, ಬಟ್ಟಲ, ಮಿಳ್ಳಿ,ಲೋಟ ಇತ್ಯಾದಿಗಳನ್ನು ತವರಿನವರು ಮಗುವಿಗಾಗಿ ಕೊಡುತ್ತಾರೆ. ಗಂಡನ ಮನೆಯವರು ತಂದ ಸೀರೆಯನ್ನು ಅಂದು ಮಗುವಿನ ತಾಯಿಗೆ ಉಡಿಸುತ್ತಾರೆ. ತೊಟ್ಟಿಲು ಸೋದರ ಮಾವನೇ ತೆಗೆದುಕೊಂಡು ಹೋಗಬೇಕೆಂಬ ಸಂಪ್ರದಾಯವಿದೆ. ಈ ತೊಟ್ಟಿಲನ್ನು ಎಲ್ಲಿಯೂ ಕೆಳಗಿಡದೆ ನೇರವಾಗಿ ಮಾಳಿಗೆಗೆ ಕಟ್ಟುತ್ತಿದ್ದರು. ಇದು ಸುಚಿತ್ವವನ್ನು ಧ್ವನಿಸುವುದು. ಇಂದು ಬಸ್ಸುಗಳಲ್ಲಿ ಪ್ರಯಾಣ ಬೆಳೆಸುವುದರಿಂದ ಈ ಸಂಪ್ರದಾಯ ಕೈತಪ್ಪಿದೆ. ಸೋದರಮಾವನ ಜೊತೆಗೆ ಮತ್ತೇ ಕೆಲವು ಬಂಧುಬಳಗದವರು ಹೋಗುವರು. ಮಗುವನ್ನು ಕರೆದುಕೊಂಡು ನೇರವಾಗಿ ಮನೆಗೆ ಹೋಗುವಂತಿಲ್ಲ. ಇವರು ಹಣಮಂತನ ಮಂದಿರದಲ್ಲಿ ಕುಳಿತು

ಮಗವಿನ ತಂದೆಯ ಮನೆಯವರನ್ನು ಬರಹೇಳಿ ಕಳಿಸುವರು. ಮಗುವಿನ ತಂದೆಯ ಮನೆಯವರು ತೆಂಗು, ಎಣ್ಣೆಬತ್ತಿ, ಅಗರ ಬತ್ತಿ ತಂದು ಕಾಯಿ ದೇವರಿಗೆ ಒಡೆದು ನಮಸ್ಕರಿಸಿ ಎಲ್ಲರನ್ನು ಮನೆಗೆ ಕರೆದುಕೊಂಡು ಹೋಗುವರು.

ಅನಂತರ ತವರಿನಲ್ಲಿ ತೊಟ್ಟಿಲ ಕಾರ್ಯ ಮಾಡಿದಂತೆ ಮಗುವಿನ ತಂದೆಯ ಮನೆಯಲ್ಲಿಯೂ ಈ ಕಾರ್ಯ ಜರುಗುವುದು. ತವರಿನಿಂದ ತೊಟ್ಟಿಲ ತೆಗೆದು ಕೊಂಡು ಹೋದ ಸೋದರಮಾವನಿಗೆ ಹೊದಿಕೆ (ಬಟ್ಟೆ) ಮಾಡುತ್ತಾರೆ. ಬಂದಂಥ ಜನರಿಗೆ ಸೀರೆಯಾಗಲಿ, ರವಿಕೆಯಾಗಲಿ ಮಾಡಿ ಕಳಿಸುತ್ತಾರೆ. ಚೊಚ್ಚಿಲ ಮಕ್ಕಳಂತೆ ನಂತರದ ಮಕ್ಕಳಲ್ಲಿ ಪ್ರೀತಿಯ ಅಬ್ಬರ ಅಷ್ಟಾಗಿ ಕಂಡು ಬರುವುದಿಲ್ಲ. ಚೊಚ್ಚಿಲ ಹೆರಿಗೆ ಮಾತ್ರ ತವರಿನಲ್ಲಿ ಜರುಗುವುದು. ಉಳಿದ ಮಕ್ಕಳ ನಾಮಕರಣ ಮಗುವಿನ ತಂದೆಯ ಮನೆಯಲ್ಲಿ ಆಗುವಂತೆ ಸಂಪ್ರದಾಯ ರೂಢಿಸಿಕೊಂಡಿದ್ದು ಕಂಡುಬರುತ್ತದೆ.

**೪.೭ ಜವಳ (ಕೂದಲು) ಕಾರ್ಯ :** ಮಗು ಜನಿಸಿದಾಗಿನಿಂದ ಕಾಯ್ದಿಟ್ಟ ಕೂದಲನ್ನು ತೆಗೆಯುವುದಕ್ಕೆ ಜವಳ ತೆಗೆಯುವುದೆಂದು ಕರೆಯುವರು. ಮಗು ಜನಿಸಿದ ಒಂಭತ್ತು ಅಥವಾ ಸವ್ವ ವರ್ಷ(ಒಂದು ಕಾಲು ವರ್ಷ)ಕ್ಕೆ ಮಗುವಿನ ಜವಳವನ್ನು ಹರಕೆ ಹೊತ್ತ ದೇವರಿಗೆ ಕೊಡವರು. ಮಗುವಿನ ತಂದೆ, ತಾಯಿ, ಅಜ್ಜ, ಅಜ್ಜಿ, ಸೋದರಮಾವ, ಸೋದರತ್ತೆ ಇತರ ಸಂಬಂಧಿಕರು ಬರುತ್ತಾರೆ. ತಾಯಿಯ ತವರಿನವರು ಗಂಡನ ಮನೆಯ ಎಲ್ಲರಿಗೂ ಹೊದಿಕೆ ತರುತ್ತಾರೆ.

ಮೊದಲು ಜವಳ ತೆಗೆಯಬೇಕಾದರೆ ನಾಯಿದ(ಕ್ಷೌರಿಕ)ನಿಗೆ ಸೇರ ಪಾವ ಜೋಳ, ಒಂದು ಕುಪ್ಪಸ, ಸವ್ವ ರೂಪಾಯಿ ಕೊಡುವರು. ಒಂದು ಜಮಖಾನೆ ಹಾಸಿ ಅದರ ಮೇಲೆ ಜೋಳವನ್ನು ಹಾಕಿ ಕುಪ್ಪಸ ಮುಚ್ಚುವರು. ಅದರ ಮೇಲೆ ಮಗುವಿಗೆ ಕೂಡಿಸಿ ಅದರ ಕೈಯಲ್ಲಿ ಒಂದು ಗುಂಡು ಕೊಬ್ಬರಿ ಕೊಡುವರು. ಕ್ಷೌರಿಕನು ಕತ್ತರಿಗೆ ಪೂಜೆ ಮಾಡಿ ಸೋದರಮಾವನಿಗೆ ಕೊಡುವನು. ಆಗ ಸೋದರಮಾವನು ತನ್ನ ಕೈಯಲ್ಲಿ ಬಂಗಾರ ಮತ್ತು ವಿಳೆದೆಲೆ ಹಿಡಿದು ಮಗುವಿನ ತಲೆಯ ಕೂದಲನ್ನು ಐದು ಸಲ ಕತ್ತರಿಸವನು. ಅನಂತರ ನಾಯಿದನು ಆ ಮಗುವಿನ ತಲೆಯ ಕೂದಲನ್ನು ಸಂಪೂರ್ಣವಾಗಿ ಕತ್ತರಿಸದೆ ತಾಳಿಗೆ (ತಲೆಯ ಮೇಲಿನ ಭಾಗ) ಮೇಲೆ ಏರಿಕೆಯಿಂದ ಇಳಿಕೆಯ ರೂಪದಲ್ಲಿ ಐದು ಮೆಟ್ಟಿಲು ಮಾಡಿ ಕತ್ತರಿಸುವನು. ಕತ್ತರಿಸಿದ ಕೂದಲನ್ನು ಮಗುವಿನ ತಾಯಿಯ ಉಡಿಯಲ್ಲಿ ಕೊಟ್ಟು ನೀರಿನಲ್ಲಿ ಬಿಡುವರು ಅಥವಾ ದೇವಾಲಯದಲ್ಲಿದ್ದ ಗಿಡಕ್ಕೆ ಕಟ್ಟುವರು. ಮಗುವಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆ ತೊಡಿಸುವರು. ಮಗುವಿನ ತಂದೆ, ತಾಯಿ, ಅಜ್ಜ, ಅಜ್ಜಿಗೆ ಹೊದಿಕೆ ಮಾಡುವರು. ಜವಳ ತೆಗೆದ ಸೋದರಮಾವನಿಗೆ ಹೊದಿಕೆ ಮಾಡುವರು. ನಾಯಿದನು ಕೂಸಿನ ಮೈಮೇಲಿನ ಹಳೆಯ ಬಟ್ಟೆ, ಜೋಳ, ಕುಪ್ಪಸ, ಕೊಬ್ಬರಿ ಗುಂಡು ಇತ್ಯಾದಿಗಳನ್ನು ಕಾಣಿಕೆಯಾಗಿ ತೆಗೆದುಕೊಳ್ಳುವನು.

**೪.೮ ಶಾಲು ಅಥವಾ ಕಿರುಗುಣಿ ಕಾರ್ಯ :** ಮಕ್ಕಳು ಒಂಭತ್ತು ಇಲ್ಲವೆ ಹನ್ನೊಂದು ವರ್ಷಗಳಿನವರಾದಾಗ ಅವರಿಗೆ ಶಾಲು ಅಥವಾ ಕಿರುಗುಣಿ ಉಡಿಸುವ ಕಾರ್ಯ ಮಾಡುವರು. ಬಂಧು ಬಾಂಧವರಿಗೆ ಬರಲು ಹೇಳಿ ಬಂದವರಿಗೆಲ್ಲ ಸಿಹಿ ಊಟ ಮಾಡಿಸುತ್ತಾರೆ. ಸಾಯಂಕಾಲ ಹುಡಗನಿದ್ದರೆ ಹೊಸ

ಬಟ್ಟೆ ತೊಡಿಸಿ ಶಾಲು ಹೊದಿಸುವರು. ಹುಡುಗಿಯಿದ್ದರೆ ಕಿರುಗುಣಿ (ಸಣ್ಣ ಸೀರೆ) ಉಡಿಸುವರು. ಕೊರಳಲ್ಲಿ ಹೂ ಮಾಲೆ ಹಾಕಿ ಹಲಗೆ ವಾದನ ಮಾಡಿಸುವರು. ಮಕ್ಕಳ ತಂದೆ ತಾಯಿಗೂ ಬಟ್ಟೆ ಮಾಡುವರು.

ನಂತರ ಆರತಿ ಬಾಜೆ(ಮಂಗಳ ವಾದ್ಯ)ಯೊಂದಿಗೆ ಹನುಮಾನ ದೇವರ ಮಂದಿರಕ್ಕೆ ಹೋಗುತ್ತಾರೆ. ಅಲ್ಲಿ ಮಕ್ಕಳ ಕೈಯಿಂದ ಘಸಘಸಿ ಬೆಲ್ಲ ದೇವರ ಮುಂದಿಟ್ಟು ನಮಸ್ಕರಿಸುತ್ತಾರೆ. ಅನಂತರ ಊರಲ್ಲಿನ ಮಠದವರ ಮನೆಗೆ, ಮಠಪತಿಯವರ ಮನೆಗೆ ಹೋಗಿ ಕೊಬ್ಬರಿ ಗುಂಡಿನಲ್ಲಿ ಘಸಘಸಿ ಬೆಲ್ಲ ಹಾಕಿ ಸ್ವಾಮಿಗೆ ಕೊಟ್ಟು ಮಕ್ಕಳಿಗೆ ನಮಸ್ಕರಿಸಲು ಹೇಳುವರು. ಆ ಮೇಲೆ ತಮಗೆ ಬೇಕಾದ ಜನರ ಮನೆಗೆ ಅದೇ ರೀತಿ ಹೋಗಿ ಘಸಘಸಿ ಬೆಲ್ಲ ಹಂಚುತ್ತಾರೆ. ಮಕ್ಕಳಿಗೆ ಬಂಧು ಬಾಂಧವರೆಲ್ಲ ಕಾಣಿಕೆಯಾಗಿ ಹಣ ಅಥವಾ ಉಡುಗೋರೆಗಳನ್ನು ಕೊಡುತ್ತಾರೆ. ಗಂಡು ಮಗುವಿದ್ದರೆ ಮದುವೆಯಾಗುವವರೆಗೆ ಯಾವ ಕಾರ್ಯಗಳು ಮಾಡುವುದಿಲ್ಲ. ಹೆಣ್ಣಿದ್ದರೆ ಕೆಲವು ಸಂಸ್ಕಾರಗಳಿವೆ.

**೪.೯ ಋತುಮತಿ ಅಥವಾ ದೊಡ್ಡವಳಾಗುವುದು :** ಹೆಣ್ಣು ದೊಡ್ಡವಳಾಗುವುದು ಋತುವಿಗನುಗುಣವಾದ ನಿಸರ್ಗಕ್ರಿಯೆ. ಬದುಕಿನ ಪರ್ವಕಾಲ. ಇದು ಹೆಣ್ಣುತನದ ಸಾಕ್ಷಿಯಾಗಿರುತ್ತದೆ. ಸಾಮಾನ್ಯವಾಗಿ ೧೨ ರಿಂದ ೧೪ ವರ್ಷಕ್ಕೆ ಹೆಣ್ಣುಮಗು ದೊಡ್ಡವಳಾಗುತ್ತಾಳೆ. ತಂದೆ ತಾಯಿಗಳಿಗೆ ಮಗಳು ಸಕಾಲದಲ್ಲಿ ಋತುಮತಿಯಾಗದಿದ್ದರೆ ಚಿಂತೆಯಾಗುವುದು. ಋತುಮತಿಯಾದ ಮೇಲೆ ತಮ್ಮ ಶಕ್ತಿ ಅನುಸಾರ ಸಂತೋಷದಿಂದ ಕ್ರಿಯೆಗಳನ್ನು ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಋತುಮತಿಯಾದವಳನ್ನು ಕೂಡಿಸಿ ಮುತ್ತೈದೆಯರು ಹೀಗೆ ಹಾಡುವರು.

ಬಾಲಿತಾ ಮೈನೆರದು ಬಾಗಿಲದಾಗ ನಿಂತಾಳ
ಬಾಳೇಲಿ ಹಂಗ ಮಕ ಬಾಡೇ ಸೋ ||೧||

ಬಾಳೇಲಿ ಹಂಗ ಮಕ ಬಾಡಿ ಅವರವ್ವಾ
ಬಾ ಬಾಲಿನಂದ ಕರದಾಳ ಸೋ ||೨||

ರಂಬಿ ತಾ ಮೈನೆರೆದು ಅಂಗಳದಾಗ ನಿಂತಾಳ
ನಿಂಬೆಲಿ ಹಾಂಗ ಮಕ ಬಾಡೇ ಸೋ ||೩||

ನಿಂಬೆಲಿ ಹಾಂಗ ಮಕ ಬಾಡಿ ಅವರವ್ವಾ
ಬಾ ರಂಬಿನೆಂದು ಕರದಾಳ ಸೋ ||೪||

ಓದುವ ಸಾಲ್ಯಾಗ ಮಾವಯ್ಯ ಕುಂತಾನ
ಸಸಿ ಹೋಗಿ ಕಾಲಾ ಹಿಡಿದಾಳ ಸೋ ||೫||

ಸಸಿ ಹೋಗಿ ಕಾಲು ಹಿಡಿದು ತಾ ಕೇಳ್ಯಾಳೆ
ಗೊಂಬಿಲ್ಲರಿ ನಮ್ಮ ಎಡ್ಯಬಲ್ಯ ಸೋ ||೬||

ಬಡಗ್ಯಾರ ಕರಸ್ಯಾರ ಹಿಡಿ ಹೊನ್ನ ಕುಡ ಸ್ಯಾರ
ಚಂದನದ ಗೊಂಬಿ ಕೆತ್ತಸ್ಯಾರ ಸೋ ||೭||

ವಡ್ಡರನ ಕರಸ್ಯಾರ ಹಿಡಿ ಹೊನ್ನ ಕೊಡ ಸ್ಯಾರ
ಅಂಗಳದಾಗ ಭಾವಿ ಹೊಡಸ್ಯಾರ ಸೋ ||೮||

ಅಂಗಳದಾಗ ಭಾವಿ ಹೊಡಸ್ಯಾರ ತಂಗೆವ್ವಾ
ಇಲ್ಲೇ ಮೆಲಿಯವ್ವ ಹೊಳನೀರ ಸೋ ||೯||

ನೀರ ಮಡ ಬಿಟ್ಟು ಹಾಲ ಮಡಕ ಹೋಗಿ
ಹಸನಾಗಿ ಒಗಿರಿ ಮಡಿಗೋಳ್ಸ ಸೋ ||೧೦||

ಹಸನಾಗಿ ಒಗಿರಿ ಮಡಿಗೋಳ ಈ ಮನಿಗಿ
ದಸಿಮಕದಳಿಯ ಬರ್ರ್ಯತಾನ್ಸ ಸೋ ||೧೧||

ಈ ಮೇಲಿನ ಹಾಡಿನಲ್ಲಿ ಹುಡುಗಿ ತಾನು ದೊಡ್ಡವಳಾದ ಬಗೆಗೆ ಹುಡುಗಿಯಲ್ಲಿದ್ದ ನಾಚಿಕೆ, ಹೆದರಿಕೆ, ದುಗುಡತನವನ್ನು ತಿಳಿದುಕೊಂಡ ಅವಳ ತಾಯಿ ಬಾ ಮಗಳೇ ಎಂದು ಕರೆದು ಹೀಗೇಕೆ ನಿಂತಿರುವೆ ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ಉತ್ತರ ದೊರೆತೊಡನೆ ತಾಯಿ ಅಗಸಗಿತ್ತಿಗೆ, ಬಾಜದವರಿಗೆ, ಹೂಗಾರದವರಿಗೆ, ಮುತ್ತೈದೆಯವರಿಗೆಲ್ಲ ಕರೆ ಹೇಳುತ್ತಾಳೆ. ಎರಡು ಗೊಬ್ಬರಿ ಬಟ್ಟಲು, ಸಕ್ಕರಿ, ಶಾಂವಿಗೆ ತೆಗೆದುಕೊಂಡು ಕೆಲವರು ಬರುವರು. ಅವರು ಬಂದ ನಂತರ ಅಂಗಳದಲ್ಲಿ ಮಣೆ ಹಾಕಿ ಕೂಡಿಸಿ ಐದು ಜನ ಮುತ್ತೈದೆಯರು ಮೇಲಿನ ಹಾಡು ಹಾಡಿದ ನಂತರವು ಮತ್ತೇ ಐದು ಹಾಡುಗಳನ್ನು ಹಾಡುತ್ತ ಎಣ್ಣೆ ಎರೆಯುವರು. ಎಣ್ಣೆ ಎರೆಯಲು ಐದು ಅಥವ ನಾಲ್ಕು ಗಣಿಕೆಯ ಎರಡು ಜೋಳದ ದಂಟು ತೆಗುದುಕೊಂಡು ಅದಕ್ಕೆ ವಿಳೆದೆಲೆ ಅರಷಿಣ ಕೊಂಬು ಕಟ್ಟುವರು, ಕೊಬ್ಬರಿ ಗುಂಡಿನಲ್ಲಿ ಒಳ್ಳೆಣ್ಣೆ ತೆಗೆದುಕೊಂಡು ಎಣ್ಣೆ ಎರೆಯುವರು. ಆ ಮೇಲೆ ಐದು ಜನ ಮಕ್ಕಳ ಮರಿಗಳಾದ ಮುತ್ತೈದೆಯರು ಮುಟ್ಟು ನೀರು ಎರೆದು ಅಗಸಗಿತ್ತಿ ಕೊಟ್ಟ ಬಟ್ಟೆಗಳನ್ನು ಉಡಲು ಕೊಡುವರು.

ಹಲಗೆ ಬಾರಿಸುತ್ತಾರೆ ಮೈನೆರೆದವಳನ್ನು ಕೋಣೆಯ ಒಂದು ಮೂಲೆಯಲ್ಲಿ ಕೂಡಿಸುತ್ತಾರೆ. ಆರತಿ ಹಚ್ಚುತ್ತಾರೆ. ಆಕೆ ಕುಳಿತ ಸ್ಥಳದಲ್ಲಿ ಅರಿಷಿಣ ಎಣ್ಣೆಯನ್ನು ಕೈಗೆ ವರಿಸಿಕೊಂಡು ನೋಡಲಾರದೆ ಕೈ ಛಾಪ ಗುರುತು ಗೋಡೆಗೆ ಹಾಕಬೇಕು.ಗುರುತು ನೇರವಾಗಿ ಹಾಕಿದರೆ ಶುಭವೆಂದು ಮತ್ತು ಓರೆಯಾಗಿ ಹಾಕಿದರೆ ಅಶುಭವೆಂದು ಭವಿಷ್ಯ ನುಡಿಯುತ್ತಾರೆ. ಹುಡುಗಿಯ ತಲೆಯ ಮೇಲೆ ಕೊಬ್ಬರಿ ಗುಂಡು ಒಡೆಯುವರು. ಹೀಗೆ ಕೊಬ್ಬರಿ ಒಡೆಯುವುದರಿಂದ ಹುಡುಗಿಯ ಕಂಟಕ ದೂರಾಗುತ್ತದೆಂಬ ನಂಬಿಕೆ ಅವರಲ್ಲಿದೆ. ನೀರು ಹಾಕಿದ ಮುತ್ತೈದೆಯವರಿಗೆ ಶ್ಯಾವಿಗೆ, ಅನ್ನಸಾರು ಊಟಕ್ಕೆ ಕೊಡುತ್ತಾರೆ. ಐದು ದಿನಗಳವರೆಗೆ ಮೈಲಿಗೆ ಆಚರಿಸುವುದರಿಂದ ಮುಟ್ಟ ನೀರು ಎರೆದವಳು ಮಾತ್ರ ಆಕೆಗೆ ನೀರು ಹಾಕುವಳು, ಬೇರೆಯವರು ಯಾರು ಮುಟ್ಟುಕೊಳ್ಳುವುದಿಲ್ಲ. ಅಗಸರದವಳು ಐದೂ ದಿವಸದ ಬಟ್ಟೆಗಳನ್ನು ಒಗೆಯುವಳು.

ಮೈನೆರೆದ ಐದನೆಯ ದಿವಸಕ್ಕೆ ಮನೆ ಹಾಗೂ ಬಟ್ಟೆಗಳನ್ನು ಸ್ವಚ್ಛಗೊಳಿಸುತ್ತಾರೆ. ಇಂದಿನ ದಿವಸ ಹುಡುಗಿಯನ್ನು ತಲೆಸ್ನಾನ ಮಾಡಿಸಿ ಕೈಯಲ್ಲಿ ಹಾಲಿನ ಗಡಿಗೆ ಕೊಟ್ಟು ಬಾಗಿಲಲ್ಲಿ ಬೆಂಕೆಯಿಟ್ಟು ದಾಟಿಸುತ್ತಾರೆ. ಅಂದು ಬಟ್ಟೆಯನ್ನು ಮಡಿ ಮಾಡಿ ತಂದ ಅಗಸಗಿತ್ತಿಯನ್ನು ಪಾವ ಜೋಳ (೧/೪) ಕೊಬ್ಬರಿ ಗುಂಡು, ಒಂದು ಕುಪ್ಪಸ, ಸವ್ವಾರೂಪಾಯಿ (೧ ರೂಪಾಯಿ ೨೫ ಪೈಸೆ) ಕೊಡುತ್ತಾರೆ. ಮೊದಲನೆಯ ದಿವಸದ ಬಟ್ಟೆಗಳನ್ನು ಅಗಸಗಿತ್ತಿ ತೆಗೆದುಕೊಂಡು ಹೋಗುತ್ತಾಳೆ. ಮೈನೆರೆದವಳಿಗೆ ಹಸಿರು ಬಳೆಯನ್ನು ತೊಡಿಸುತ್ತಾರೆ.

ರಾತ್ರಿ ಹಾಡುವ ಸಮಯದಲ್ಲಿ ಮುಂಗೈಯಿಂದ ಸ್ವಲ್ಪ ಮೇಲಿನವರೆಗೆ ಗಂಧವನ್ನು ಹಚ್ಚುತ್ತಾರೆ. ಹೀಗೆ ಒಂಬತ್ತು ಅಥವಾ ಹದಿನಾರು ದಿವಸ ರಾತ್ರಿ ಆಕೆಯನ್ನು ಮಣೆ ಅಥವಾ ಕುರ್ಚಿ ಮೇಲೆ ಕೂಡಿಸಿ ಹಾಡುತ್ತಾರೆ. ಸಾಮಾನ್ಯವಾಗಿ ಎಬ್ಬಿಸುವ ವರೆಗೆ ಸಿಹಿ ಊಟವನ್ನೆ ಆಕೆಗೆ ಕೊಡುವರು. ಮತ್ತೇ ಕೆಲವರು ಅಟಳಿಗೆ ಎಚ್ಚಕೂಡ ಕೊಡುತ್ತಾರೆ. ಕೊನೆಯ ದಿವಸ ಸಿಹಿ ಅಡಿಗೆ ಮಾಡಿ ದಿನಾಲು ಹಾಡಲು ಬಂದ ಸುಮಂಗಲೆಯರಿಗೂ ಇತರರಿಗೂ ಬಂಧುಬಾಂಧವರಿಗೂ ಊಟಕ್ಕೆ ಹಾಕುತ್ತಾರೆ. ರಾತ್ರಿ ಅಡುಗೆ ತಂದವರಿಗೆ ಬಟ್ಟೆಗಳನ್ನು ಮಾಡುತ್ತಾರೆ. ಹೆಣ್ಣು ಮಕ್ಕಳು ಹಾಡು ಹೇಳಿದ ನಂತರ ಕೊನೆಗೆ ಮಂಗಳಾರತಿಯ ಪದ ಹೇಳುವರು. ಹೆಣ್ಣು ಮಕ್ಕಳೆಲ್ಲ ಹೋಗುವಾಗ ಫಳಾರ (ಅಳ್ಳು) ಕೊಟ್ಟು ಕಳಿಸುತ್ತಾರೆ. ದಿನಾಲು ರಾತ್ರಿಗೆ ವಾದ್ಯ ನುಡಿಸಿ ಹೋದಂತಹ ಬಾಜದವರಿಗೆ ೫೧ ರೂಪಾಯಿ ಕೊಟ್ಟು ಕಳಿಸುತ್ತಾರೆ.

ಒಂದು ವೇಳೆ ಋತುಮತಿ ಆಗುವುದಕ್ಕಿಂತ ಮುಂಚೆಯೇ ಮದುವೆಯಾಗಿದ್ದರೆ, ಹದಿನಾರನೆಯ ದಿವಸಕ್ಕೆ ಮದುವೆಯಾದ ಹುಡಗನನ್ನು ಹಾಗೂ ಆತನ ಮನೆಯವರಿಗೆ ಕರೆಸಿ ಸೋಬಾನವನ್ನು ಮಾಡುತ್ತಾರೆ. ಅಂದು ಹುಡಗ ಹಾಗೂ ಹುಡುಗಿಗೆ ಬಟ್ಟೆ ಮಾಡುತ್ತಾರೆ. ಸೋಬಾನದ ಹಾಡುಗಳನ್ನು ಹೆಣ್ಣುಮಕ್ಕಳು ಹಾಡುತ್ತಾರೆ. ಅಲ್ಲಿಗೆ ಈ ಕಾರ್ಯ ಮುಗಿಯುತ್ತದೆ. ಬಾಲ್ಯ ವಿವಾಹದ ಹುಡುಗಿ ದೊಡ್ಡವಳಾಗುವವರೆಗೆ ತವರು ಮನೆಯಲ್ಲಿದ್ದು ಸೋಬಾನದ ನಂತರ ಗಂಡನ ಮನೆಗೆ ಕರೆದುಕೊಂಡು ಹೋಗುತ್ತಾರೆ.

ಪ್ರಸ್ತುತದಲ್ಲಿ ಆಧುನಿಕರಣಕ್ಕೆ ಒಳಗಾದ ಜನರು ಮಗಳು ದೊಡ್ಡವಳಾದರೂ ಕೂಡಿಸುತ್ತಿಲ್ಲ. ಮದುವೆಯಾಗಲೂ ತಡವಾದರೆ ವಯಸ್ಸು ಕಂಡು ಬರುತ್ತದೆಂಬ ಭಯ ಜನರಿಗೆ ಕಾಡುತ್ತಲಿದೆ. ಹಿಂದಿನ ಕಾಲದಲ್ಲಿ ದೊಡ್ಡವಳಾದ ಹುಡುಗಿ ಯಾರ ಮನೆಯಲ್ಲಿ ಇರುವಳೊ ಅವರ ಮನೆಗೆ ಹೆಂಡೆ ಬಡಿಯುತ್ತಿದ್ದರಂತೆ. ಯಾಕೆಂದರೆ ದೊಡ್ಡವಳಾದ ಮಗಳನ್ನು ಮನೆಯಲ್ಲಿ ಇಟ್ಟುಕೊಂಡರೆ ಮುಖಕ್ಕೆ ಹೆಂಡೆ ಬಳಸಿಕೊಳ್ಳವ ಸಂಭವ ಬರಬಹುದೆಂಬುದರ ಎಚ್ಚರ ಜನರು ಹೆಂಡೆಯ ಮೂಲಕ ಕೊಡುತ್ತಿದ್ದರು ಇದರಿಂದ ತಂದೆ ತಾಯಿಗಳು ಜಾಗ್ರತರಾಗಿ ಬೇಗ ಮಗಳ ಮದುವೆ ಮಾಡಿ ಕೊಡುತ್ತಿದ್ದರು. ಅಂದಿನ ಕಾಲದಲ್ಲಿ ಆಸ್ತಿ ಅಂತಸ್ತುಕ್ಕಿಂತಲೂ ಮಾನವೇ ಮುಖ್ಯವಾಗಿತ್ತು. ಆದ್ದರಿಂದಲೇ ಬಾಲ್ಯ ವಿವಾಹ ಹೆಚ್ಚಾಗಿ ನಡೆಯುತ್ತಿದ್ದವು. ಪ್ರಸ್ತುತದಲ್ಲಿ ತೊಟ್ಟಿಲ ವಿವಾಹ, ಬಾಲ್ಯ ವಿವಾಹ ಪದ್ಧತಿಗಳು ಕಂಡುಬರುತ್ತಿಲ್ಲ.

ದೊಡ್ಡವಳಾದ ಹುಡುಗಿಗೆ ಕೊಡುವ ಸ್ಥಾನಮಾನ ವಿಶೇಷವಾಗಿರುತ್ತದೆ. ಯಾಕೆಂದರೆ ಆಕೆಗೂ ಸಹ ತಾನು ದೊಡ್ಡವಳು ಎಂಬ ಭಾವನೆ ಬಂದಿರುತ್ತದೆ. ಮಾನ ಅಥವಾ ಶೀಲ ಕಾಪಾಡಿ ಕೊಂಡು ಹೋಗುವ ಜವಾಬ್ದಾರಿ ಆಕೆ ಹಾಗೂ ಆಕೆಯ ತಂದೆ ತಾಯಿಗಳ ಮೇಲಿರುತ್ತದೆ. ಆಕೆಯೂ ಸಹ ದೊಡ್ಡವರಿಗೆ ಮರಿಯಾದೆ ಕೊಡಲು ಪ್ರಾರಂಭಿಸುವಳು. ಮೊದಲಿನ ಹುಡುಗಾಟಿಕೆ ಕಡಿಮೆಯಾಗುತ್ತವೆ. ಒಬ್ಬಾಕೆ ಎಲ್ಲಿಗೂ ತಿರುಗಾಡುವುದಿಲ್ಲ. ತಾನು ಒಂದು ಜವಾಬ್ದಾರಿಯುತ ಹೆಣ್ಣು ಎಂಬ ಭಾವನೆ ಆಕೆಯಲ್ಲಿ ಮೂಡಿರುತ್ತದೆ. ಶಾಲೆಗೆ ಕಳಿಸುವುದನ್ನು ನಿಲ್ಲಿಸುತ್ತಾರೆ. ಯಾಕೆಂದರೆ ತಮ್ಮ ಮನೆಯ ಮಾನಾಪಮಾನದ 'ಭಯ ಕಾಡುತ್ತಿರುತ್ತದೆ.

**೪.೧೦ ತಿಂಗಳ ಮುಟ್ಟು :** ಒಂದು ಹೆಣ್ಣು ಋತುಮತಿಯಾದ ನಂತರ ತಿಂಗಳ ಮುಟ್ಟು ಸಹ ಟೋಕ್ರೆಕೋಳಿಯವರು ಕಟ್ಟುನಿಟ್ಟನಿಂದ ಮೈಲಿಗೆಯೆಂದು ಪಾಲಿಸುತ್ತಾರೆ. ಮುಟ್ಟು ಒಂದು ಅಪವಿತ್ರ, ಕೀಳು

ಎಂಬ ಭಾವನೆ ಟೋಕ್ರೆ ಕೋಳಿಯವರಲ್ಲಿದೆ. ಆದುದ್ದರಿಂದ ಮುಟ್ಟಾದ ಹೆಣ್ಣು ಹೊರಗೆ ಇರಬೇಕು ಹೊರಗಿನ ಕೆಲಸ ಹೆಂಡಿರಜ, ಹೋಲದ ಕೆಲಸ, ಹುಲ್ಲುತರುವುದು ಇತ್ಯಾದಿ ಮಾಡಬಹುದು. ಇದಕ್ಕೆ ಹೊರ ಕೂಡುವುದೆಂದು ಕರೆಯುವರು. ಮುಟ್ಟಿನ ಕ್ರಿಯೆ ನಿಂತಾಗ ನಾಲ್ಕು ದಿನಗಳ ನಂತರ ತಲೆಸ್ನಾನ ಮಾಡಿ ಮನೆಯ ಒಳಗಡೆ ಬರಬೇಕು. ಮೊದಲನೆಯ ದಿನದಿಂದ ನಾಲ್ಕನೆಯ ದಿನದವರೆಗೆ ಮನೆಯಲ್ಲಿ ಓಡಾಡುವಂತಿಲ್ಲ, ಅಡುಗೆ ಮಾಡುವಂತಿಲ್ಲ, ಮನೆಯವರು ಅಡಿಗೆ ಮಾಡಿ ನೀಡಿದ ಆಹಾರವನ್ನು ಊಟ ಮಾಡಬೇಕು. ಊಟ ಮಾಡಿದ ತಟ್ಟೆ, ತಂಬಿಗೆ ಹಾಗೂ ಹಾಸಿಗೆಗಳು ಐದನೆಯ ದಿವಸಕ್ಕೆ ಸ್ವಚ್ಛಗೊಳಿಸಿ ಮನೆ ಒಳಗಡೆ ತೆಗೆದುಕೊಳ್ಳುತ್ತಾರೆ.

ಪ್ರಸ್ತುತದಲ್ಲಿ ಆಧುನಿಕರಣಕ್ಕೆ ಒಳಗಾದ ಟೋಕ್ರೆ ಕೋಳಿ ಸ್ತ್ರೀಯರು ತಿಂಗಳ ಮುಟ್ಟು ಕಟ್ಟುನಿಟ್ಟಾಗಿ ಪಾಲಿಸುತ್ತಿಲ್ಲ. ಏಕೆಂದರೆ ಮುಟ್ಟಿನ ರಕ್ತಕ್ಕೂ, ದೇಹದಲ್ಲಿದ್ದ ರಕ್ತಕ್ಕೂ ಏಕೆ ಭೇದ ಕಲ್ಪಿಸಬೇಕು. ಎಲ್ಲವೂ ಕೂಡ ರಕ್ತವಲ್ಲವೆ ಎಂಬ ಪ್ರಶ್ನೆ ಅವರಲ್ಲಿ ಕಂಡು ಬರುತ್ತಲಿದೆ. ಅವಿಭಕ್ತ ಕುಟುಂಬವಿದ್ದಾಗ ಹತ್ತಾರು ಜನರು ಒಂದೆ ಕಡೆಗಿದ್ದು ಕೆಲಸ ಮಾಡಿ ಸಾಕಾಗುತ್ತಿತ್ತು. ಹೀಗಾಗಿ ತಿಂಗಳ ಮುಟ್ಟಿನ ಸಮಯದಲ್ಲಾದರೂ ನಾಲ್ಕು ದಿವಸ ವಿಶ್ರಾಂತಿ ಸಿಗಲೆಂಬ ಭಾವನೆ ಅವರಿಗಿದ್ದಿರಬಹುದು. ಆದರೆ ಇಂದಿನ ವಿಭಕ್ತ ಕುಟುಂಬದಲ್ಲಿ ಆಕೆ ಹೊರಗುಳಿದರೆ ಕೆಲಸ ಮಾಡುವರ್ಯಾರು ಎಂಬ ಕಾರಣದಿಂದ ಮುಟ್ಟಿನ ಆಚರಣೆಯಲ್ಲಿನ ನಿಯಮಗಳನ್ನು ಸಡಿಲಗೊಂಡಿರಬೇಕು.

ಮಕ್ಕಳಾದ ಹೆಂಗಸಿನ ತಿಂಗಳ ಮುಟ್ಟಿಗಿಂತಲೂ ಮದುವೆಯಾಗದ ಹೆಣ್ಣಿನ ತಿಂಗಳ ಮುಟ್ಟು ಬಹಳ ಕಟ್ಟುನಿಟ್ಟಿನಿಂದ ದೇವರ ಕಾರ್ಯದಲ್ಲಿ ಪಾಲಿಸುತ್ತಾರೆ. ಇಂದು ಸಹ ಆಧುನಿಕರಣಕ್ಕೆ ಒಳಗಾಗಿರುವ ಹೆಣ್ಣುಮಕ್ಕಳು ದಸರಾ ಹಬ್ಬದ ಸಂದರ್ಭದಲ್ಲಿ ಮುಟ್ಟಾದವರು ಹೊರಗೆ ಉಳಿಯುವುದು ಕಂಡು ಬರುತ್ತದೆ. ಮಕ್ಕಳಾದವರು ಮೂರನೆಯ ದಿವಸಕ್ಕೆ ತಲೆಸ್ನಾನ ಮಾಡಿ ಮನೆಯ ಕೆಲಸ ಮಾಡಬಹುದು. ಆದರೆ ದೇವರ ಪೂಜೆಯಾಗಲಿ, ದೇವರ ನೈವಿದ್ಯಯನ್ನು ಮಾಡುವಂತಿಲ್ಲ.

೪.೧೧ ಮದುವೆ : ಒಂದು ಹೆಣ್ಣು ಅಥವಾ ಗಂಡು ಬಾಲ್ಯಾವಸ್ಥೆಯನ್ನು ಕಳೆದ ನಂತರ ಅದಕ್ಕೆ ಪ್ರಾಪಂಚಿಕ ಸುಖ-ದುಃಖಗಳನ್ನು ಪರಿಚಯಿಸುವುದು ಪ್ರತಿಯೊಬ್ಬ ತಂದೆ ತಾಯಿಯ ಕರ್ತವ್ಯವಾಗಿದೆ. ಮದುವೆ ಎಂದರೆ ಗಂಡು ಹೆಣ್ಣಿನ ಪವಿತ್ರ ಬಂಧನ. ಇದು ಎರಡು ಮನಸ್ಸುಗಳನ್ನು ಕೂಡಿಸುವ ಕಾರ್ಯ ಮಾಡುತ್ತದೆ. ಜೀವನದಲ್ಲಿ ಎರಡನೆಯ ಹಂತದ ಮೆಟ್ಟಿಲೇರಲು ಸಮಾಜದ ಅನುಮತಿ ಪಡೆಯುವುದು ಅವಶ್ಯಕವಿರುತ್ತದೆ. ಮದುವೆ ಎನ್ನುವದು ಹಿಂದಿನಿಂದ ಆಚರಿಸಿಕೊಂಡು ಬಂದ ಸಂಪ್ರದಾಯ. ಇದರಿಂದ ಗಂಡು ಹೆಣ್ಣು ಹೊಸ ಸ್ಥಾನವನ್ನು ಪಡೆದುಕೊಂಡು ಸಂಸಾರ ಸಾಗರವೆಂಬ ಹಡಗವನ್ನು ಸುಗಮವಾಗಿ ಸಾಗಿಸುವರು.

ಟೋಕ್ರೆ ಕೋಳಿಯವರಲ್ಲಿ ಸುಮಾರು ಹತ್ತು ವರ್ಷಗಳ ಹಿಂದೆ ಬಾಲ್ಯ ವಿವಾಹ ಪದ್ಧತಿ ಇದ್ದದ್ದು ಕಂಡುಬರುತ್ತದೆ. ಆದರೆ ಪ್ರಸ್ತುತದಲ್ಲಿ ಗಂಡು ಹೆಣ್ಣಿಗೆ ತಿಳುವಳಿಕೆ ಬಂದ ನಂತರವೇ ಮದುವೆ ಮಾಡುತ್ತಿದ್ದಾರೆ. ಆಯಾ ಸಮಾಜಕ್ಕೆ ಸಂಸ್ಕೃತಿಗೆ ಅನುಗುಣವಾದ ಅರ್ಥ ಮತ್ತು ಉದ್ದೇಶಗಳು ಬೇರೆ ಬೇರೆ ಇದ್ದರೂ ವಿವಾಹದ ಕಾರ್ಯ ಒಂದೇ ಆಗಿರುತ್ತದೆ. ಮುಖ್ಯವಾಗಿ ವಿವಾಹವು ಲೈಂಗಿಕ ಕ್ರಿಯೆಯನ್ನು ನಿಯಂತ್ರಿಸುತ್ತದೆ. ಅನಂತರ

ಅದು ಮಕ್ಕಳಿಗೆ ಒಂದು ಸಾಮಾಜಿಕ ಮತ್ತು ಕಾನೂನು ರೀತಿಯ ಸಂಬಂಧವನ್ನು ಕಲ್ಪಿಸುತ್ತದೆ. ಕೊನೆಗೆ ಎರಡು ಗುಂಪುಗಳ ನಡುವೆ ಸಂಬಂಧವನ್ನು ಏರ್ಪಡಿಸುತ್ತದೆ.

ಟೋಕ್ರೆ ಕೋಳಿಯವರಲ್ಲಿ ಸಗೋತ್ರ ವಿವಾಹ ಪದ್ಧತಿ ರೂಢಿಯಲ್ಲಿದೆ. ಅಕ್ಕ ತಂಗಿಯ ಮಕ್ಕಳಿಗೆ, ಸೋದರಮಾವನ ಮಗಳಿಗೆ ಮದುವೆ ಮಾಡಿಕೊಳ್ಳುತ್ತಾರೆ. ಅವರಲ್ಲಿ ಮೊದಲು ತೆರವು ನೀಡಿ ಮದುವೆಯಾಗುವ ಪದ್ಧತಿ ರೂಢಿಯಲ್ಲಿತ್ತು. ಆದರೆ ಪ್ರಸ್ತುತದಲ್ಲಿ ವರದಕ್ಷಿಣೆ ಕೊಟ್ಟು ಮದುವೆ ಮಾಡುತ್ತಿದ್ದಾರೆ. ವರದಕ್ಷಿಣೆ ಪಿಡುಗು ಹೆಚ್ಚಾಗುತ್ತಲೇ ನಡೆದಿದೆ. ಇಂಥ ವರದಕ್ಷಿಣೆಯ ಕಾರಣದಿಂದಾಗಿ ಎಷ್ಟೋ ಹೆಣ್ಣುಮಕ್ಕಳು ಜೀವ ಕಳೆದುಕೊಳ್ಳುತ್ತಿದ್ದಾರೆ. ಹಿಂದಿನ ಕಾಲದಲ್ಲಿ ತೆರವು ಕೊಟ್ಟು ಮದುವೆಯಾದ ಹೆಣ್ಣುಮಕ್ಕಳು ಗಂಡ, ಅತ್ತೆ, ಮಾವಂದಿರು ಹೇಳಿದ್ದನ್ನು ಕೇಳಿಕೊಂಡಿರುತ್ತಿದ್ದರು ಆದರೆ ಇಂದು ಎಲ್ಲರಿಗೂ ಮಾನ ಮರಿಯಾದೆ ಕೊಡುವುದು ದೂರ ಉಳಿಯಿತು, ಏಕವಚನದಲ್ಲಿ ಮಾತಾಡುತ್ತಿದ್ದಾರೆ. ಇದಕ್ಕೆ ವರದಕ್ಷಿಣೆಯ ಪ್ರಭಾವ ಗುರುತರವಾದದ್ದು.

ಹಿಂದೆ ಮದುವೆ ಐದು ದಿವಸದವರೆಗೆ ಮಾಡುತ್ತಿದ್ದರು. ನಂತರ ಮೂರು ದಿವಸಗಳಿಗಿಳಿದು, ಇಂದಿನ ದಿನಗಳಲ್ಲಿ ಎರಡು ದಿವಸಗಳಿಗೆ ಸೀಮಿತಗೊಂಡಿದೆ. ಮುಂದೆ ಒಂದು ದಿವಸ ಅಲ್ಲವೆ ಒಂದೇ ಗಂಟೆಯಲ್ಲಿ ಮದುವೆ ಮುಗಿಯುವ ಕಾಲ ಬರಬಹುದು. ಮದುವೆ ಮಾಡಬೇಕಾದರೆ ಅದಕ್ಕಿಂತ ಮುಂಚೆ ಪೂರ್ವಸಿದ್ಧತೆಗಳಿವೆ. ಅವುಗಳ ವಿವರ ಈ ಕೆಳಗಿನಂತಿವೆ.

**೪.೧೧.೧ ಹೆಣ್ಣು ನೋಡುವುದು :** ಬೀದರ ಜಿಲ್ಲೆಯ ಟೋಕ್ರೆ ಕೋಳಿಯವರು ಬೆಡಗುಗಳ ಬಗೆಗಿನ ಮಾಹಿತಿ ಒದಗಿಸಲು ಸಾಧ್ಯವಾಗಲಿಲ್ಲ. ಕಾರಣ ಇವರು ಬೆಡಗುಗಳನ್ನು ಮರೆತಿದ್ದಾರೆ. ಆದರೆ, ಕರ್ನಾಟಕದಲ್ಲಿಯ ಇವರ ಸಂಬಂಧಿಕರು ಈ ಮಾಹಿತಿಯನ್ನು ನೀಡಿದ್ದಾರೆ. ಹೀಗಾಗಿ ಮದುವೆಗೆ ಮುಂಚೆ ಇವರಲ್ಲಿ ಬೆಡಗುಗಳ ಆಧಾರದ ಮೇಲೆ ಕನ್ಯಾ ಶೋಧ ನಡೆಯುತ್ತಿಲ್ಲ. ಪ್ರತಿಯೊಂದು ಗಂಡಿಗೆ ಮದುವೆ ಮಾಡಬೇಕಾದರೆ ಶುಭದಿನ ನೋಡಿ ಐದು ಇಲ್ಲವೆ ಒಂಬತ್ತು ಜನ ಕೂಡಿಕೊಂಡು ಹೆಣ್ಣಿನವರ ಮನೆಗೆ ಕನ್ಯೆಯನ್ನು ನೋಡಲು ಹೋಗುವರು. ಹೋಗುವಾಗ ಕನ್ಯೆಯ ಉಡಿಯಲ್ಲಿ ಇಡಲು ಎರಡು ಗುಂಡು ಕೊಬ್ಬರಿ, ಸಕ್ಕರೆ ಪುಡಿ, ಕುಂಕುಮ, ಹಣ್ಣುಗಳು ಹೀಗೆ ಐದು ದಿನಿಸು ಒಯ್ಯುತ್ತಾರೆ. ಸಾಮಾನ್ಯವಾಗಿ ಮುತ್ತೈದೆಯರು ಹೆಣ್ಣು ನೋಡಲು ಹೋಗುವರು. ಹುಡಗನಿಗೆ ಮೊದಲ ಬಾರಿಗೆ ಕರೆದುಕೊಂಡು ಹೋಗುವುದಿಲ್ಲ. ಮೊದಲು ವರನ ಅಕ್ಕ ತಂಗಿಯರು, ಅಣ್ಣಾ ತಮ್ಮಂದಿರು, ಸೋದರಮಾವ, ಸೋದರತ್ತೆ, ಊರಿನ ಮುಖ್ಯಸ್ಥ, ತಂದೆ ತಾಯಿ ಮೊದಲಾದವರು ಹೋಗುತ್ತಾರೆ.

ಗುದಲಿ, ಪಾವಡಿ, ಹೊಲೆಯ, ಸಾಯಿದ, ಬೆಕ್ಕು, ಖಾಲಿ ಕೊಡ ಎದುರು ಬಂದರೆ ನೆಂಟಸ್ಥನಕ್ಕೆ ಹೋಗುವುದಿಲ್ಲ. ಅಯ್ಯಗಳು, ಮಾದಿಗ ತುಂಬಿದ ಕೊಡ, ಮೊದಲಾದವುಗಳು ಎದುರಾದರೆ ನೆಂಟಸ್ಥನಕ್ಕೆ ಹೋಗುತ್ತಾರೆ. ಇಂಥ ಶಕುನದ ನಂಬಿಕೆಗಳು ಟೋಕ್ರೆ ಕೋಳಿಗಳಲ್ಲಿವೆ. ನೆಂಟಸ್ಥನಕ್ಕೆ ಹೋಗುವ ಸಂದರ್ಭದಲ್ಲಿ ಅಪಶಕುನಗಳು ಆದರೆ ಅಂದು ಹೋಗುವುದನ್ನು ನಿಲ್ಲಿಸಿ ಶುಭದಿನ ನೋಡಿ ಮತ್ತೊಂದು ದಿವಸ ಹೋಗುತ್ತಾರೆ.

ಹುಡುಗನ (ವರನ) ಕಡೆಯವರು ಬಂದ ನಂತರ ಕನ್ಯೆಗೆ ಅವರ ಸಮ್ಮುಖದಲ್ಲಿ ಕರೆಸುತ್ತಾರೆ. ಕನ್ಯೆ ಅಲಂಕರಿಸಿಕೊಂಡು, ಬಂದು ತುಂಬಿದ ತಂಬಿಗೆ ತೆಗೆದುಕೊಂಡು ಬಂದು ಮಣೆಯ ಹತ್ತಿರವಿಟ್ಟು ಮಣೆಯ ಮೇಲೆ ತಲೆ ತಗ್ಗಿಸಿ ಕುಳಿತುಕೊಳ್ಳುವಳು. ಆಗ ಹುಡುಗನ ಕಡೆಯವರು ತಂದ ಕೊಬ್ಬರಿ ಗುಂಡು, ಕುಂಕುಮ ಇತ್ಯಾದಿಗಳನ್ನು ಹುಡುಗಿಗೆ ಕುಂಕುಮ ಹಚ್ಚಿ ಉಡಿಯಲ್ಲಿ ಇಡುತ್ತಾರೆ. ಹುಡುಗಿಗೆ ಹುಡುಗನ ಕಡೆಯವರು ತಂದೆ, ತಾಯಿಯ ಹೆಸರೇನು? ಎಲ್ಲಿಯ ವರೆಗೆ ಅಭ್ಯಾಸವಾಗಿದೆ? ಮೊದಲಾದ ಪ್ರಶ್ನೆಗಳನ್ನು ಕೇಳುತ್ತಾ ಕನ್ಯೆಗೆ ಮಾತಾಡಿಸುತ್ತಾರೆ.

ಹೀಗೆ ಪ್ರಶ್ನೆಗಳನ್ನು ಕೇಳುವುದರ ಮೂಲಕ ಕನ್ಯೆಯ ಧ್ವನಿಯು ಶಬ್ದ ಉಚ್ಚಾರದ ಸ್ಪಷ್ಟತೆಯನ್ನು, ಅಕೆಗೆ ಮಾತುಗಳು ಬರುತ್ತವೆ ಅಥವಾ ಇಲ್ಲವೆಂಬುದನ್ನು ಪರೀಕ್ಷಿಸುತ್ತಾ ಆಕೆಯ ದೃಷ್ಟಿಯನ್ನು ತಮ್ಮ ಕಡೆಗೆ ಸೆಳೆಯುತ್ತಾರೆ. ಅವಳ ಕಣ್ಣುಗಳು ಯಾವ ತರಹದ್ದು ಹಾಗೂ ಅಕೆಯ ಧೈರ್ಯವನ್ನು ಪರೀಕ್ಷಿಸುತ್ತಾರೆ. ನಂತರ ಮತ್ತೊಂದು ದಿವಸ ಹುಡುಗನನ್ನು ಕರೆದುಕೊಂಡು ಬಂದು ಹುಡುಗಿಯನ್ನು ತೋರಿಸುತ್ತಾರೆ. ಹುಡುಗಿಯ ಕಡೆಯವರು ಹುಡುಗನ ಆಸ್ತಿಪಾಸ್ತಿ ನೋಡಿ ಹೋಗುವರು. ಮದುವೆ ಮಾಡಿಕೊಳ್ಳುವ ಹುಡುಗ ಮತ್ತು ಹುಡುಗಿಗೆ ಒಪ್ಪಿಗೆಯಾದರೆ ಮನೆಯ ಮುಖ್ಯಸ್ಥನೊಂದಿಗೆ ಮಾತಾಡುತ್ತಾರೆ. ತಮಗೆ ಅನುಕೂಲವೆಂದು ಕಂಡು ಬಂದ ದಿವಸ ಮುಂದಿನ ಕಾರ್ಯ ನಡೆಸುತ್ತಾರೆ.

೪.೧೧.೨ ನಿಶ್ಚಿತಾರ್ಥ : ನಿಶ್ಚಿತಾರ್ಥವೆಂದರೆ ಕನ್ಯೆಯನ್ನು ಖಚಿತ ಮಾಡಿಕೊಳ್ಳುವುದು. ಇದಕ್ಕೆ ಸಕ್ಕರೆ ಹಾಕುವುದು, ಹೆಣ್ಣು ಗಟ್ಟಿಮಾಡುವುದು, ಹೆಣ್ಣು ನಿಶ್ಚಯ ಮಾಡುವುದು, ಕುಂಕುಮ ಹಚ್ಚುವುದು ಎಂದು ಕರೆಯುತ್ತಾರೆ. ಗಂಡಿನವರು ಹನ್ನೊಂದು ಜನ ಅಥವಾ ಅದಕ್ಕಿಂತಲೂ ಹೆಚ್ಚು ಜನರು ಹೆಣ್ಣಿನವರ ಮನೆಗೆ ಹೋಗುತ್ತಾರೆ. ಮುಂಚೆ ಹುಡುಗನಿಗೆ ಈ ಕಾರ್ಯಕ್ಕೆ ಕರೆದು ಕೊಂಡು ಹೋಗುತ್ತಿರಲಿಲ್ಲ. ಆದರೆ ಇಂದಿನ ದಿನಗಳಲ್ಲಿ ಹುಡುಗನಿಗೂ ಕರೆದುಕೊಂಡು ಹೋಗುವುದು ಕಂಡು ಬರುತ್ತದೆ. ಮಧ್ಯಾಹ್ನದವರೆಗೆ ಊಟಮುಗಿಸಿ, ಸಾಯಂಕಾಲ ಈ ಕಾರ್ಯ ಆರಂಭವಾಗುವುದು. ಊರಿನ ಮುಖ್ಯಸ್ಥರನ್ನು ಹಲವಾರು ವ್ಯಕ್ತಿಗಳನ್ನು ಬಾಜೆಯ ಮುಖಾಂತರ ಬರಮಾಡಿಕೊಳ್ಳುತ್ತಾರೆ. ಊರಿನ ಜನರಿಗೆಲ್ಲ ಕರೆದು ಬರುತ್ತಾರೆ. ಗಂಡಿನವರು ತಂದ ಬಟ್ಟೆಗಳನ್ನು ಕನ್ಯೆಗೆ ಉಡಿಸಿ ದಂಡೆ ಹಾಕಿ ಮಣೆ ಅಥವಾ ಕುರ್ಚಿಯ ಮೇಲೆ ಕೂಡಿಸುತ್ತಾರೆ. ಐದು ಜನ ಮುತ್ತೈದೆಯರು ಕೊಬ್ಬರಿ ಗುಂಡು ಸಕ್ಕರೆ ಪುಡಿಯನ್ನು ಆಕೆಯ ಉಡಿಯಲ್ಲಿ ಇಡುತ್ತಾರೆ. ಹುಡಗನು ತಂದ ಉಂಗರವನ್ನು ಹುಡುಗಿಯ ಬಲಗೈ ಬೆರಳಿಗೆ ಇಡುತ್ತಾರೆ. ಇಂದು ಹುಡುಗನಿಗೆ ಬಟ್ಟೆಯನ್ನೂ ಮಾಡುತ್ತಿದ್ದಾರೆ. ಅವನನ್ನು ಆಕೆಯ ಬಲಕ್ಕೆ ಕೂಡಿಸುತ್ತಾರೆ. ಇದಕ್ಕೆ ಸಂಬಂಧಿಸಿದ ಹಾಡುಗಳನ್ನು ಮುತ್ತೈದೆಯರು ಹಾಡುತ್ತಾರೆ. ಅಂಥ ಹಾಡಿನ ತುಣುಕೊಂದು ಹೀಗಿದೆ.

**ಕುಂಕುಮ ಹಚ್ಚುವ ಹಾಡು**

ಕುಂಕಮ ಹಚ್ಚರಿ ನಮ್ಮ ಚಂದ್ರನ ಚಲುವಿಗಿ
ಕುಂಕಮ ಹಚ್ಚಿರಿ ನಮ್ಮ ಚಂದ್ರನ ಚಲುವಿಗಿ
ಚಂದರಾಜನ ಮಡದಿ ಚೆಲವಿಗೆ$_{SS}$ ಗಂಧ$_{SS}$ದ ಕೇಸ$_{S}$

ಚಂದರಾಜನ ಮಡದಿ ಚೆಲವಿ ಗಂಗಮ್ಮಗ |
ಕುಂಕುಮ ಹಚ್ಚರಿ ಶೋಭ್ಯಾಲಿಂದೆ ಗಂಧ$_s$ದ ಕೇಸ$_s$ ||೧||

ಅರಿಷಿಣ ಹಚ್ಚರಿ ನಮ್ಮ ಚಂದ್ರನ ಚೆಲವಿಗಿ||
ಚಂದರಾಜನ ಮಡದಿ ಚೆಲವಿಗೆ$_{ss}$ ಗಂಧ$_{ss}$ದ ಕೇಸ$_s$
ಚಂದರಾಜನ ಮಡದಿ ಚೆಲವಿ ಗಂಗಮ್ಮಗ||
ಅರಿಷಿಣ ಹಚ್ಚರಿ ಶೋಭ್ಯಾಲಿಂದೆ ಗಂಧ$_s$ದ ಕೇಸ$_s$ ||೨||

ಸೀರಿ ಉಡಿಸಿರಿ ನಮ್ಮ ಚಂದ್ರನ ಚೆಲವಿಗಿ||
ಚಂದರಾಜನ ಮಡದಿ ಚೆಲವಿಗೆ$_{ss}$ ಗಂಧ$_{ss}$ದ ಕೇಸ$_s$
ಚಂದರಾಜನ ಮಡದಿ ಚೆಲವಿ ಗಂಗಮ್ಮಗ||
ಸೀರಿ ಉಡಿಸಿರಿ ಶೋಭ್ಯಾಲಿಂದೆ ಗಂಧ$_s$ದ ಕೇಸ$_s$ ||೩||

ದಂಡಿ ಹಾಕಿರಿ ನಮ್ಮ ಚಂದ್ರನ ಚೆಲವಿಗಿ||
ಚಂದರಾಜನ ಮಡದಿ ಚೆಲವಿಗೆ$_{ss}$ ಗಂಧ$_{ss}$ದ ಕೇಸ$_s$
ಚಂದರಾಜನ ಮಡದಿ ಚೆಲವಿ ಗಂಗಮ್ಮಗ
ದಂಡಿ ಹಾಕಿರಿ ಶೋಭ್ಯಾಲಿಂದೆ ಗಂಧ$_s$ದ ಕೇಸ$_s$ ||೪||

ಬಳಿ ಇಡಸಿರಿ ನಮ್ಮ ಚಂದ್ರನ ಚೆಲವಿಗಿ
ಚಂದರಾಜನ ಮಡದಿ ಚೆಲವಿಗೆ ಗಂಧ$_{ss}$ದ ಕೇಸ$_s$
ಚಂದರಾಜನ ಮಡದಿ ಚೆಲವಿ ಗಂಗಮ್ಮ
ಬಳಿ ಇಡಸಿರಿ ಶೋಭ್ಯಾಲಿಂದೆ ಗಂಧ$_s$ದ ಕೇಸ$_s$ ||೫||

ಹಾಡಿದದವರು:ಶೋಭಾ ಎಂ. ಮಿರ್ಜಾಪೂರ

ಮೇಲಿನ ಹಾಡಿನಲ್ಲಿ ಮುತ್ತೈದೆಯ ಸಂಕೇತಗಳಾದ ಕುಂಕುಮ, ಅರಿಷಿಣ, ದಂಡೆ, ಬಳೆಯನ್ನು ಕುರಿತು ಹೇಳಲಾಗಿದೆ. ಆಕೆಗೆ ತಂದ ವಸ್ತುಗಳನ್ನು ಹಾಗೂ ಸೌಂದರ್ಯದ ವರ್ಣನೆಯನ್ನು ಮಾಡಲಾಗಿದೆ. ಇದೆ ರೀತಿಯ ನಾಲ್ಕು ಹಾಡುಗಳನ್ನು ಹಾಡಿ ಐದನೆಯದು ಆರತಿ ಹಾಡೂ ಹಾಡಿ ಮುಗಿಸುತ್ತಾರೆ. ಎಡಕ್ಕೆ ಕುಳಿತವಳಿಗೆ ಸೀರೆ ಅಥವಾ ರವಿಕೆ ಎರಡು ಗುಂಡು ಕೊಬ್ಬರಿ ಕೊಡುವರು. ಅಲ್ಲಿ ಸಕ್ಕರೆ ಹಾಕಲು ನೆರೆದಂಥ ಜನರಿಗೆಲ್ಲ ಸಕ್ಕರೆ ಹಂಚುತ್ತಾರೆ. ಸಕ್ಕರೆ ಹಂಚಿದ ಬುಟ್ಟಿ ಮತ್ತು ಬಟ್ಟಲು ಗಂಡಿನವರು ತೆಗೆದುಕೊಳ್ಳುವರು.

೪.೧೧.೩ ಬೀಗರ ಮುಂಡಾಸಿ : ಒಂಬತ್ತು ಅಥವಾ ಹನ್ನೊಂದು ಜನ ಗಂಡಸರಿಗೆ ಟೋಪಿ, ಸೆಲ್ಯಾ (ಟಾವಲ) ಮಾಡುತ್ತಾರೆ. ಇದಕ್ಕೆ ಬೀಗರ ಮುಂಡಾಸಿ ಕಟ್ಟುವುದೆಂದು ಹೇಳುವರು. ಇದು ಮದುವೆಯ ಪೂರ್ವದ ಮೊದಲ ಘಟ್ಟವಾಗಿರುತ್ತದೆ. ಇದಾದ ಮೇಲೆ ಹೆಣ್ಣು ನಿಶ್ಚಯವಾದಂತೆ. ಈ ಕಾರ್ಯ ನಡೆಯದಿದ್ದರೆ. ಬೇರೆ ಗಂಡಿನೊಂದಿಗೆ ಮದುವೆ ಮಾಡಬಹುದು. ಆದರಿಂದಲೇ ಇದಕ್ಕೆ ಹೆಣ್ಣು ಗಟ್ಟಿ ಮಾಡುವುದೆಂದು ಹೇಳುವರು.

ಮದುವೆಯ ಪೂರ್ವಸಿದ್ಧತೆಯನ್ನು ಹಿಂದೆ ಐದು ದಿವಸಗಳವರೆಗೆ ಮದುವೆ ನಡೆಯುತ್ತಿದ್ದ ಸಂದರ್ಭದಲ್ಲಿ ಮದುವೆಯ ಒಂದು ತಿಂಗಳ ಮುಂಚೆಯೇ ಪ್ರಾರಂಭಿಸುತ್ತಿದ್ದರು. ಮನೆಯವರಿಷ್ಟರಿಂದಲೇ ಕೆಲಸ ಆಗುವುದಿಲ್ಲವೆಂದು ತಮ್ಮ ಬಂಧುಗಳನ್ನು ಕರೆಯಿಸಿ ಮದುವೆಗೆ ಬೇಕಾದಂತ ಸಾಹಿತ್ಯವನ್ನು (ಎಲ್ಲಾ

ಪದಾರ್ಥಗಳನ್ನು) ತಯಾರಿಸಿಕೊಳ್ಳುತ್ತಿದ್ದರು. ಬೀಸುವುದು. ಕುಟ್ಟುವುದು ಮನೆಯಲ್ಲಿ ಕೈಯಿಂದಲೇ ಮಾಡುವುದರಿಂದ ತಡವಾಗುತ್ತಿತ್ತು. ಆದರಿಂದಲೇ ಒಂದು ತಿಂಗಳು ಕಾಲವಾದರು ಸಾಹಿತ್ಯ ತಯಾರಿಸಲು ಬೇಕಾಗುತ್ತಿತ್ತು. ಆದರೆ ಇಂದಿನ ಯಾಂತ್ರಿಕರಣದ ಬದುಕಿನಲ್ಲಿ ಒಂದು ವಾರವೂ ಈ ಕಾರ್ಯಕ್ಕೆ ಬೇಕಾಗುವುದಿಲ್ಲ.

**೪.೧೧.೪ ಒಳ್ಳಕಲ್ಲ ಪೂಜೆ :** ಒಳ್ಳಕಲ್ಲ ಪೂಜೆಯೂ ಮದುವೆ ಇನ್ನೂ ಹತ್ತು ಹದಿನೈದು ದಿವಸವಿದೆ ಎಂದರೆ ಮಾಡುತ್ತಾರೆ. ಮದುವೆಯು ಯಾರ ಕಡೆ ಇರುತ್ತದೆಯೋ ಆ ಮನೆಯವರು ಈ ಕಾರ್ಯ ಮಾಡುವರು. ಇದರಲ್ಲಿ ಹೆಣ್ಣುಮಕ್ಕಳ ಪಾತ್ರ ಕಂಡು ಬರುತ್ತದೆ. ಮೊದಲಿಗೆ ಬೀಸುವ ಕಲ್ಲಿಗೆ ಅರಿಷಿಣ ಕುಂಕುಮದಿಂದ ಪೂಜೆ ಮಾಡಿ ಕಡಲೆಬೇಳೆ ಬೆಲ್ಲ ಆದರ ಮೇಲಿಟ್ಟು ಅಗರಬತ್ತಿ ಹಚ್ಚಿ ಐದು ಜನ ಮುತ್ತೈದೆಯರಿಗೆ ಕಂಕಣ ಕಟ್ಟುವರು. ಇವರು ಅರಿಷಿಣ ಬೀಸಿದ ನಂತರ ಜೀರಿಗೆ ಮೆಂತಿಟ್ಟು ಬಿಸುತ್ತಾರೆ. ಅನಂತರ ಒರಳು ಒಣಕೆಗೆ ಪೂಜೆ ಮಾಡಿ, ಒಣಕೆಗೆ ಕಂಕಣ ಕಟ್ಟಿ ಐದು ಸೇರು ಗೋಧಿಯನ್ನು ಕುಟ್ಟುತ್ತಾರೆ. ಅರಿಷಿಣ ಅಥವಾ ಭಾಸಣಕಿ ದಿವಸ ಇದೆ ಗೋಧಿ ಅಕ್ಕಿಯ (ಕುಟ್ಟಿದ ಗೋಧಿ) ಹುಗ್ಗಿ (ಪಾಯಸ) ಮಾಡುತ್ತಾರೆ. ಅನಂತರ ಸೆಂಡಿಗೆ ಕಡಿಯುತ್ತಾರೆ. ಉದ್ದಿನ ಹಪ್ಪಳ ಮತ್ತು ಶ್ಯಾವಿಗೆ ಮಾಡುತ್ತಾರೆ. ಇವೆಲ್ಲ ಕಾರ್ಯ(ಕೆಲಸ)ಗಳು ಹಾಡಿನ ಮೂಲಕವೇ ಸಾಗುತ್ತವೆ. ಇವೆಲ್ಲ ಕೆಲಸಗಳು ಮುಗಿದ ನಂತರ ಆ ಐದು ಜನ ಮುತ್ತೈದೆಯರಿಗೆ ಊಟಕ್ಕೆ ಕೊಡುತ್ತಾರೆ. ಅನಂತರದ ದಿನಗಳಲ್ಲಿ ಮನೆಯನ್ನು ಸಾರಿಸಿ, ಬಟ್ಟೆಗಳನ್ನು ಒಗೆದು ಸ್ವಚ್ಛಗೊಳಿಸುತ್ತಾರೆ. ಹಿಂದೆ ಇಂದಿನಂತೆ ಮದುವೆಯ ಕರೆಯೋಲೆ ಕಾರ್ಡ ಇರದ ಕಾರಣ ಅಕ್ಕಿಗೆ ಕುಂಕುಮ ಹಚ್ಚಿ ಮದುವೆಯು ಇಂಥ ದಿನವಿದೆ ತಾವು ಬರಬೇಕೆಂದು ಬಂಧು ಬಾಂಧವರಿಗೆ ಅಕ್ಕಿ ಕೊಟ್ಟು ಬರುತ್ತಿದ್ದರು.

**೪.೧೧.೫ ಗೊಂದಲ ಕಾರ್ಯ :** ಮದುವೆಯ ಮುಂಚಿತವಾಗಿ ಸಾಹಿತ್ಯವೆಲ್ಲ ಸಿದ್ಧ ಮಾಡಿಕೊಂಡ ನಂತರ ಕೆಲವು ದೇವತೆಗಳನ್ನು ಪೂಜಿಸುವ ಸಂಪ್ರದಾಯವು ಇವರಲ್ಲಿ ಕಂಡು ಬರುತ್ತದೆ. ಗೊಂದಲವು ಸಾಮಾನ್ಯವಾಗಿ ಶುಭಕಾರ್ಯದಲ್ಲಿ ಮಾಡುವುದು ರೂಢಿಯಲ್ಲಿದೆ.

ಗೊಂದಲ ಕಾರ್ಯವನ್ನು ಶುಕ್ರವಾರ ಇಲ್ಲವೆ ಮಂಗಳವಾರ ದಿವಸ ಮಾಡುತ್ತಾರೆ. ಮನೆಯ ಕೆಲವು ಜನರು ತುಳಜಾಪೂರದ ಅಂಬಭವಾನಿಗೆ ಹೋಗಿ ಬರುತ್ತಾರೆ. ಅಲ್ಲಿಂದ ಬರುವಾಗ ತಂದ ಭೋಗಿಯ ತೆಂಗು, ಬಾಳೆಹಣ್ಣು, ಬಳೆ, ಕುಂಕುಮ ಹಂಚುವರು. ಆದುದರಿಂದ ಗೊಂದಲ ಹಾಕುವಂಥ ಗೊಂದಲಿಗರಿಗೆ ಬರ ಹೇಳುವರು. ಕೆಲವರು ಮೇಕೆ ಬಲಿಕೊಟ್ಟು ಗೊಂದಲ ಕಾರ್ಯ ಮಾಡುವರು. ಮತ್ತೇ ಕೆಲವರು ಕರಿದ ಎಣ್ಣೆ ಹೋಳಿಗೆ ನೈವಿದ್ಯಕ್ಕೆ ಮಾಡಿ ಗೊಂದಲ ಹಾಕುವರು. ಇದು ಗೊಂದಲದ ಪೂರ್ವ ತಯಾರಿ. ಇದನ್ನು ರಾತ್ರಿ ಹೊತ್ತಿನಲ್ಲಿ ಮಾಡುವರು.

ನೈವಿದ್ಯಕ್ಕಾಗಿ ಮಾಂಸಹಾರ ಇಲ್ಲವೆ ಕರಿದ ಎಣ್ಣೆ ಹೋಳಿಗೆ ತಯಾರಿಸುವರು. ರಾತ್ರಿ ಗೊಂದಲಿಗ ಬಂದ ಮೇಲೆ ಆತ ತಂದ ಸಾಂಭಾಳಿಗೆ (ಬಾರಿಸುವ ವಾದ್ಯಕ್ಕೆ) ಪೂಜಿಸಿ ನೈವಿದ್ಯ ತೋರುವರು. ಹಾಗೆ ಗೊಂದಲಿಗನ ಕಾಲು ತೊಳೆದು ಪೂಜಿಸಿ ಆತನಿಗೂ ಹಾಗೂ ಸಾಂಭಾಳಿಗೆ ಮನೆಯವರೆಲ್ಲ ನಮಸ್ಕಸುವರು. ಆತನೂ ಊಟ ಮಾಡಿದ ನಂತರ ಇನ್ನುಳಿದ ಜನರೆಲ್ಲ ಊಟ ಮಾಡುವರು. 'ಐದು ಕಬ್ಬಿನ ಗಳ ತಂದು ಗುಡಿ ಕಟ್ಟುವರು.

ಅದರ ಮಧ್ಯದಲ್ಲಿ ಮಣೆ ಹಾಕಿ ಅದರ ಮೇಲೆ ಹೊಸಬಟ್ಟೆ ಹಾಸುವರು. ಕಡಲೆ ಪಲ್ಲೆವನ್ನು ಒಟ್ಟಿಸಂತೆ ಸಣ್ಣಾಗಿ ಮಾಡಿ ಅದರಿಂದ ರಂಗಾ ಬರೆಯುವರು. ಅದರ ಮೇಲೆ ಅರಷಿಣ, ಕುಂಕುಮ, ಗುಲಾಲ, ಬುಕ್ಕಿಟು ಹಾಕುವರು'.

ಪರಡಿಯಲ್ಲಿ ಅಕ್ಕಿ, ಬೇಳೆ, ಬೆಲ್ಲ, ಹಿಟ್ಟು, ಮಾಡಿದ ನೈವಿದ್ಯ ಹಾಕಿ ಗುಡಿಯಲ್ಲಿ ಇಡುವರು. ಚೌರಂಗ ಬರೆದಲ್ಲಿ ಕಳಸ ಹೂಡುವರು. ಅದರ ಮುಂದೆ ಮೇಕೆಯ ಬಾಯಲ್ಲಿ ಮುಂದಿನ ಎರಡು ಕಾಲು ಕೊಟ್ಟಿದನ್ನು ದೇವರ ಮುಂದೆ ಇಡುವರು. ದಿವಟಿಗೆ ಹಚ್ಚಿ ಅದರ ಮುಂದೆ ಇಡುವರು. ಗುಡಿಯಲ್ಲಿ ಹನ್ನೊಂದು ಎಣ್ಣೆ ಹೋಳಿಗೆ ಪೋಣಿಸಿ ಕಟ್ಟುವರು. ಇದಾದ ನಂತರ ರಾತ್ರಿ ೧೦ ಗಂಟೆಯಿಂದ ಪೂಜೆಯನ್ನು ಆರಂಭಿಸಿ ಗೊಂದಲಿಗ ವಾದ್ಯವನ್ನು ಬಾರಿಸುತ್ತ ಭವಾನಿಯ ಕಥೆಯನ್ನು ಹೇಳುವನು.

ಈ ಕಥೆಗಳು ದೇವರ ಮಹಿಮೆಯನ್ನು ಕುರಿತದಾಗಿರುತ್ತವೆ "ಗೊಂದಳಿಗ್ಯಾ ಒಂದ ಕಥೆಗೆ ಬೆಳಗ ಮಾಡುತ್ತಾನ" ಎನ್ನುವುದನ್ನು ನೋಡಿದಾಗ, ಅತನಿಗೆ ಕಥೆ ಹೇಳುವ ಕೌಶಲ್ಯ ಇರುತ್ತದೆಂಬುದು ಕಂಡು ಬರುತ್ತದೆ. ಆತ ಹೇಳುವ ಕಥೆ ಒಂದೇ ಆದರೂ, ಮಧ್ಯದಲ್ಲಿ ಉಪಕಥೆಯಾಗಲಿ, ಚುಟುಕಿಸಂತಹ ನಗಚಾಟಿಕೆನ್ನು ಹೇಳುವನು. ಈ ರೀತಿ ಮಾಡುವುದರಿಂದ ಗೊಂದಲ ಕೇಳಲು ಕುಳಿತ ಜನರಿಗೆ ನಿದ್ದೆ ಬರುವುದಿಲ್ಲ. ಹೀಗೆ ರಾತ್ರಿಯನ್ನು ಕಳೆಯುತ್ತಾನೆ. ದಿವಟಿಗೆಗೆ ಎಣ್ಣೆ ಹಾಕಲು ಕುಳಿತ ವ್ಯಕ್ತಿ ಮಧ್ಯದಲ್ಲಿ ಏಳುವಂತಿಲ್ಲ. ಆತ ಮುಂಜಾನೆ ಆರತಿ ಮಾಡಿದ ನಂತರವೇ ಆತನಿಗೆ ಟೋಪಿ, ಟಾವಲು ಮಾಡುವರು. ಆ ಮೇಲೆ ಅವನು ಅಲ್ಲಿಂದ ಹೋಗುವನು.

ವಾದ್ಯಬಾರಿಸುತ್ತ ಮನೆಯಿಂದ ಸ್ವಲ್ಪದೂರ ಹೋಗಿ ಅಲ್ಲಿ ನೀರನ್ನು ಸಿಂಪಡಿಸಿ, ಚಕ್ರಾಕಾರವಾಗಿ ಬರೆದು ಅದರ ಮೇಲೆ ಹಿಟ್ಟು, ಗುಲಾಲ ಬುಕ್ಕಿಟ್ಟ, ಅರಿಷಿಣ, ಕುಂಕುಮ ಹಾಕಿ ಐದು ಹರಳು ತೊಳೆದು ಅದರಲ್ಲಿಟ್ಟು ಪೂಜಿಸಿ ಆರತಿ ಮಾಡಿ ಎಲ್ಲರೂ ನಮಸ್ಕರಿಸಿ ಮನೆಗೆ ವಾದ್ಯಯೊಂದಿಗೆ ಬರುತ್ತಾರೆ.

ಮನೆಯಲ್ಲಿ ಗೊಂದಲ ಹಾಕಿಸಿದವರಿಗೆ ಬಟ್ಟೆ ಮಾಡುವರು. ಅನಂತರ ಗೊಂದಲದ ನೈವಿದ್ಯ, ಅಕ್ಕಿ, ಹಿಟ್ಟು ಮೊದಲಾದವನ್ನು ಗೊಂದಲಿಗ ತೆಗೆದುಕೊಳ್ಳುವನು. ಗುಡಿ ಬಿಚ್ಚುವರು. ಗೊಂದಲ ಹಾಕಿದಂತ ಗೊಂದಲಿಗನಿಗೆ ಹಿಂದೆ ೧೧ ರೂಪಾಯಿಂದ ೫೦ ರೂಪಾಯಿಗಳವರೆಗೆ ಕೊಡುತ್ತಿದ್ದರು. ಆದರೆ ಪ್ರಸ್ತುತದಲ್ಲಿ ೪೦೦ ರಿಂದ ೫೦೦ ರೂಪಾಯಿ ತೆಗೆದುಕೊಳ್ಳುವುದನ್ನು ಕಂಡು ಬರುತ್ತಿದೆ.

**೪.೧೧.೬ ಭಾಸಣಕಿ :** ಗಂಡಿನ ಮನೆಯಲ್ಲಿ ಮದುವೆ ಇದ್ದರೆ ಹೆಣ್ಣನ್ನು ಗಂಡಿನ ಮನೆಗೆ ಕರೆದುಕೊಂಡು ಬರುವರು. ಹೀಗೆ ಕರೆದುಕೊಂಡು ಬರಲು ಐದು ಅಥವಾ ಹನ್ನೊಂದು ಜನರು ಹೋಗುತ್ತಾರೆ. ಹೋಗುವಾಗ ಐದು ಸೇರು ಗೋಧಿ, ಐದು ಕೊಬ್ಬರಿ ಗುಂಡು, ಐದೈದು ಖಾರೀಕ, ಬಾದಾಮ, ಅಡಿಕೆ, ಅರಿಷಿಣಕೊಂಬು, ಸೀರೆ, ರವಿಕೆ ತೆಗೆದುಕೊಂಡು ಹೋಗುತ್ತಾರೆ. ಊರಿಗೆ ಹೋಗಿ ಹಣಮಂತನ ಗುಡಿ ಮೇಲೆ ಕುಳಿತಿರುತ್ತಾರೆ. ಹೆಣ್ಣಿನವರು ಬೀಗರಿಗೆ ಕರೆಯಲು ಬಾಜೆಯ ಸಮೇತ ಬರುವರು. ಅನಂತರ ಮನೆಗೆ ಕರೆದುಕೊಂಡು ಹೋಗುತ್ತಾರೆ. ನಂತರ ಊಟಕ್ಕೆ ಬಡಿಸುತ್ತಾರೆ.

ಸುಮಾರು ನಾಲ್ಕೈದು ಗಂಟೆಗೆ ಬಾಸಣಿಕಿ ಹಾಕಲು ಜನರನ್ನು ಕರೆದು, ಊರಿನ ಗೌಡ ಕುಲಕರ್ಣಿಯನ್ನು ಬಾಜೆಯೊಂದಿಗೆ ಕರೆತರುತ್ತಾರೆ. ಜನರು ಬರುವಷ್ಟರಲ್ಲಿ ಮನೆಯಲ್ಲಿ ಜಮಖಾನೆ ಹಾಸಿ ಅದರ ಮೇಲೆ ಸೆಸೆ ಬರೆಯುತ್ತಾರೆ. ಹುಡುಗಿಗೆ ಅದರ ಮೇಲೆ ಕೂಡಿಸಿ ಸೀರೆ, ಕುಪ್ಪಸ ತೋಡಿಸಿ ದಂಡೆ ಹಾಕಿ ಅವರು ತಂದ ಉಡಕ್ಕಿಯನ್ನು ಐದು ಜನ ಮುತ್ತೈದೆಯರು ಉಡಿಯಲ್ಲಿ ಹಾಕುತ್ತಾರೆ. ಎಡಕ್ಕೆ ಕುಳಿತವಳಿಗೆ ಸೀರೆ ಉಡಿಸುವರು. ದೇವರ ಜಗಲಿಯ ಮೇಲೆ ಸೀರೆ ಅಥವಾ ಎರಡು ಗುಂಡು ಕೊಬ್ಬರಿ ಕೊಡುತ್ತಾರೆ. ಹುಡುಗಿಯ ತಾಯಿಗೆ ಭಾಸಣಿಕೆ ಸಮಯದಲ್ಲಿ ತಾಯಿ ಹೊಟ್ಟೆ ಸೀರೆ ಕೊಡುತ್ತಾರೆ. ಅಲ್ಲಿ ನೆರೆದಂತಹ ಎಲ್ಲರಿಗೂ ಸಕ್ಕರೆ ಹಂಚುತ್ತಾರೆ.

ಅನಂತರ ಗಂಡಿನ ಮನೆಗೆ ಹೆಣ್ಣನ್ನು ಕರೆದುಕೊಂಡು ಬರುವಾಗ ಅವರ ಜೊತೆಗೆ ಕರಜಿಕಾಯಿ, ಅಕ್ಕಿ, ಹಿಟ್ಟು, ಬೇಳೆ, ಬೆಲ್ಲ, ಶ್ಯಾವಿಗೆ ಕಟ್ಟುತ್ತಾರೆ. ತನ್ನ ತವರು ಮನೆಯನ್ನು ಬಿಟ್ಟು ಬರುವ ಹೆಣ್ಣು ತನ್ನ ಸಂಬಂಧಿಕರ ಕೊರಳಿಗೆ ಬಿದ್ದು ದುಃಖಿಸುತ್ತಾಳೆ. ತನ್ನ ತವರಿನ ಋಣ ತೀರಿತೆಂಬ ಭಾವನೆಯನ್ನು ದುಃಖದಲ್ಲಿ ವ್ಯಕ್ತವಾಗುವುದು. ತಾನು ಬೆಳೆದ ಪರಿಸರದಿಂದ, ತನ್ನ ಒಡ ಹುಟ್ಟಿದವರಿಂದ, ಕುಣಿದು ಕುಪ್ಪಳಿಸಿದ ಗೆಳೆಯರಿಂದ ಅಗಲುತ್ತಿದ್ದಿನೆಂದು ದುಃಖ ಉಮ್ಮಳಿಸಿ ಬರುತ್ತದೆ. ತವರಿನಲ್ಲಿದ್ದ ಸ್ವಾತಂತ್ರ್ಯತೆ ಗಂಡನ ಮನೆಯಲ್ಲಿ ಇರುವುದಿಲ್ಲ. ಗಂಡ ಮತ್ತು ಅತ್ತೆ ಇತರ ಹಿರಿಯರ ನೇತೃತ್ವದಲ್ಲಿ ನಡೆಯಬೇಕಾಗುವುದು. ನೇರ ಹುಡುಗಿಗೆ ಮೊದಲು ಹಣಮಂತನ ಗುಡಿಗೆ ಕರೆದುಕೊಂಡು ಹೋಗುವರು. ಇದನ್ನು ತಿಳಿದ ಹುಡಗನ ಮನೆಯವರು ಬಾಜೆಯೊಂದಿಗೆ ಆರತಿ ತೆಗೆದುಕೊಂಡು ಬರುವರು. ದೇವರಿಗೆ ದೀಪ ಹಚ್ಚಿ ನಮಸ್ಕರಿಸಿ ಮನೆಗೆ ಬರುವಷ್ಟರಲ್ಲಿ ಹುಡುಗನಿಗೆ ನೀರು ಹಾಕಿ ಮದುಮಗ ಮಾಡುತ್ತಾರೆ. ಪೋಚಮ್ಮಗೆ ಬಟ್ಟೆ ಏರಿಸಿಕೊಂಡು ಬರುತ್ತಾರೆ. ನಂತರ ಗುಡಿಯಿಂದ ಮದುಮಗಳಿಗೆ ಕರೆದುಕೊಂಡು ಬರುತ್ತಾರೆ.

೪.೧೧.೭ **ಹಂದರ ಹಾಕುವುದು ಮತ್ತು ಹಾಲಗುಂಜಿ ನೆಡುವುದು :** ಹಂದರವು ಮದುವೆಯ ಮನೆಯ ಮುಂದೆ ಅಥವಾ ಅಂಗಳದಲ್ಲಿ ಹಾಕುತ್ತಾರೆ. ಹಂದರಕ್ಕೆ ಛಡೆದ ನಾಲ್ಕು ಗಳ ತಂದು ನಾಲ್ಕು ದಿಕ್ಕಿಗೆ ನೆಡುತ್ತಾರೆ. ಅದರ ಮೇಲೆ ಕಣಕಿ(ಕಳಕಿ)ಯನ್ನು ಹಾಕಿ ಮಾವಿನ ತೋರಣ ಕಟ್ಟುತ್ತಾರೆ.

ಬಲ ತೆಗೆದಾಗ ಹೆಸರು ಬಂದಂಥ ವ್ಯಕ್ತಿಗಳು ಹಾಲ ಗುಂಜಿ ತರಲು ಹೋಗುತ್ತಾರೆ. ಹಾಲಗುಂಜಿ ತರಲಿಕ್ಕೆ ಹೋಗುವಾಗ ಸಕ್ಕರೆ, ಅಗರಬತ್ತಿ, ಅರಿಷಿಣ, ಕುಂಕುಮ ಜೊತೆಗೆ ತೆಗೆದುಕೊಂಡು ಹೋಗುತ್ತಾರೆ. ಅತ್ತಿಯ ಮತ್ತು ಮಾವಿನ ಗಿಡಕ್ಕೆ ಪೂಜೆ ಮಾಡಿ ನೈವಿದ್ಯ ತೋರಿದ ನಂತರ ಘಂಟಿ(ಟೊಂಗೆ)ಯನ್ನು ಕಡಿಯುತ್ತಾರೆ. ಇವರು ಫಲ ಕೊಡುವಂಥ ಅತ್ತಿಯ ಹಾಗೂ ಮಾವಿನ ಘಂಟಿಯನ್ನು ನೆಡುವುದರ ಉದ್ದೇಶ ಮುಂದೆ ಮಧು ವರರ ಜೀವನವು ಕೂಡ ಫಲವತ್ತತೆಯಿಂದ ಕೂಡಿರಲಿ ಎಂಬುದು. ಆ ಘಂಟಿಯನ್ನು ತರುವಾಗ ಮಾತಾಡುವುದಿಲ್ಲ. ಹಾಲಗುಂಜಿ ತರುವಂಥ ವ್ಯಕ್ತಿಗಳಲ್ಲಿ ಒಬ್ಬನು ತಗ್ಗು ತೋಡುತ್ತಾನೆ, ಇನ್ನೊಬ್ಬನು ಅದನ್ನು ಕೆಳಗಿಡದೇ ಹಿಡಿದುಕೊಂಡಿರುವನು. ತಗ್ಗು (ಗುಂಡಿ) ತೋಡಿದ ನಂತರ ತಗ್ಗಿನಲ್ಲಿ ಹಪ್ಪಳ, ಸಂಡಿಗೆ, ಶ್ಯಾವಿಗೆ, ಜಿರಿಗೆ ಮೆಂತಿಟ್ಟು ಹಾಕಿದ ನಂತರ ಹಾಲಗುಂಜಿ ಕಟ್ಟುವರು. ತಗ್ಗಿನಲ್ಲಿ ಹಾಕಿದ ಪದಾರ್ಥಗಳನ್ನು ಕುಳ್ಳಿಯಲ್ಲಿಯೂ ಹಾಕುವರು. ಅದರ ಮೇಲೆ ಹಣತೆಯಲ್ಲಿ ದೀಪ ಹಚ್ಚುವರು. ಈ ದೀಪವು ಮದುವೆ

ಮುಗಿಯುವರೆಗೆ ಉರಿಯುತ್ತಲೆ ಇರಬೇಕು. ಹಾಲಗುಂಜಿಗೆ ಪೂಜೆ ಮಾಡಿ ಅಗರಬತ್ತಿ ಹಚ್ಚಿ, ನೈವಿದ್ಯ ತೋರಿಸುತ್ತಾರೆ. ಹಾಲಗುಂಜಿ ತಂದವರಿಗೆ ಸ್ಯಾವಿಗೆ ಅನ್ನ ಊಟಕ್ಕೆ ಕೊಡುವರು.

೪.೧೧.೮ ಅರಿಷಿಣ ಶಾಸ್ತ್ರ : ಅರಿಷಿಣ ಕುಂಕುಮ ಮುತ್ತೈದೆಯ ಸಂಕೇತ. ಅರಿಷಿಣ ಹಚ್ಚುವುದು ಗಂಡಿನ ಜೀವನದಲ್ಲಿ ಕೂಡ ಒಂದು ಸಲ ಒದಗಿ ಬರುತ್ತದೆ. ಅದು ಮದುವೆಯ ಸಂದರ್ಭದಲ್ಲಿ ಮಾತ್ರ. ಅರಿಷಿಣ ಹಚ್ಚಬೇಕಾದರೆ ಐದು ಕುಳ್ಳಿಯನ್ನು ತೆಗೆದುಕೊಂಡು ಹಂದರದಲ್ಲಿ ನಾಲ್ಕು ದಿಕ್ಕಿಗೆ ನಾಲ್ಕು ಇಟ್ಟು ಒಂದು ನೂಲು ಇಡಲು ಬಳಸುತ್ತಾರೆ. ಈ ಕುಳ್ಳಿಗೆ ಹತ್ತು ಎಳೆದಾರ ಸುತ್ತಿ ಎರಡು ಮಣೆ ಹಾಕಿ ಮದುಮಕ್ಕಳಿಗೆ ಕೂಡಿಸುತ್ತಾರೆ. ಎರಡು ಜೋಳದ ದಂಟು ಒಂಬತ್ತು ಗಣಿಕೆ ಇರುವಂತೆ ತೆಗೆದುಕೊಂಡು ಅದಕ್ಕೆ ವಿಳೆದಲೆಯಲ್ಲಿ ಅರಿಷಿಣ ಬಟ್ಟು ಸುತ್ತಿ ಕಟ್ಟುತ್ತಾರೆ. ಒಂದು ಕಂಚಿನ ಬಟ್ಟಲಲ್ಲಿ ಒಳ್ಳೆಣ್ಣೆ ತೆಗೆದುಕೊಂಡು, ಮದು ಮಕ್ಕಳಿಗೆ ಮೊದಲು ದೇವರ ಜಗಲಿಯ ಹತ್ತಿರ ಕೂಡಿಸಿ ದೇವರಿಗೆ ಎಣ್ಣೆ ಎರೆದು ನಂತರ ಮದುಮಕ್ಕಳಿಗೆ ಎರೆದು ಸುರುಗಿ ಸುತ್ತಿದ್ದಲ್ಲಿಗೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿಯೂ ಐದು ಜನ ಎಣ್ಣೆ ಹಚ್ಚುವಾಗ ಗಂಡಿಗೆ ಮತ್ತು ಹೆಣ್ಣಿಗೆ ಬೇರೆ ಬೇರೆ ಹಾಡು ಹೇಳುತ್ತಾರೆ. ಅದಕ್ಕೆ ಸಂಬಂಧಿಸಿದ ಹಾಡೂ ಈ ರೀತಿಯಲ್ಲಿದೆ.

ದೇವ ದೇವರೆಣ್ಣಿ ಯಾವ ದೇವರೆಣ್ಣಿ
ಮನಿಯ ದೇವರ ಮೊದಲೆಣ್ಣಿ
ಹರಹರ ನಮ ಶಿವಗ ನೆಯ್ಯೆಣ್ಣಿ.... ||೧||

ಬಾಲಗೆಣ್ಣಿ ಹಚ್ಚೋಟಿಗೆ ಬಾಗಿಲಿಗೆ ಬಿಸಿಲ್ಬಂದ
ನಾಲ್ಕತ್ತಾಟದ ಎಲಿ ಬಂದ ಹರಹರ.... ||೨||

ಕಂದಗೆಣ್ಣಿ ಹಚ್ಚೊಟಿಗೆ ಅಂಗಳಕ ಬಿಸಿಲ್ಬಂದ
ಐವತ್ತಾಟದ ಎಲಿ ಬಂದು ಹರಹರ...... ||೩||

ನೀರಿಲ್ಲದಂಗಳಾಗ ನೀರ್ಯಾಕನಾಗ್ಯಾವ
ಊರಿಗಿ ದೊಡ್ಡವರ ಮಗ ಮಿಂದ ಹರಹರ...... ||೪||

ಕೆಸರಿಲ್ಲದಂಗಳಾಗ ಕೆಸರ್ಯಾಕನಾಗ್ಯಾವ
ಹೆಸರಿಗಿ ದೊಡ್ಡವರ ಮಗ ಮಿಂದ ಹರಹರ....... ||೫||

ಹೆಸರಿಗಿ ದೊಡ್ಡವರ ಮಗ ಮಿಂದ ತಮ್ಮಗ
ಹಸರ ಪಲ್ಲಕ್ಕಿ ನೆರಳಾಗಿ ಹರಹರ....... ||೬||

ಅರಿಷಿಣ ಹಚ್ಚುವುದು ಲಗ್ನದ ಕಾಲದಲ್ಲಿ ಪ್ರಥಮ ದೀಕ್ಷೆಯಂತಿರುವುದು. ವರನಿಗೆ ಅರಿಷಿಣ ಹಚ್ಚುವಾಗ ಇದನ್ನು ಹಾಡುತ್ತಾರೆ. ಆಗ ಮುತ್ತೈದೆಯರು ನೆರೆದು ಹಾಡುತ್ತ, ವರನ ತಲೆಗೆ ವಿಳೆದಲೆಯಿಂದ ಎಣ್ಣೆಯನ್ನು ಹಚ್ಚಿ, ಮೈಗೆ ಅರಿಷಿಣ ಹಚ್ಚುವರು. ಇಲ್ಲಿ ವರನನ್ನು ಸಾಕ್ಷಾತ ದೇವರಿಗೆ ಹೋಲಿಸಿ ಹೇಳುತ್ತಾರೆ. ದೇವರಿಗೆ ಎಣ್ಣೆ ಎರೆದ ನಂತರ ವರನಿಗೆ ಎರೆಯುವರು. ಈ ಸಂದರ್ಭದಲ್ಲಿ ಸಾಮಾನ್ಯ ವ್ಯಕ್ತಿಯನ್ನೇ ವಿಶೇಷವಾಗಿ ಕಾಣುತ್ತೇವೆ. ನೀರಿಲ್ಲದ ಅಂಗಳದಲ್ಲಿ, ಕೆಸರಿಲ್ಲದ ಅಂಗಳದಲ್ಲಿ ಯಾಕೆ ಹಸಿಯಾಗಿದೆ ಎಂದರೆ ಊರಿಗೆ

ದೊಡ್ಡವರ ಮಗ ಮಿಂದ (ಸ್ನಾನ) ಸಲುವಾಗಿ ಹಸಿಯಾಗಿದೆ ಎಂದು ಇದರಲ್ಲಿ ಹೇಳಲಾಗಿದೆ. ಹಾಗೆ ಆತನಿಗೆ ಹಸರ ಪಲ್ಲಕ್ಕಿ ನೆರಳಾಗಿ ಸದಾವಿರಲಿ ಎಂದು ಹೇಳುವರು.

**ಹೆಣ್ಣಿಗೆ ಸಂಬಂಧಿಸಿದ ಹಾಡು ಈ ರೀತಿಯಲ್ಲಿ ಹೇಳಲಾಗುತ್ತದೆ.**

ಹಂಚಗೂಣಿ ಬೆಂಚಗೂಣಿ ಮುತ್ತಿನ ನಾಗುರಣಿ
ಕುಸುಮಲ್ಲಿ ಭೂದೇವಿಗೆ
ಮುತ್ತಿನ ಬಟ್ಟಿಟ್ಟು ಮುತ್ತೈದೆಯರೆಲ್ಲಾ
ಎಣ್ಣಿ ಹಚ್ಚುನು ಬನ್ನಿರೆ ||೧||

ಗಂಜಿಯ ಸೀರ್ಯುಟ್ಟು ಗಂಧದ ಬಟ್ಟಿಟ್ಟು
ಪಿಲ್ಲೆ ಕಾಲುಂಗರಿಟ್ಟ
ಮುಡಿಸಣ್ಣ ಮುತ್ತಿನ ನತ್ತ ನಿಟ್ಟವರೆಲ್ಲ
ಎಣ್ಣಿ ಹಚ್ಚುವನು ಬನ್ನಿರೆ. ||೨||

ಚಿಕ್ಕಿಯ ಸೀರ್ಯುಟ್ಟು ತಿಲಕದ ಬಟ್ಟಿಟ್ಟು
ಮೂಗಿಗೆ ಮೂಗತಿಟ್ಟವರ
ಜಾಳಿಗಿ ದಂಡೀ ಮುಡಿಯ ಮುತ್ತೈದೇರ್‍ಯಾ
ಎಣ್ಣಿ ಹಚ್ಚುನು ಬನ್ನಿರೆ ||೩||

ಕಂಚೀನ ಬಟ್ಲಾಗ ಮಿಂಚೆಣ್ಣಿ ತಕ್ಕೊಂಡು
ಕೆಂಚರೊಂದ್ಯೆವರ
ಕೆಂಚರೊಂದ್ಯೆವರ ನೆರೆದ ಮುತ್ತೈದೇರ್‍ಯಾ
ಎಣ್ಣಿ ಹಚ್ಚನು ಬನ್ನಿರೆ ||೪||

ಬೆಳ್ಳಿಯ ಬಟ್ಲಾಗ ಒಳ್ಳೆಣ್ಣಿ ತಕ್ಕೊಂಡು
ನಲ್ಲೆರೊಂದ್ಯೆವರ
ನಲ್ಲೆರೊಂದ್ಯೆವರ ನೆರೆದ ಮುತ್ತೈದೇರ್‍ಯಾ
ಎಣ್ಣಿ ಹಚ್ಚುನು ಬನ್ನಿರೆ ||೫||

ಹವಳಸರ ಬವಳಸರ ಮ್ಯಾಲ ಮುತ್ತಿನಸರ
ತಾಯಿತಲ್ಯಾವಳ
ತಾಯಿತ ಲ್ಯಾವಳ ತಾಳಿ ಕಟ್ಟಿದವರ್‍ಯಾ
ಎಣ್ಣಿ ಹಚ್ಚುನು ಬನ್ನಿರೆ ||೬||

ಇಲ್ಲಿ ಮುತ್ತೈದೆಯರು ಹೂವಿನಂತ ಮದುಮಗಳಿಗೆ ಎಣ್ಣೆ ಹಚ್ಚುತ್ತಿದ್ದಾರೆ. ಮುತ್ತೈದೆಯರು ಮಾತ್ರ ಒಳ್ಳೆಯ ಕಾರ್ಯದಲ್ಲಿ ಭಾಗವಹಿಸುವರು ಎಂಬುದು ಈ ಹಾಡಿನಲ್ಲಿ ಹೇಳಲಾಗಿದೆ. ಈ ರೀತಿಯ ಹಾಡುಗಳನ್ನು ಹೇಳಿದ ನಂತರ ಮದುಮಕ್ಕಳಿಗೆ ಹಣೆಗೆ ಕುಂಕುಮ ಹಚ್ಚಿ, ಕೈಯಲ್ಲಿ ಅರಿಷಿಣ ತೆಗೆದುಕೊಂಡು ಗಲ್ಲ, ಕೈ, ಪಾದಕ್ಕೆ

ಐದು ಜನ ಮುತ್ತೈದೆರು ಹಚ್ಚಿ, ಐದು ತಂಬಿಗೆ ನೀರು ಹಾಕುತ್ತಾರೆ. ನಂತರ ಹೊಸ ಬಟ್ಟೆಗಳನ್ನು ಹಾಕಿ, ಮದುಮಗಳಿಗೆ ಉಡಕ್ಕಿ ಹಾಕಿ ಐದೆಳೆ ಕಂಕಣ ಮದುಮಕ್ಕಳಿಗೆ ಕಟ್ಟುತ್ತಾರೆ. ಕಂಕಣದಲ್ಲಿ ಐದೆಳೆ ದಾರ, ವಿಳೆದೆಲೆ ಅರಿಷಿಣ ಬಟ್ಟು ಇರುತ್ತದೆ. ಮದುಮಕ್ಕಳಿಗೆ ದೀಪದ ನೀವಾಳಿ ಮಾಡಿ ಮನೆಯಲ್ಲಿ ಕರೆತರುವರು.

**೪.೧೧.೯ ಐರಾಣಿ ತರುವುದು :** ಐರಾಣಿ ತರಲು ಹೋಗುವಾಗ ಆರತಿಯೊಂದಿಗೆ ಮರದಲ್ಲಿ ಅಕ್ಕಿ, ಬೇಳೆ, ಹಿಟ್ಟು, ಬೆಲ್ಲ, ವಿಳೆದೆಲೆ, ಕೊಬ್ಬರಿ ಗುಂಡು, ಖಾರೀಖು, ಬಾದಮ, ಕುಪ್ಪಸ ರೂ.೫.೦೦ ತೆಗೆದುಕೊಂಡು ಐರಾಣಿ ತರಲು ಹೆಸರು ಬಂದ ಜೋಡಿ (ಗಂಡ-ಹೆಂಡತಿ) ಹಾಗೂ ಇತರ ಜನರು ಕುಂಬಾರನ ಮನೆಗೆ ಹಾಡುತ್ತ ಬಾಜೆಯೊಂದಿಗೆ ಹೋಗುತ್ತಾರೆ. ಹೋಗುವಾಗ ಹೇಳುವ ಹಾಡಿದು. ಇದಕ್ಕೆ ಐರಾಣಿಯ ಹಾಡು ಎಂದು ಹೇಳುವರು. ಐರಾಣಿ ಎಂದರೆ ಐದು ಮಂದಿ ರಾಣಿಯರು ಹೊರುವ ಕೊಡ ಮತ್ತು ಮಗಿಗಳ ಸಮೂಹವಾಗಿರಬಹುದು. ಆದರೆ ಇಂದು ಒಂದು ಜೋಡಿ ಮಾತ್ರ ತರುವಂಥದಾಗಿದೆ.

ಜಾಣ ಕುಂಬಾರನೆ ಮನೆ ಯಾವ ಕಡಿಗದ|
ಕಪ್ಪುರದ ತಿಪ್ಪಿ ಎಡ ಬಲ| ಸೋ ||೧||

ಕಪ್ಪುರದ ತಿಪ್ಪಿ ಎಡ ಬಲ ಮಾಡಿಕೊಂಡು
ಜಾಣ ಕುಂಬಾರನ ಮನಿಗ್ಯಾದ| ಸೋ ||೨||

ಮುಂಜಾಳಿ ಕುಂಬಾರಣ್ಣಾ ಮಸರ ಬಾನುಂಡಾನ
ಹಾರ್‍ಯಾರಿ ಕೆಸರ ತುಳದಾನ| ಸೋ ||೩||

ಹಾರಿ ಹಾರೀ ಕೆಸರ ತುಳುದು ತಾ ಮಾಡ್ಯಾನ
ನಾರ್‍ಯಾರ ಹೊರುವ ಒಂದ್ಯೆಯರಾಣಿ| ಸೋ ||೪||

ಕಡಗದ ಕೈಯಕ್ಕಿ ಕೊಡವಿ ಕುಂಬಾರವ್ವಾ|
ಕೊಡದ ಮ್ಯಾಲ್ಯಾನ ಬರದಾಳ| ಸೋ ||೫||

ಕೊಡದನೆ ಮ್ಯಾಲ್ಯಾನ ಬರದಾಳ ನಮ್ಮೂರ
ಬಾಳಿ ಬನದಾನೊಂದರಗಿಣಿಯ| ಸೋ ||೬||

ಹೀಗೆ ಹಾಡನ್ನು ಹೇಳುತ್ತಾ ಕುಂಬಾರನ ಮನೆಗೆ ಹೋಗುವರು. ಮರದಲ್ಲಿದ್ದ ಪದಾರ್ಥಗಳನ್ನು ತೆಗೆದುಕೊಂಡು ಐದುಮಗಿ ಮರದಲ್ಲಿಟ್ಟು ಬಿಳಿ ಬಟ್ಟೆಯಿಂದ ಮುಚ್ಚಿ ಕುಂಬಾರ ಹೆಣ್ಣು ಮಗಳು ಕೊಡುವಳು. ಮನೆಗೆ ತಂದ ನಂತರ ಪತ್ರೋಳಿಯನ್ನು ಹಾಕಿ ಐದು ಮಗಿಗಳು ದೇವರ ಜಗಲಿಯ ಹತ್ತಿರ ಐದು ತರಹದ ಧಾನ್ಯಗಳನ್ನು ಹಾಕಿಡುತ್ತಾರೆ. ಜೋಡಿಯಿಂದ ನೀರು ತುಂಬಿತಂದ ಐರಾಣಿಯನ್ನು ಜಗಲಿಯ ಹತ್ತಿರವಿಟ್ಟು ಅದರ ಮೇಲೆ ಮಗಿಯಲ್ಲಿ ದೀಪ ಹಚ್ಚಿಡುವರು.

ಕುಂಬಾರನ ಮನೆಗೆ ಬಾಜೆಯೊಂದಿಗೆ ಮರದಲ್ಲಿ ಸಾಹಿತ್ಯ ತೆಗೆದುಕೊಂಡು ಹೋದಂತೆ ಹೂಗಾರನ ಮನೆಗೂ ಹೋಗುತ್ತಾರೆ. ಐರಾಣಿ ತಂದವರೇ ಭಾಸಿಂಗ ತರಲು ಹೋಗುತ್ತಾರೆ. ಮರದಲ್ಲಿನ ಸಾಹಿತ್ಯವನ್ನು ತೆಗೆದುಕೊಂಡು ಭಾಸಿಂಗವನ್ನು ದಂಡೆ ಮತ್ತು ಐರಾಣಿ ತಂದ ಜೋಡಿಗೆ ಕುಂಕುಮ ಹಚ್ಚಿ, ಮರದಲ್ಲಿಟ್ಟು ಬಿಳಿಯ ಬಟ್ಟೆಯನ್ನು

ಮುಚ್ಚಿ ಕೊಡುವಳು. ಅದನ್ನು ಮನೆಗೆ ತೆಗೆದುಕೊಂಡು ಬಂದು ಜಗಲಿಯ ಮೇಲಿಡುತ್ತಾರೆ. ಈ ರೀತಿ ಭಾಸಿಂಗ, ದಂಡೆ ತರುವುದು ಹಳ್ಳಿಯಲ್ಲಿ ಮಾತ್ರ ಸ್ವಲ್ಪಮಟ್ಟಿಗೆ ಉಳಿದಿದೆ. ಈ ಪದ್ಧತಿ ಕಣ್ಮರೆಯಾಗಿ ನಗರದ ಅಂಗಡಿಗೆ ಹೋಗಿ ಭಾಸಿಂಗ ಮತ್ತು ಹಾರವನ್ನು ತೆಗೆದುಕೊಂಡು ಬರುತ್ತಲಿದ್ದಾರೆ.

**೪.೧೧.೧೦ ನೀರು ಹಾಕುವುದು :** ಲಗ್ನದಲ್ಲಿ ವಿಧಿ ಪೂರ್ವಕವಾಗಿ ಸ್ನಾನ ಮಾಡಿಸುವ ಸಂದರ್ಭ ಎರಡು ಸಲ ಬರುತ್ತದೆ. ಒಮ್ಮೆ ಅರಿಷಿಣ ಹಚ್ಚುವಾಗ ಇನ್ನೊಮ್ಮೆ ಅಕ್ಷತೆಯ ಕಾಲಕ್ಕೆ ಅರಿಷಿಣ ಹಚ್ಚುವಾಗ, ಸುರುಗಿ ಸುತ್ತಿ ನೀರು ಹಾಕುವಂತೆ, ಮದುವೆ ದಿವಸ ಮುಂಜಾನೆಯೂ ವರನಿಗೆ ಎಣ್ಣೆ ಎರದು ನೀರು ಹಾಕಿ ಅಕ್ಷತೆಯ ಬಟ್ಟೆಯನ್ನು ಉಡಿಸುವರು. ಮದುಮಗನ ಸೆಲ್ಯಾದಲ್ಲಿ ಸಾಲ್ಕು ಕಾಳು ಗೋಧಿ ಎರಡು ಗುಂಡು ಕೊಬ್ಬರಿ ಕಟ್ಟುತ್ತಾರೆ. ನಂತರ ಹೂಗಾರ ಮನೆಯಿಂದ ತಂದ ಎರಡು ಭಾಸಿಂಗವನ್ನು ವರನಿಗೆ ಕಟ್ಟುವರು. ನಂತರ ವಧುವಿಗೆ ನೀರು ಹಾಕಿ ಬಟ್ಟೆ ಉಡುಸಿ, ದಂಡೆ ಹಾಕಿದ ಮೇಲೆ ಐದು ಸೇರು ಗೋಧಿ, ಐದೈದು ಕೊಬ್ಬರಿ ಗುಂಡು, ಖಾರೀಖ, ಬದಾಮ, ಅಡಕಿ, ಅರಿಷಿಣಕೊಂಬು ಇಷ್ಟೆಲ್ಲ ಐದು ಮುತ್ತೈದೆಯರು ಉಡಕ್ಕಿ ಹಾಕುತ್ತಾರೆ. ಕಂಕಣ ಕಟ್ಟಿ ವರನ ಬಾಸಿಂಗದಲ್ಲಿ ಒಂದನ್ನು ಬಿಟ್ಟು ಮದುಮಗಳಿಗೆ ಕಟ್ಟುವರು. ಇಷ್ಟೊತ್ತಿಗೆ ಹೆಣ್ಣಿನ ಮನೆಯವರೆಲ್ಲ ಬಂದು ಗುಡಿ ಮೇಲೆ ಕುತಿರುವರು. ಅವನ್ನು ಬಾಜೆಯೊಂದಿಗೆ ಸನ್ಮಾನಸಮೇತ ಕರೆತಂದು ಬಿಡಿಕೆ ಮನೆಯಲ್ಲಿ ತಂಗಲು ವ್ಯವಸ್ಥೆ ಮಾಡುವರು.

**೪.೧೧.೧೧ ದೇವರ ಕಾರ್ಯ :** ಮುತ್ತಲ ಎಲೆಯಿಂದ ಹೂವಿನ ಮನೆ ತ್ರಿಕೋನಾಕಾರದಲ್ಲಿ ಮಾಡಿರುತ್ತಾರೆ. ಅದರೊಳಗೆ ಕೊಬ್ಬರಿಗುಂಡು, ಕುಪ್ಪಸ, ಖಾರೀಖ, ಬಾದಮ, ಅಡಿಕಿ, ಸವ್ವಾರೂಪಾಯಿ ಅದಲ್ಲಿಟ್ಟು ವರನ ತಾಯಿಯ ತಲೆಯ ಮೇಲೆ ಕೊಡುತ್ತಾರೆ. ಮಡಿವಾಳಗಿತ್ತಿ ಬಟ್ಟೆ ಹಾಸುತ್ತಾ ಹೋಗುವಳು. ಅದರ ಮೇಲೆ ಮದುಮಕ್ಕಳು ಹಾಗೂ ಅವರ ತಾಯಂದಿರು ನಡೆದುಕೊಂಡು ಬಾಜೆಯೊಂದಿಗೆ ಪೋಚಮ್ಮನ ಗುಡಿಗೆ ಹೋಗುತ್ತಾರೆ. ಹೂವಿನ ಮನೆ ಗುಡಿಯಲ್ಲಿಟ್ಟು ಹೂವಿನ ಮನೆಯಲ್ಲಿದ್ದದನ್ನು ಅಗಸಗಿತ್ತಿಗೆ ಕೊಡುವರು. ದೇವರರಿಗೆ ನಮಸ್ಕರಿಸಿ ಮನೆಗೆ ಬರುತ್ತಾರೆ.

**೪.೧೧.೧೨ ವಧುವರರನ್ನು ಹಂದರಕ್ಕೆ ಕರೆತರುವುದು :** ಹೆಣ್ಣಿನ ಕಡೆಯವರು ವಧುವಿಗೆ ಶಾಲನ್ನು ಹೊದಿಸಿಕೊಂಡು ಹಂದರಕ್ಕೆ ಕರೆತರುತ್ತಾರೆ. ವರನ ಕಡೆಯವರು ವರನನ್ನು ಕರೆತಂದು ಹಂದರದಲ್ಲಿ ಕೂಡಿಸುತ್ತಾರೆ. ಮದುಮಕ್ಕಳು ಐದು ಅಥವಾ ಒಂಬತ್ತು ಕರಿಮಣಿಗಳನ್ನು ಮಂಗಳಸೂತ್ರಕ್ಕೆ ಪೋಣಿಸುತ್ತಾರೆ. ಮದುಮಕ್ಕಳು ಪೋಣಿಸಿದ ನಂತರ ಉಳಿದ ಮಣಿಗಳು ಇಬ್ಬರು ಮುತ್ತೈದೆಯರು ಪೋಣಿಸುವರು. ಒಂದು ವೇಳೆ ವಧುವರರಲ್ಲಿ ಯಾರಾದರೂ ಚೊಚ್ಚಿಲವಾಗಿದ್ದರೆ, ಮಂಗಳಸೂತ್ರದ ಜೊತೆಗೆ ಬಂಗಾರದ ಹಾಗಲಕಾಯಿ ಮಾಡಿಸಿರುವುದನ್ನು ಪೋಣಿಸುವರು.

**೪.೧೧.೧೩ ಕಳಸ ಹೂಡುವುದು :** ಹಂದರದಲ್ಲಿ ಒಂದು ಚಾಪೆಯನ್ನು ಹಾಕಿ ಅದರ ಮೇಲೆ ಹೊಸ ಜಮಖಾನೆ ಹಾಸುವರು. ಅದರ ಮೇಲೆ ಐದು ತುಂಬಿದ ತಂಬಿಗೆಗಳನ್ನು ಇಡುತ್ತಾರೆ. ಲಗ್ನ ಕಾರ್ಯ ನೆರವೇರಿಸುವ ವ್ಯಕ್ತಿಗೆ ಐದು ಕೊಬ್ಬರಿ ಗುಂಡು, ಐದೈದು ಖಾರೀಖ, ಬದಾಮ, ಅಡಕಿ, ಸೇರಪಾವ ಅಕ್ಕಿ, ಹನ್ನೊಂದು ರೂಪಾಯಿ ಕೊಡುತ್ತಾರೆ. ಆ ಅಕ್ಕಿಯನ್ನು ಜಮಖಾನೆ ಮೇಲೆ ಹಾಕಿ, ಅದರ ಮೇಲೆ ನೀರು

ತುಂಬಿದ ಐದು ತಂಬಿಗೆಗಳನ್ನು ಇಟ್ಟು ತಂಬಿಗೆಗಳಿಗೆ ಹತ್ತು ಎಳೆ ದಾರವನ್ನು ಸುತ್ತಿ ಹಂದರದಲ್ಲಿ ಕಳಸ ಹೂಡುತ್ತಾರೆ.

**೪.೧೧.೧೪ ಮದುವೆ ಅಥವಾ ಅಕ್ಷತೆ :** ವಧುವರರಿಗೆ ದೇವರ ಜಗಲಿಯ ಹತ್ತಿರ ಕರೆದುಕೊಂಡು ಹೋಗಿ ಅಲ್ಲಿ ವರನಿಂದ ವಧುವಿಗೆ ಮಂಗಳಸೂತ್ರ ಕಟ್ಟಿಸಿ ಕಾಲುಂಗರ ತೊಡಿಸುವರು. ಜಗಲಿಯ ಹತ್ತಿರವೆ ಮದುಮಕ್ಕಳ ತಂದೆ ತಾಯಿ ಬಳಗದವರು ಅಕ್ಷತೆ ಹಾಕುತ್ತಾರೆ. ಕೊಬ್ಬರಿ ಗುಂಡಿನಲ್ಲಿ ಜೀರಿಗೆ ಬೆಲ್ಲ ಇಟ್ಟು ಅದರಲ್ಲಿದ್ದ ಜೀರಿಗೆ ಬೆಲ್ಲ ವರವಧು ಇಬ್ಬರು ಒಬ್ಬರ ತಲೆಗೆ ಒಬ್ಬರು ಹಚ್ಚುತ್ತಾರೆ. ಹಾಲು ತುಪ್ಪ ಕುಡಿಸುತ್ತಾರೆ. ಬಳಗದವರೆಲ್ಲರ ಅಕ್ಷತೆಯ ನಂತರ ಲಗ್ನ ಹಚ್ಚುವ ವ್ಯಕ್ತಿ ಮದುಮಕ್ಕಳಿಗೆ ಭೂರಜಗಲಿ ಅಥವಾ ಹಂದರಕ್ಕೆ ಕರೆತಂದು ಎರಡು ಮಣೆ ಹಾಕಿ ವರನ ಮುಖ ಪೂರ್ವಕ್ಕೆ ಮಧುವಿನ ಮುಖ ಪಶ್ಚಿಮಕ್ಕೆ ಇರುವಂತೆ ಎದುರು ಬದುರಾಗಿ ನಿಲ್ಲಿಸುತ್ತಾರೆ. ಲಗ್ನ ಕಾರ್ಯ ನೆರವೇರಿಸುವ ವ್ಯಕ್ತಿ ಮಂತ್ರವನ್ನು ಓದುತ್ತ ಐದು ಸಲ ವರ ವಧುವಿಗೆ ಒಬ್ಬರ ತಲೆಯ ಮೇಲೆ ಒಬ್ಬರು ಅಕ್ಷತೆ ಹಾಕಿದ ನಂತರ ಲಗ್ನಕ್ಕೆ ಬಂದ ಜನರೆಲ್ಲ ಅಕ್ಕತೆ ಹಾಕುತ್ತಾರೆ. ಅಕ್ಷತೆ ಬಿದ್ದ ತಕ್ಷಣ ಹಾಡು ಹೇಳುವರು.

**ಸ್ವಾಸಿ ಹಾಡು**

ಒಂದೇಳಿ ಸುತ್ತಳಗೆ ಗಗನಕ ಮುಟ್ಯಾವೆS ||
ಗಗನವ ಗದರಸಿ ಉದರೆಂಬ ವ್ಯಾಳೆದಲ್ಲಿS
ಬಿದ್ದಾವೆ ನಮಸ್ವಾಸ ||೧||

ಎರಡೆಳಿ ಸುತ್ತಳಗೆ ಗಗನಕ ಮುಟ್ಯಾವೆ
ಗಗನವ ಗದರಸಿ ಉದರೆಂಬ ವ್ಯಾಳೆದಲ್ಲಿS
ಬಿದ್ದಾವೆ ನಮಸ್ವಾಸ ||೨||

ಮೂರೆಳಿ ಸುತ್ತಳಗೆ ಗಗನಕ ಮುಟ್ಯಾವೆS ||
ಗಗನವ ಗದರಸಿ ಉದರೆಂಬ ವ್ಯಾಳೆದಲ್ಲಿS
ಬಿದ್ದಾವೆ ನಮಸ್ವಾಸ ||೩||

ನಾಲ್ಕೆಳಿ ಸುತ್ತಳಗೆ ಗಗನಕ ಮುಟ್ಯಾವೆS ||
ಗಗನವ ಗದರಸಿ ಉದರೆಂಬ ವ್ಯಾಳೆದಲ್ಲಿS
ಬಿದ್ದಾವೆ ನಮಸ್ವಾಸ ||೪||

ಐದೆಳಿ ಸುತ್ತಳಗೆ ಗಗನಕ ಮುಟ್ಯಾವೆS ||
ಗಗನವ ಗದರಸಿ ಉದರೆಂಬ ವ್ಯಾಳೆದಲ್ಲಿS
ಬಿದ್ದಾವೆ ನಮಸ್ವಾಸ ||೫||     ಹಾಡಿದವರು:ಹಣಮವ್ವ ಗಂಡ ಅರ್ಜುನ ಕಮತಾಣ

ಮೇಲಿನ ನುಡಿಯನ್ನೆ ಒಂದೆಳೆ, ಎರಡೆಳೆ ಈ ರೀತಿ ಐದರ ವರೆಗೆ ಹೇಳುವರು. ಸರಿಯಾದ ಸಮಯಕ್ಕೆ ಅಕ್ಷತೆ ಬಿದ್ದಿವೆ ಎಂಬುದು ಈ ಹಾಡಿನಲ್ಲಿದೆ. ಲಗ್ನದ ಮುಹೂರ್ತಕ್ಕೆ ಸರಿಯಾಗಿ ಲಗ್ನ ಹಚ್ಚುವರು. ಆದ್ದರಿಂದಲೇ ಈ ಹಾಡಿನ ಭಾವರ್ಥವು ಇದೆಯಾಗಿದೆ.

ಲಗ್ನದ ನಂತರ ಹುಡುಗಿಯ ಸೋದರಮಾವ ಧಾರೆ ಎರೆಯುವನು. ಅಲ್ಲಿ ನೆರೆದಂತಹ ಜನರೆಲ್ಲ ವಧುವರರಿಗೆ ಹೆಸರು ಕೇಳುವರು. ಮದುಮಕ್ಕಳು ಒಡಪು ಹಾಕಿ ಹೆಸರು ಹೇಳಬೇಕು. ವಧು ತನ್ನ ಗಂಡನ ಹೆಸರು ಹೇಳಬೇಕಾದರೆ ಆತನನ್ನು ಶ್ರೇಷ್ಠವಾಗಿ ವರ್ಣಿಸಿ ಹೀಗೆ ಹೇಳುವಳು.

ಮಾತು ಮೀರವರಲ್ಲ ನೀತಿ ತಪ್ಪದವರಲ್ಲ
ಮೋತಿ ನೋಡಿ ಮಳಾ ಹಾಕವರಲ್ಲ...
ಕಟ್ಟಿಮ್ಯಾಲ ಕರಾ ಉತತ್ತಿ ಸರಾ
ನನಗೂ ನಮ್ಮರಿಗೂ ಭಲೆವರಾ......

ಎಂದು ತನ್ನ ಗಂಡನ ಸದ್ಗುಣಗಳನ್ನು ಹೆಮ್ಮೆಯಿಂದ ಹೇಳಿಕೊಳ್ಳುವಳು. ಸದ್ಗುಣ, ಸದಾಚಾರ, ಒಳ್ಳೆಯ ನಡತೆಗೆ ಮಾತ್ರ ಬೆಲೆಯಿದೆ. ರೂಪಕ್ಕಲ್ಲ ಎಂದು ಇದರಲ್ಲಿನ ಅರ್ಥ. ಗಂಡಸು ಸಹ ಹೆಂಡತಿಯನ್ನು ಕುರಿತು ಹೇಳುವ ಒಡಪು ಹೀಗಿರುವವು.

ಮುಗಿನ್ಯಾಗ ನತ್ತ ಕೊಳ್ಳಾಗ ಮುತ್ತ
ನಮ್ಮಾಕಿ ಯಾವಾಗಲೂ ನನ್ನ ಸುತ್ತ......

ಮ್ಯಾಲಿಂದ ಮ್ಯಾಲೆ ಕೇಳದಿದ್ರ
ಸಾಲಾ ತಿರಗಾಂಗಿಲ್ಲ
ಆಗಿಂದಾಗ ಥಳಸದಿದ್ರ
ನಮ್ಮಾಕಿಗಿ ಬುದ್ಧಿ ಬರಾಂಗಿಲ್ಲ....

ಕಪಾಟಿನ್ಯಾಗ ಕುಂತು
ಕರಚಿಕಾಯಿ ತಿಂತಾಳ.....

ಮೇಲಿನ ಒಂದು ಒಡಪಿನಲ್ಲಿ ಸತಿಯ ಹೆಗ್ಗಳಿಕೆಯ ಬಾಯ್ತುಂಬ ಹೋಗಳಿದರೂ, ಕೆಳಗಿನ ಎರಡು ಒಡಪಿನಲ್ಲಿ ಆಕೆಯ ದೋಷಗಳನ್ನು ಹೇಳಲಾಗಿದೆ. ಈ ರೀತಿ ವಧುವರರು ಹೆಸರನ್ನು ಹೇಳುತ್ತಾರೆ. ಅನಂತರ ಮದುಮಕ್ಕಳಲ್ಲಿದ್ದ ನಾಚಿಕೆಯನ್ನು ಕಡಿಮೆಯಾಗಲೆಂದು ಸರಿ ಬೆಸಿ ಅಡಿಕೆ ಆಡಿಸುತ್ತಾರೆ. ಸರಿ ಬೆಸಿ ಆಡಿಸುವಾಗ ಒಬ್ಬರ ಮುಷ್ಠಿಯಲ್ಲಿದ್ದ ಅಡಕೆಯನ್ನು ಇನ್ನೊಬ್ಬರು ಬಿಡಿಸಬೇಕು. ವರ ಎಡಗೈ ಮಾತ್ರ ಉಪಯೋಗಿಸಬೇಕು. ವಧು ಎರಡು ಕೈಯನ್ನು ಉಪಯೋಗಿಸುವಳು. ಯಾರು ಬೇಗ ಮುಷ್ಠಿ ಬಿಡಿಸುತ್ತಾರೆಂದು ಅಲ್ಲಿದ್ದ ಜನರು ಬಾಕಾ ಚಕ್ಕತೆಯಿಂದ ನೋಡುತ್ತಾರೆ. ಸಂತೋಷ ಪಡುತ್ತಾರೆ. ಲಗ್ನಕ್ಕೆ ಬಂದ ಜನರೆಲ್ಲ ಊಟ ಮಾಡುವರು. ಮಧುಮಕ್ಕಳಿಗೆ ಮನೆಯೊಳಗೆ ಕರೆದುಕೊಂಡು ಹೋಗಿ ಒಂದೇ ತಟ್ಟೆಯಲ್ಲಿ ಊಟ ಮಾಡಿಸುವರು. ಊಟ ಮಾಡಿದ ತಟ್ಟೆ ವರನ ಮನೆಯವರಿಗೆ ಕೊಡುವರು. ಹೀಗೆ ಮಾಡುವ ಉದ್ದೇಶ ಅವರಲ್ಲಿಯ ನಾಚಿಕೆ ಕಡಿಮೆಯಾಗಿ, ಧೈರ್ಯ ಬರಲೆಂದು ಹಾಗೂ ಅವರಲ್ಲಿ ಬೇಗ ಸಾಮರಸ್ಯ ಬೆಳೆಯಲೆಂದು ಹಾಗೆ ಮಾಡುತ್ತಾರೆ.

೪.೧೧.೧೫ ಭೂಮದ ಕಾರ್ಯ : ಸಣ್ಣ ಮಕ್ಕಳು ಈ ಕಾರ್ಯ ನೋಡಬಾರದೆಂಬ ಉದ್ದೇಶದಿಂದ ರಾತ್ರಿ ಒಂಬತ್ತು ಇಲ್ಲವೆ ಹತ್ತು ಗಂಟೆಗೆ ಪ್ರಾರಂಭಿಸುತ್ತಾರೆ. ಹಂದರದಲ್ಲಿ ಈ ಕಾರ್ಯ ಮಾಡುವರು. ಒಂದು

ಬಿದಿರು ಬುಟ್ಟಿಯಲ್ಲಿ ಇಪ್ಪತ್ತೊಂದು ಎಣ್ಣೆ ಹೋಳಿಗೆ, ದಂಡೆ, ಒಂದು ಕೊಬ್ಬರಿ ಗುಂಡು, ಐದೈದು ಖಾರೀಖ, ಬಾದಮ, ಅಡಕಿ, ಒಂದು ಕುಪ್ಪಸ, ರೂ. ೧.೨೫ಪೈಸೆ ಇಷ್ಟೆಲ್ಲ ಒಳಗಿಟ್ಟು ಮೇಲೆ ಮೊರ ಮುಚ್ಚುವರು. ಅದರ ಮೇಲೆ ಹಿಟ್ಟಿನಿಂದ ಮಾಡಿದ ದೊಡ್ಡದೊಂದು ದೀಪ ಹಚ್ಚುವರು. ಆ ಮರವನ್ನು ಅವಟಿಗೆ ತೆಗೆದ ನಂತರ ವರ ವಧು ಕೈಗೆ ಬಂದಷ್ಟು ಐದು ಸಲ ಎಣ್ಣೆ ಹೋಳಿಗೆ ತೆಗೆಯುವರು.

ವಧುವರರು ತೆಗೆದ ಎಣ್ಣೆ ಹೋಳಿಗೆಯಲ್ಲಿ ಐದು ಮುತ್ತೈದೆಯರಿಗೆ ಒಂದೊಂದರಂತೆ ಉಡಿಯಲ್ಲಿ ಹಾಕುವರು. ಮುತ್ತೈದೆಯರು ಮನೆಗೆ ಹೋದ ಬಳಿಕ ವಧುವರರಿಗೆ ಜಗಲಿಯ ಹತ್ತಿರ ಕರೆದುಕೊಂಡು ಹೋಗಿ ನಮಸ್ಕರಿಸಲು ಹೇಳುವರು. ಅವಟಿಗೇರವನಿಗೆ ಐದು ಎಣ್ಣೆ ಹೋಳಿಗೆ ಮತ್ತು ಬಿದಿರು ಬುಟ್ಟಿಯಲ್ಲಿ ಇಟ್ಟ ಎಲ್ಲಾ ವಸ್ತುಗಳನ್ನು ಕೊಡುತ್ತಾರೆ. ಟೋಕ್ರೆ ಕೋಳಿಯವರಲ್ಲಿ ನೆಲದ ಭೂಮ, ಭೂಟ್ಟಿ ಭೂಮವೆಂದು ಎರಡು ಪ್ರಭೇದಗಳಿವೆ.

ನೆಲದ ಭೂಮದವರು ಹಂದರದಲ್ಲಿ ೨೧ ಎಣ್ಣೆ ಹೋಳಿಗೆ, ಅನ್ನ, ಐದೈದು ಖಾರೀಖ, ಬಾದಾಮ, ಅಡಿಕೆ, ಕೊಬ್ಬರಿ ಗುಂಡು ಎಲ್ಲವನ್ನು ಒಂದು ಬಟ್ಟೆಯ ಮೇಲೆ ಹಾಕಿ ಅದರ ಮೇಲೆ ಹೊಸ ಬಟ್ಟೆಯಿಂದ ಮುಚ್ಚುವರು. ಮದುಮಗನ ಮತ್ತು ಮದುಮಗಳ ಕಡೆಯವರು ಹಂದರದಲ್ಲಿ ಕೂಡುವರು. ಮದುಮಕ್ಕಳು ಅದನ್ನು ತೆರೆಯುವರು. ಐದು ಬಾರಿ ಕೈಗೆ ಬಂದಷ್ಟು ತೆಗೆದುಕೊಂಡು ಐದು ಜನ ಮುತ್ತೈದೆಯರಿಗೂ ಒಂದೊಂದು ಎಣ್ಣೆ ಹೋಳಿಗೆ ಅನ್ನ ಕೊಡುವರು. ನಂತರ ಅವಟಿಗೆರವನಿಗೆ ಅವನ ಮಾನದ ಎಲ್ಲಾ ಪದಾರ್ಥಗಳನ್ನು ಕೊಡುವರು. ಇದೇ ರೀತಿ ಬುಟ್ಟಿ ಭೂಮದವರು ಅವನ್ನೇ ಭೂಟ್ಟಿಯಲ್ಲಿ ಇಟ್ಟು ಮಾಡುವರು. ಈ ಸಂದರ್ಭದಲ್ಲಿ ಭೂಮದ ಹಾಡು ಹೀಗೆ ಹೇಳುವರು.

**ಭೂಮದ ಹಾಡು**

ಹಂದರದಾಗ ಛಂದs ಛಂದದೊಲಿಹೂಡಿ
ಗಂಧದ ಚೆಕ್ಕಿ ಪೂಟೂ ಮಾಡಿ |ಸೋ|

ಗಂದುವದ ಚೆಕ್ಕಿ ಪುಟಮಾಡಿ ಮದುಮಗನ
ಅಕ್ಕ ಮಾಡ್ಯಾಳೊಂದಡ್ಯಗೀಯ |ಸೋ|

ಹಂದರದಾಗ ಛಂದ್ಯ ಛಂದದೊಲಿ ಹೂಡಿ
ಕಪ್ಪುರದ ಚೆಕ್ಕಿ ಪುಟಮಾಡಿ |ಸೋ|

ಕಪ್ಪುರದ ಚೆಕ್ಕಿ ಪುಟಮಾಡಿ ಮದುಮಗನ
ತಾಯಿ ಮಾಡ್ಯಾಳೊಂದಡಗೀಯ |ಸೋ|

ಹಸನುಳ್ಳ ಕಣಕೀಗಿ ಬಿಸಿ ನೀರ ಛಳಿಕೊಟ್ಟು
ಎಸಳ ಯಾಲಕ್ಕಿ ಪುಡಿ ಬೆಲ್ಲs |ಸೋ|

ಎಸಳ ಯಾಲಕ್ಕಿ ಪುಡಿ ಬೆಲ್ಲs ಛೆಜ್ಜಕದ
ಬಿಸಿ ಹೋಳ್ಗಿ ಭೂಮಾಕ ಬರಬೇಕ |ಸೋ|

ಸಣ್ಣುಳ್ಳ ಕಣಕೀಗಿ ಥಣ್ಣೀರಾ ಛಳಿಕೊಟ್ಟು
ಸಣ್ಣ ಯಾಲಕ್ಕಿ ಪುಡಿ ಬೆಲ್ಲs |ಸೋ|

ಸಣ್ಣ ಯಾಲಕ್ಕಿ ಪುಡಿ ಬೆಲ್ಲs ಹುರಣದ
ಎಣ್ಹೊಳ್ಗಿ ಭೂಮಾಕ ಬರಬೇಕ |ಸೋ|

ಮದುಮಗನ ಭೂಮಾಕs ಮತ್ತ್ಯಾನು ಬರಬೇಕ
ಇಪ್ಪತ್ತೊಂದಡಕೀ ಬಿಳೀ ಎಲಿಯ | ಸೋ|

ಇಪ್ಪತ್ತೊಂದಡಕೀ ಬಿಳಿಯೆಲಿ ಕುಬಸಿನ ಗಳಿಗಿ
ಬಾಲನ ಭೂಮಾಕ ಬರ್‍ಯಬೇಕs |ಸೋ|

ಬನದಾಗ ಬಿತ್ತೂದು ಬನದಾಗ ಬೆಳೆಯೂದು
ಬನದಾಗ ಚಾಲೀ ಎರ್‍ಯಗೋದು |ಸೋ|

ಬನದಾಗ ಚಾಲೀ ಎರಗೂವ ಬಿದುರೀನ
ಬುಟ್ಟಿ ಭೂಮಾಕs ಬರ್‍ಯಬೇಕs |ಸೋ|

ಹಾಳಾಗ ಬಿತ್ತೂದು ಹಾಳಾಗ ಬೇಳವೂದು
ಹಾಳಾಗಿಂಬಾಗಿ ಇರ್‍ಯವೂದ |ಸೋ|

ಹಾಳಾಗಿಂಬಾಗಿ ಇರವೂವ ನಿಂಬೀಯ
ಹೋಳ ಭೂಮಾಕ ಬರಬೇಕ |ಸೋ|

ಮಡ್ಡ್ಯಾಗ ಬಿತ್ತೂದು ಮಡ್ಡ್ಯಾಗ ಬೆಳೆವೂದು|
ತಂದರ ಮನಿಗಿ ಬರವೂದು |ಸೋ|

ತಂದೂವರ ಮನಿಗಿ ಬರ್‍ಯವೂದ ಮುಕಣೀಯ
ಹಪ್ಪಳ ಭೂಮಾಕ ಬರ್‍ಯಬೇಕ |ಸೋ|

ಎರಿಯಾಗ ಬಿತ್ತೂದು ಎರಿಯಾಗ ಬೆಳವೂದು
ತಂದರ ಮನಿಗೀ ಬರ್‍ಯವೂದ |ಸೋ|

ತಂದೂವರ ಮನಿಗೀ ಬರ್‍ಯವೂದ ಕಡಲೀಯ
ಶಂಡಗಿ ಭಮಾಕ ಬರ್‍ಯಬೇಕ |ಸೋ|

ಮೆಂತಿಖಡ್ಡಿ ಹಾಕಿ ಅತ್ತೇ ತುಪ್ಪವಕಾಸ
ಇಪ್ಪತ್ತೊಂದೋಣಿ ಎಸೆದ್ಯಾವ |ಸೋ|

ಇಪ್ಪತ್ತೊಂದೋಣಿ ಎಸೆದಾವ ಈ ತುಪ್ಪಾ
ಬಾಲನ ಭೂಮಾಕ ಬರ್‍ಯಬೇಕ|ಸೋ|

ಶಾಂವೀಗಿ ಸೈದಾನ ಮಾವಿನುಪ್ಪಿನಕಾಯಿ
ಮ್ಯಾಲ ಕುರಡೀಯs ಇಡವ್ಯಾದ |ಸೋ|

ಮದುಮಗನ ಭೂಮಾಕ ಮತ್ತ್ಯಾರು ಬರಬೇಕ
ಅಪ್ಪಾದಾಗಪ್ಪಾ ಹಿರಿಯಪ್ಪಾ |ಸೋ|

ಅಪ್ಪಾದಾಗಪ್ಪಾ ಹಿರಿಯಪ್ಪಾ ತಾ ಬಂದು
ಮುಚ್ಚಿಟ್ಟ ಭೂಮಾ ತೆರ್‍ಯಸ್ಯಾನ |ಸೋ|

ಮದುಮಗನ ಭೂಮಾಕ ಮತ್ತ್ಯಾರು ಬರಬೇಕ
ಅವ್ವಾದಾಗವ್ವಾ ಹಿರಿಯವ್ವಾ |ಸೋ|

ಅವ್ವಾದಾಗ ಅವ್ವಾ ಹಿರಿಯವ್ವಾ ತಾ ಬಂದು
ಉಂಗ್ರಿಟ್ಟು ಭೂಮಾ ತೆರಸ್ಯಾಳ |ಸೋ|

ಯಾವಣ್ಣ ಸೋತಾನ ಯಾವಣ್ಣ ಗೆದ್ದಾನ
ಯಾವಣ್ಣ ನೀರಾ ಮುಗ್ಯದಾನ |ಸೋ|

ಭೀಮಣ್ಣ ಸೋತನಾ ಕಾಮಣ್ಣ ಗೆದ್ದಾನ
ನಮ್ಮಣ್ಣ ನೀರ ಮುಗ್ಯದಾನ |ಸೋ|

(ಹಾಡಿದವರು:ಸರುಬಾಯಿ ಮತ್ತು ವಿಮಲಾಬಾಯಿ ಜಮಾದಾರ)

ಈ ಹಾಡಿನಲ್ಲಿ ಭೂಮಕ್ಕೆ ಬೇಕಾದ ವಸ್ತುಗಳನ್ನು ಕುರಿತು ವರ್ಣನೆ ಮಾಡಲಾಗಿದೆ. ಹಾಡನ್ನು ಪೂರ್ಣವಾಗಿ ಅನುಬಂಧದಲ್ಲಿ ನೀಡಲಾಗಿದೆ. ನೆಲದ ಭೂಮಕ್ಕೂ ಭೂಟ್ಟಿ ಭೂಮಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಭೂಟ್ಟಿ ಭೂಮವು ಬುಟ್ಟಿಯಲ್ಲಿ ಎಲ್ಲಾ ಪದಾರ್ಥಗಳನ್ನು ಹಾಕಿ ಮರ ಮುಚ್ಚಿದರೆ, ನೆಲದ ಭೂಪಕ್ಕೆ ಹಂದರದಲ್ಲಿ ಬಟ್ಟೆ ಹಾಸಿ ಅದರ ಮೇಲೆ ೨೧ ಎಣ್ಣೆ ಹೋಳಿಗೆ, ಅನ್ನ, ಕುಪ್ಪಸ, ಕೊಬ್ಬರಿಗುಂಡು, ಎಲೆ, ಅಡಿಕೆ, ಬದಾಮ, ಖಾರೀಖ ಇತ್ಯಾದಿಗಳನ್ನು ಇಟ್ಟು ಮರ ಮುಚ್ಚುವರು. ಅದರ ಮೇಲೆ ದೀಪ ಹಚ್ಚಿಡುವರು. ಭೂಟ್ಟಿ ಭೂಮದ ರೀತಿಯಲ್ಲಿಯೇ ಇದು ಕೂಡ ಆಚರಿಸುವರು.

**೪.೧೧.೧೬ ಅಕ್ಷತೆಗೆ ನಮಸ್ಕರಿಸುವುದು :** ಮದುವೆಯ ಮಾರನೆಯ ದಿನ ಅಕ್ಷತೆಗೆ ನಮಸ್ಕರಿಸಲು ವಧುವರರಿಗೆ ಹಣಮಂತನ ಗುಡಿಗೆ ಕರೆದುಕೊಡು ಹೋಗುತ್ತಾರೆ. ಅಲ್ಲಿಂದ ಅವರಿಗೆ ಮನೆಗೆ ಕರೆತಂದು ಸೂರ್ಯನಿಗೆ ಐದು ಸಲ, ಅಕ್ಷತೆಗೆ ಐದು ಸಲ ನಮಸ್ಕರಿಸಲು ತಿಳಿಸುತ್ತಾರೆ. ಅದಕ್ಕೆ ಅಕ್ಷತೆಗೆ ನಮಸ್ಕರಿಸುವುದೆಂದು ಹೇಳುತ್ತಾರೆ.

**೪.೧೧.೧೭ ಬೀದಿ ಕಾರ್ಯ :** ಐದನೆಯ ದಿವಸಕ್ಕೆ ಬೀದಿ ದಿನವೆಂದು ಕರೆಯುತ್ತಾರೆ. ಐದು ಮಗಿಗಳನ್ನು ಇಟ್ಟು ಸುರುಗಿ ಸುತ್ತಿ ಮದುಮಕ್ಕಳಿಗೆ ಒಂದೇ ಸಲ ನೀರು ಹಾಕುತ್ತಾರೆ. ಹೊಸ ಬಟ್ಟೆಗಳನ್ನು ಉಡಿಸಿ ಉಡಕ್ಕಿ ಹಾಕಿ ಕುದುರೆಯ ಮೇಲೆ ಕೂಡಿಸಿಕೊಂಡು ಹನುಮಂತನ ದೇವಸ್ಥಾನಕ್ಕೆ ಕರೆದುಕೊಂಡು ಹೋಗುವರು. ಗುಡಿಯಿಂದ ಮದಮಕ್ಕಳು ಬರುವಷ್ಟರಲ್ಲಿ ಹಾಲಗುಂಜಿಗೆ ನೈವಿದ್ಯ ತೋರಿಸುತ್ತಾರೆ. ಅದನ್ನು ಮಡಿವಾಳಗಿತ್ತಿ ತೆಗೆದುಕೊಂಡು ಹೋಗುತ್ತಾಳೆ. ಆಮೇಲೆ ಮದುಮಕ್ಕಳನ್ನು ಹೊರಸಿನ ಮೇಲೆ ಕೂಡಿಸುವರು. ಐರಾಣಿ ಕೊಡದಲ್ಲಿ ಬಂಗಾರ ಬೆಳ್ಳಿಯ ಆಭರಣ ಹಾಕುತ್ತಾರೆ. ಅದರಲ್ಲಿನಿಂದ ಆಭರಣಗಳನ್ನು ತೆಗೆಯಲು ಮದುಮಕ್ಕಳಿಗೆ ಹಚ್ಚುವರು. ಅದರಲ್ಲಿ ಯಾರು ಹೆಚ್ಚಿಗೆ ತೆಗೆಯುತ್ತಾರೆಂದು ನಿರಿಕ್ಷಿಸುವರು.

೪.೧೧.೧೮ ಬಾಗಿಲು ಹಿಡಿಯುವುದು : ಮದುಮಕ್ಕಳಿಗೆ ದೇವರ ಮನೆಯೊಳಗೆ ಬಿಡಲಾರದೆ ತಡೆದು ಬಾಗಿಲು ಹಿಡಿಯುತ್ತಾರೆ. ಇದು ಮನೆಯ ಹೆಣ್ಣು ಮಕ್ಕಳಾದ ಮದುಮಗನ ಅಕ್ಕತಂಗಿಯರು ಬಾಗಿಲು ಹಿಡಿಯುತ್ತಾರೆ. ಅಂಥ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಈ ಹಾಡು ಹೇಳುವರು.

**ಬಾಗಿಲ ಹಿಡಿಯುವ ಹಾಡು**

ಆನೆಯ ನಾ ಕೊಡುವೆ ಆನೆಯ ಮರಿಕೊಡವೆ||
ಹಿಡಿದ ಬಾಗಿಲ ಬಿಡ್ಯತಂಗ್ಯಿ |ಸೋ
ಆನೆಯ ನಾವಲ್ಲ ಆನೆಯ ಮರಿವಲ್ಲ
ಹಿಡಿದ ಬಾಗಿಲ ಬಿಡಣೆಲ್ಲ |ಸೋ ||೧||

ಕುದುರೆಯ ನಾ ಕೊಡುವೆ ಕುದುರೆಯ ಮರಿ ಕೊಡುವೆ||
ಹಿಡಿದ ಬಾಗಲಿ ಬಿಡ್ಯತಂಗ್ಯಿ |ಸೋ
ಕುದುರೆ ನಾವಲ್ಲ ಕುದುರೆಯ ಮರಿವಲ್ಲ
ಹಿಡಿದ ಬಾಗಿಲ ಬಿಡಣೆಲ್ಲ |ಸೋ ||೨||

ಒಂಟೆಯ ನಾ ಕೊಡುವೆ ಒಂಟೆಯ ಮರಿ ಕೊಡುವೆ||
ಹಿಡಿದ ಬಾಗಲಿ ಬಿಡ್ಯತಂಗ್ಯಿ |ಸೋ
ಒಂಟೆಯ ನಾವಲ್ಲ ಒಂಟೆಯ ಮರಿವಲ್ಲ
ಹಿಡಿದ ಬಾಗಿಲ ಬಿಡಣೆಲ್ಲ |ಸೋ ||೩||

ಆಕಳ ನಾ ಕೊಡುವೆ ಆಕಳ ಕರ ಕೊಡುವೆ||
ಹಿಡಿದ ಬಾಗಿಲ ಬಿಡ್ಯತಂಗ್ಯಿ |ಸೋ
ಆಕಳ ನಾವಲ್ಲ ಆಕಳ ಕರವಲ್ಲ
ಹಿಡಿದ ಬಾಗಿಲ ಬಿಡಣೆಲ್ಲ |ಸೋ ||೪||

ಮಗಳಿಗಿ ನಾ ಹಡಿವೆ ಮಗಳಿ ನಾ ಕೊಡುವೆ||
ಹಿಡಿದ ಬಾಗಿಲ ಬಿಡ್ಯತಂಗ್ಯಿ |ಸೋ
ಮಗಳಿಗೆ ಹಡದರ ಮಗಳಿಗಿಗೆ ಕೊಟ್ಟರ
ಹಿಡಿದ ಬಾಗಿಲ ಬಿಡುವೆನ |ಸೋ ||೫||

(ಹಾಡಿದವರು:ಚಂದ್ರ ಭಾಗ ಮತ್ತು ಪಾರಮ್ಮ ಬುಧೇರಾ)

ಈ ಮೇಲಿನ ಹಾಡಿನಲ್ಲಿ ಆನೆ, ಕುದುರೆ, ಒಂಟೆ, ಆಕಳು ಮೊದಲಾದವುಗಳು ಕೊಡುತ್ತೆನೆಂದರೆ ಸೋದರಿಯರು ಬಾಗಿಲು ಬಿಡುವುದಿಲ್ಲ. ಆದರೆ ನಮ್ಮ ಮಗಳನ್ನ ನಿನ್ನ ಮಗನಿಗೆ ಕೊಡುತ್ತೆವೆಂದು ವರವಧುಗಳು ಹೇಳಿದರೆ ಅಕ್ಕ ತಂಗಿಯರು ಬಾಗಿಲು ಬಿಡುತ್ತಾರೆ. ಅನಂತರ ಇಬ್ಬರು ದೇವರ ಮನೆಯೊಳಗೆ ಹೋಗಿ ದೇವರಿಗೆ ನಮಸ್ಕರಿಸುವರು. ಈ ಮೇಲಿನ ಹಾಡಿನ ಅರ್ಥ ತಾಯಿ ತೀರಿದ ಮೇಲೆ ತವರು ಮನೆ ದೂರಾಗುತ್ತದೆ. ಆದ್ದರಿಂದ ಸಹೋದರರ ಮಕ್ಕಳಿಗೆ ಸಂಬಂಧ ಬೆಳೆಸಿದರೆ ತವರು ಮನೆಯ ಸಂಟು ಭದ್ರವಾಗಿ ಉಳಿಯಲು ಸಾಧ್ಯವೆಂದು ಈ ರೀತಿಯಲ್ಲಿ ವಚನ ತೆಗೆದುಕೊಳ್ಳುವರು.

**೪.೧೧.೧೯ ಸೋಬಾನ (ಪ್ರಸ್ತ) :** ಹಿಂದಿನ ಕಾಲದಲ್ಲಿ ಬಾಲ್ಯ ವಿವಾಹ ಪದ್ಧತಿ ಇದ್ದುದ್ದರಿಂದ ಹುಡುಗಿ ದೊಡ್ಡವಳಾದ ಮೇಲೆ ಪ್ರಸ್ತ ಮಾಡುತ್ತಿದ್ದರು. ಹುಡುಗಿ ದೊಡ್ಡವಳಾದರೆ ಹದಿನಾರು ದಿವಸ ಕೂಡಿಸಿ ಹಾಡಿ ಕೊನೆಯ ದಿವಸ ಬೀಗರಿಗೆ ಬರಲು ಹೇಳುತ್ತಿದ್ದರು. ಮಧ್ಯಾಹ್ನ ಊಟವಾದ ಮೇಲೆ ರಾತ್ರಿ ಹೊತ್ತಿಗೆ ಸೊಸೆ ಬರೆದು ಗಂಡನೊಂದಿಗೆ ಕೂಡಿಸಿ ಹೊದಿಕೆ ಮಾಡುತ್ತಿದ್ದರು. ಸೋಬಾನದ ಹಾಡು ಹೇಳುತ್ತಿದ್ದರು. ಅನಂತರವೇ ಅತ್ತೆಯ ಮನೆಗೆ ಕರೆದುಕೊಂಡು ಹೋಗುತ್ತಿದ್ದರು. ಕೆಲವರು ಬಾಲ್ಯವಿವಾಹವಾದಾಗಿನಿಂದ ಗಂಡನ ಮನೆಯಲ್ಲಿ ಇರುತ್ತಿದ್ದರು. ಅಂತವರ ಸೋಬಾನ ಗಂಡನ ಮನೆಯಲ್ಲಿ ಮಾಡುತ್ತಿದ್ದರು. ಪ್ರಸ್ತುತದಲ್ಲಿ ಮದುವೆಯ ದಿನವೆ ಸೋಬಾನ ಮಾಡುವುದು ಕಂಡು ಬರುವುದು. ಸೋಬಾನವು ಪ್ರಜನನಕ್ಕೆ ಅವಕಾಶ ಕಲ್ಪಿಸುತ್ತದೆ.

**೪.೧೨ ಸೀಮಂತ :** "ನಪುತ್ರಂ ಗತಿರ್ನಾಸ್ತಿ" ಮಗುವಿಲ್ಲದೆ ಮೋಕ್ಷವಿಲ್ಲ ಎಂಬ ಹೇಳಿಕೆಯಲ್ಲಿ ಮಗುವಿನ ಅನಿವಾರ್ಯತೆಯನ್ನು ಸೂಚಿಸುತ್ತದೆ. ಮಗು ಎರಡು ದಡ ಸೇರಿಸುವ ಸೇತುವೆ. ಗಂಡ ಹೆಂಡಿರ ಪ್ರೀತಿ ಹೆಚ್ಚಿಸುವ ಸಾಧನ. ಈ ಕುರಿತು ಜನಪದ ಸಾಹಿತ್ಯ, ನಂಬಿಕೆಗಳು ಹೇರಳವಾಗಿವೆ.

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದಂಗ| ಬಾಳೆಲೆಯ|
ಹಾಸುಂಡು ಬೀಸಿ ಒಗೆದಂಗ||

ಮೇಲಿನ ತ್ರಿಪದಿಯಿಂದ ಪ್ರತಿಯೊಂದು ಹೆಣ್ಣು ತಾಯಿಯಾದಗಲೇ ಆಕೆಗೆ ಒಂದು ಸ್ಥಾನಮಾನ. ಒಂದು ವೇಳೆ ಹೆಣ್ಣಿಗೆ ಮಕ್ಕಳಾಗದೇ ಹೋದರೆ ಬಾಳೆಲೆಯಲ್ಲಿ ಊಟ ಮಾಡಿ ಒಗೆದಂತೆ ಬಾಡಿಗೆಯ ಎತ್ತು ದುಡಿದಂತೆ ಆಕೆಯ ಸ್ಥಿತಿಯಾಗುವುದು. ಹೆಣ್ಣಿನ ಜೀವನದಲ್ಲಿ ಮಕ್ಕಳಾಗದೆ ಹೋದರೆ ಜೀವನ ವ್ಯರ್ಥ. ಬಂಜೆಯೆಂಬ ಪಟ್ಟ ಕಟ್ಟಿಕೊಳ್ಳಬೇಕು. ಹಿಂದಿನ ಜನರು ಗಂಡು ಮಕ್ಕಳಿದ್ದರೇ ಮಾತ್ರ ಮುಕ್ತಿ ಎಂದು ಹೇಳುತ್ತಿದ್ದರು. ಪ್ರಸ್ತುತದಲ್ಲಿ ಅದಕ್ಕೆ ಅಪವಾದವೆಂಬಂತೆ ಯಾವುದಾದರೂ ಒಂದು ಮಗುವಿದ್ದರೆ ಸಾಕು ಎಂದು ಹೇಳುತ್ತಿದ್ದಾರೆ.

ಒಂದು ಹೆಣ್ಣು ಮದುವೆಯಾದ ಮೇಲೆ ಆಕೆ ಬಸುರಿಯಾದ ಸುದ್ದಿ ತಂದೆ ತಾಯಿ ಬಂಧು ಬಳಗದವರಿಗೆಲ್ಲ ಗೊತ್ತಾದರೆ ಬಹಳ ಸಂತೋಷವಾಗುತ್ತಾರೆ. ಈ ಸಂದರ್ಭದಲ್ಲಿ ಆಚರಿಸುವ ಸಂಪ್ರದಾಯ, ನಂಬಿಕೆಗಳು ಆಯಾ ಸಮುದಾಯದ ಸಂಸ್ಕೃತಿಯನ್ನು ಅವಲಂಬಿಸುವುದು.

**೪.೧೨.೧ ಕಳ್ಳ ಕುಪ್ಪಸ :** ಕಳ್ಳ ಕುಪ್ಪಸ ಎಂಬ ಪದ ಮರಾಠಿಯ ಚೋರ ಚೋಳಿಯಿಂದ ಬಂದದು. ಟೋಕ್ರೆ ಕೋಳಿಯವರಲ್ಲಿ ಹೆಣ್ಣು ಚೊಚ್ಚಲ ಗರ್ಭಿಣಿಯಾದರೆ ತವರು ಮನೆಯವರಿಗೆ ತಿಳಿಸುವರು. ಗರ್ಭಧಾರಣೆಯ ಮೂರು ತಿಂಗಳು ಮುಗಿದ ನಂತರ ಗರ್ಭಧರಿಸಿದು ಖಚಿತವಾದ ನಂತರ ತವರಿನವರು ಬಂದು ಯಾರಿಗೆ ಗೊತ್ತಾಗದಂತೆ ಸರಳವಾದ ರೀತಿಯಲ್ಲಿ ಈ ಕಾರ್ಯ ಮುಗಿಸುತ್ತಾರೆ. ಕಳ್ಳ ಕುಪ್ಪಸ ಮಾಡಬೇಕಾದರೆ ೯ ಹಸಿರು ಬಳೆ, ಹಸಿರು ಕುಪ್ಪಸ ಹೊಲಿಸಿ ಗರ್ಭಿಣಿ ಮೈಯಲ್ಲಿ ಹಾಕುವರು. ಉಡಿಯಲ್ಲಿ ಐದು ಅಥವಾ ೯ ವಿಧದ ಹಣ್ಣು ಹಾಕುವರು. ಹಸಿರು ಸಮೃದ್ಧಿಯ ಸಂಕೇತ. ಹಣ್ಣು ಫಲವಂತಿಕೆಯ ಸಂಕೇತವೆಂದು ಹಣ್ಣು ಮತ್ತು ಹಸಿರನ್ನು ಈ ಕಾರ್ಯಕ್ಕೆ ಬಳಸುವರು.

೪.೧೨.೨ ಬಯಕೆ : ಹೆಣ್ಣು ಗರ್ಭಧರಿಸಿದ ಐದನೆಯ ತಿಂಗಳಲ್ಲಿ ಆಕೆಗೆ ಬಯಕೆ ಊಟ ತವರಿನವರು ತರುತ್ತಾರೆ. ಅವರಲ್ಲಿ ಈ ಸಂಪ್ರದಾಯ ಇಲ್ಲದಿದ್ದರೆ ಸಂಬಂಧಿಕರು ಯಾರಾದರು ತರುತ್ತಾರೆ. ಗರ್ಭಿಣಿಯ ಬಯಕೆಯನ್ನು ತೀರಿಸಲು ಸಿಹಿ, ಖಾರದ ಎಲ್ಲಾ ತರಹದ ಅಡಿಗೆಯನ್ನು ಮಾಡಿಕೊಂಡು ಬರುತ್ತಾರೆ. ತವರಿನವರು ತಂದ ಅಡಿಗೆಯ ಗಂಟಿಗೆ ಐದು ಜನ ಮುತ್ತೈದೆಯರು ಅರಿಷಿಣ ಕುಂಕುಮದಿಂದ ಪೂಜೆ ಮಾಡಿ ಅದನ್ನು ಬಿಡುವರು. ಆ ಐದು ಜನ ಮುತ್ತೈದೆಯರಿಗೆ ಎಲ್ಲಾ ಅಡಿಗೆಯನ್ನನು ಸ್ವಲ್ಪ ಸ್ವಲ್ಪ ಅವರಿಗೆ ಕುಂಕುಮ ಹಚ್ಚಿ ಉಡಿಯಲ್ಲಿ ಕೊಡುವರು. ಹಾಗೆಯೇ ಒಂದು ತಟ್ಟೆಯಲ್ಲಿ ಎಲ್ಲಾ ತರದ ಅಡಿಗೆಯನ್ನು ಸ್ವಲ್ಪ ಸ್ವಲ್ಪ ಹಚ್ಚಿ ಗರ್ಭಿಣಿಗೆ ಊಟಕ್ಕೆ ಕೊಡುವರು. ಮನೆಯವರೆಲ್ಲ ಊಟ ಮಾಡಿದ ನಂತರ ತಮ್ಮ ಓಣಿಯಲ್ಲಿ ಬೇಕಾದ ಮನೆಗಳಿಗೆ ಹಂಚುತ್ತಾರೆ. ಬಯಕೆ ಆಡಿಗೆ ತಂದವರಿಗೆ ಬಟ್ಟೆ ಮಾಡುವರು.

ಬಸುರಿಯ ಬಯಕೆ ತೀರದಿದ್ದರೆ ಆಕೆಗೆ ಹುಟ್ಟಿದ ಮಗುವಿನ ಕಿವಿ ಸೋರುವದೆಂಬ ನಂಬಿಕೆ ಇವರಲ್ಲಿದೆ. ಆದ್ದರಿಂದಲೇ ಗರ್ಭಿಣಿ ಬಯಸಿದ ಅಡಿಗೆ ಮಾಡಿಕೊಡುವರು. ವಿಭಕ್ತ ಕುಟುಂಬದ ಗಂಡನ ಮನೆಯಲ್ಲಿ ಬಯಸಿದ ಅಡಿಗೆ ಮಾಡಿ ಊಟ ಮಾಡುವ ಸ್ವಾತಂತ್ರ್ಯ ಕಡಿಮೆ. ಮದುವೆಯ ಹೊಸದರಲ್ಲಿ ಅಂತಹ ಧೈರ್ಯ ಕೂಡ ಗರ್ಭಿಣಿಗೆ ಇರುವುದಿಲ್ಲ. ಬಯಕೆ ಊಟದಲ್ಲಿ ಎಲ್ಲಾ ರೀತಿಯ ಪದಾರ್ಥಗಳಿರುವುದರಿಂದ ಅದನ್ನು ಊಟ ಮಾಡಿದರೆ ಮಗುವಿಗೆ ಎಲ್ಲ ವಿಧದ ಪ್ರೋಟಿನ್ ಸಿಗುವುದರಿಂದ ಮಗು ಚೆನ್ನಾಗಿ ಬೆಳೆಯುವುದಕ್ಕೆ ಸಾಧ್ಯತೆಯಿದೆ. ಆದುದರಿಂದಲೇ ಹಿಂದಿನ ಜನ ಬಯಕೆ ಊಟ ಮಾಡುವ ಸಂಪ್ರದಾಯ ಬಳಕೆಗೆ ತಂದಿರಬೇಕು. ಯಾವುದಾದರೂ ಒಂದು ಆಚರಣೆ ರೂಢಿಯಲ್ಲಿರಬೇಕಾದರೆ ಅದರ ಹಿಂದೆ ಒಂದು ವೈಜ್ಞಾನಿಕ ಕಾರಣವಿರುತ್ತದೆ.

೪.೧೨.೩ ಕುಪ್ಪಸ : ಬಯಕೆ ಊಟದ ನಂತರ ತವರಿನವರು ಐದನೆಯ ಅಥವಾ ಒಂಬತ್ತನೆಯ ತಿಂಗಳಲ್ಲಿ ಈ ಕಾರ್ಯ ಮಾಡುತ್ತಾರೆ. ಈ ಕಾರ್ಯಕ್ಕೆ ತಗಲುವ ಖರ್ಚು ತವರಿನದಾಗಿರುತ್ತದೆ. ತವರೂರಿನಿಂದ ತನಗೆ ಬೇಕಾದ ಬಹಳಷ್ಟು ಜನರನ್ನು ಕರೆದುಕೊಂಡು ಬರುತ್ತಾರೆ. ಬಂಧು ಬಳಗದವರೆಲ್ಲ ಬಂದು ಊಟ ಮುಗಿದ ಅನಂತರ ಸಾಯಂಕಾಲ ಕುಪ್ಪಸ ಕಾರ್ಯ ಮಾಡುತ್ತಾರೆ.

ತವರು ಮನೆಯವರು ಬೀಗ, ಬೀಗತಿ, ಅಳಿಯ ಮಗಳಿಗೆ ಬಟ್ಟೆ ತರುತ್ತಾರೆ. ಬೀಗರಿಗೆ ಬಟ್ಟೆ ಮಾಡಿದ ನಂತರ ಅಳಿಯ ಮಗಳಿಗೆ  ಮಾಡುತ್ತಾರೆ. ಅಂದು ಮಗಳಿಗೆ ಹಸಿರು ಕುಪ್ಪಸ, ಸೀರೆ,ಬಳೆ ಹಾಕುವರು. ಅಳಿಯನಿಗೆ ಹೂವಿನ ಹಾರ, ಕೈಯಲ್ಲಿ ತುರಾಯಿ ಕೊಡುತ್ತಾರೆ. ಮಗಳಿಗೆ ನೆನೆದಂಡೆ ಹಾಕುತ್ತಾರೆ. ಬಾಜೆಯೊಂದಿಗೆ ಈ ಕಾರ್ಯ ನೇರವೇರುತ್ತದೆ. ಹಸಿರು ಫಲವತ್ತತೆಯ ಸಮೃದ್ಧಿಯ ಸಂಕೇತವೆಂದು ಹಸಿರಾದದ್ದೇ ಅಂದು ಬಸುರಿಗೆ ಹಾಕುವರು. ಉಡಿಯಲ್ಲಿ ಹಣ್ಣು, ತೆಂಗು, ಉಡಿಯಕ್ಕಿ ಹಾಕಿ ಉಡಿ ತುಂಬುತ್ತಾರೆ. ನಂತರ ಆಕೆ ಬಯಸಿದ ಪದಾರ್ಥಗಳನ್ನು ಹಣ್ಣುಗಳನ್ನು ಕುರಿತು ಹಾಡು ಹೇಳುತ್ತಾರೆ.

**೧.ಕುಬಸ(ಕುಪ್ಪಸ)ದ ಹಾಡು**

ಕಾಯಿಬೇಕು ಕಾಯಿ ಬೇಕ್ಸ ಯಾತಾರ್‍ಯ ಕಾಯಿಬೇಕ|
ಬಾಳೆಯ ಐದು ಗೊನೆಯ ಬೇಕ್ಸ | ಸೋಬಾನ್ನೆ
ಬಾಳೆಯದ್ಯೆದು ಗೊನೆಬೇಕ

ನನ ಗಂಗಮ್ಮಗ |ಬಾಲ್ಯಾರ ಬಂದ
ಉಡಿಯ ತುಂಬಲಿ ಬೇಕs | ಸೋ ||೧||

ಕಾಯಿ ಬೇಕ ಕಾಯಿ ಬೇಕ ಯಾತಾರs ಕಾಯಿಬೇಕ
ಮಾವಿನದ್ದೈದು ಗೊನೆಯ ಬೇಕs |ಸೋ
ಮಾವಿನದ್ದೈದು ಗೊನೆ ಬೇಕ
ನನ ಗಂಗಮ್ಮಗ | ಬಾಲ್ಯಾರ ಬಂದ
ಉಡಿಯ ತುಂಬಲಿ ಬೇಕs | ಸೋ ||೨||

ಕಾಯಿಬೇಕ ಕಾಯಿ ಬೇಕs ಯಾತಾರs ಕಾಯಿ ಬೇಕ
ತೆಂಗಿನದ್ದೈದು ಗೊನೆಯ ಬೇಕs |ಸೋ
ತೆಂಗಿನದ್ದೈದು ಗೊನೆಯ ಬೇಕs
ನನ ಗಂಗಮ್ಮಗ| ಮಿತ್ರೆ ಬಂದ
ಉಡಿಯ ತುಂಬಲಿ ಬೇಕs |ಸೋ ||೩||

ಕಾಯಿ ಬೇಕ ಕಾಯಿ ಬೇಕs ಯಾತಾರs ಕಾಯಿ ಬೇಕ
ಬಾದಾಮದ್ದೈದು ಗೊನಿಯ ಬೇಕs |ಸೋ
ಬಾದಾಮದ್ದೈದು ಗೊನಿ ಬೇಕs
ನನ ಗಂಗಮ್ಮ| ಮುತ್ತೈದೆಯ ಬಂದ
ಉಡಿಯ ತುಂಬಲಿ ಬೇಕs |ಸೋ ||೪||

ಕಾಯಿ ಬೇಕ ಕಾಯಿ ಬೇಕ ಯಾತರ ಕಾಯಿಬೇಕ
ಖಾರೀಕದ್ದೈದು ಗೊನೆಯ ಬೇಕs |ಸೋ
ಖಾರೀಕದ್ದೈದು ಗೊನಿಬೇಕs
ನನ ಗಂಗಮ್ಮಗ| ಅತ್ತಿಗೆ ಬಂದ
ಉಡಿಯ ತುಂಬಲಿ ಬೇಕ |ಸೋ ||೫||

ಹಾಡಿದವರು: ಶಿವಮ್ಮ ಮಾಣಿಕಪ್ಪ ಜಮಾದಾರ

ಕಾಯಿಬೇಕು, ಯಾವ ಕಾಯಿಯನ್ನು ಉಡಿಯಲ್ಲಿ ಹಾಕಬೇಕು. ಅದು ಎಷ್ಟು ಕಾಯಿ ಹಾಕಬೇಕು ಎನ್ನುವುದೆಲ್ಲ ಈ ಹಾಡಿನಲ್ಲಿ ಹೇಳಲಾಗಿದೆ. ಇದೇ ಸಂದರ್ಭದಲ್ಲಿ ಹೇಳುವ ಇನ್ನೊಂದು ಹಾಡು ಈ ಕೆಳಗಿನಂತಿದೆ.

೨.ಕುಪ್ಪಸದ ಹಾಡು

ಒಂದಂಬು ತಿಂಗಳಿಗಿ ಒಂದೇನ ಬಗಸ್ಯಾಳ
ಅಂಗೈಯಲುಪ್ಪಾ ಎಳೆ ಹುಣಿಸಿ ||೧||

ಎರಡಂಬು ತಿಂಗಳಿಗಿ ಎರಡೇನ ಬಗಸ್ಯಾಳ
ಎರಡೆಲಿಗೊಂಡ ಎಳಿಮಾವು ||೨||

ಮೂರಂಬು ತಿಂಗಳಿಗೆ ಮೂರೇನ ಬಗಸ್ಯಾಳ
ಮೂಡ್ಯಲ ದಿಕ್ಕಿನ ಮಗಿಮಾವ ||೩||

ನಾಕಂಬು ತಿಂಗಳಿಗೆ ನಾಕೇನ ಬಯಸ್ಯಾಳ
ಕಾಕೀಯ ಹಣ್ಣು ಕೈತುಂಬಾ ||೪||

ಐದಂಬು ತಿಂಗಳಿಗಿ ಐದೇನ ಬಯಸ್ಯಾಳ
ಕೊಯ್ದ ಮಲ್ಲಿಗಿ ನನಿದಂಡಿ ||೫||

ಆರೆಂಬು ತಿಂಗಳಿಗಿ ಆರೇನ ಬಯಸ್ಯಾಳ
ಹಾರಕಿನ ಬಾನ ಕೆನಿಮಸರ ||೬||

ಏಳಂಬು ತಿಂಗಳಿಗೆ ಏಳೇನ ಬಯಸ್ಯಾಳ
ಹೇಳಿ ಕಳುವ್ಯಾಳ ತವರಿಗಿ ||೭||

ಎಂಟಂಬು ತಿಂಗಳಿಗಿ ಎಂಟೇನ ಬಯಸ್ಯಾಳ
ಕಂಟಲ್ಯಾಲಕ್ಕಿ ಕೊಡ ತುಪ್ಪ ||೮||

ಒಂಬತ್ತು ತಿಂಗಳಿಗಿ ತುಂಬ್ಯಾವ ನವಮಾಸ
ಸಂದು ಸಂದೆಲ್ಲ ಕಿರಿಬ್ಯಾನಿ ||೯||

ವಾಳ್ಯ ವ್ಯಾಳ್ಯಕ್ಕೆ ಬ್ಯಾನಿ ತಾಳ ಬಾರಿಸಿದಂಗ
ತಾಳಲಾರನೆ ನಿಲ್ಲಲಾರೆ ನವ್ವಾ ತಾಯವವ್ವನಿರಬೇಕ ಜನ್ಮಕ ||೧೦||

ಹೊತ್ತು ಹೊತ್ತಲೆ ಬ್ಯಾನಿ ಕತ್ತೀಲಿ ಕಡದಂಗ
ಹೆತ್ತವ್ವನಿರಬೇಕ ಜನ್ಮಕ ||೧೧||

ಹತ್ತಂಬು ತಿಂಗಳಿಗಿ ಹೆತ್ತಾಳ ಹಸಗೂಸ
ಸುತ್ತೇಲ್ಲಾ ನೆರದಾರ ಸುಮಂಗಲೆಯರು. ||೧೨||

ಹಾಡಿದವರು:ಶಿವಮ್ಮ ಮಾಣಿಕಪ್ಪ ಜಮಾದಾರ

ಈ ಹಾಡಿನಲ್ಲಿ ಬಸುರಿಯು ಬಯಸಿದ ಎಳೆ ಹುಣುಸಿ, ಮಾಗಿಯ ಮಾವ ಕೆನೆಮೊಸರು ಮೊದಲಾದ ಪದಾರ್ಥಗಳನ್ನು ಹೇಳುತ್ತಾ ಹಾಡುವರು. ಅನುಬಂಧ ನೋಡಿ ಈ ಸಂದರ್ಭದಲ್ಲಿ ಮುತ್ತೈದೆಯರು ವಿವಿಧ ಹಾಡುಗಳನ್ನು ಹೇಳಿ ಆರತಿ ಎತ್ತುವರು. ಆಕೆಯನನ್ನು ತವರಿನವರು ಕರೆದುಕೊಂಡು ಹೋಗುತ್ತಾರೆ.

ಈ ಕುಪ್ಪಸ ಮಾಡುವಾಗ ಆಕೆಯ ಉಡಿಯಲ್ಲಿ ಅತ್ತಿಕಾಯಿಯ ಸರ ಮಾಡಿ ಹಾಕುವರು. ಹಾಗೆ ದೊಡ್ಡ ಗೋಧಿಯನ್ನು ನೆನೆಯಾ ಹಾಕಿ ಅದರಿಂದ ಸರ ಮಾಡಿ ಕೊರಳಲ್ಲಿ ಹಾಕುವರು. ಅತ್ತಿ ಕಾಯಿಯು ಮರ ಹಾಲು ಹಾಗೂ ಹಣ್ಣು ಕೊಡುವಂಥದು. ಅದೇ ರೀತಿ ಆಕೆಯೂ ಕೂಡ ಸರಿಯಾದ ಮಗುಹೆತ್ತು ಆಕೆಯಲ್ಲಿ ಒಳ್ಳೆಯ ರೀತಿಯಲ್ಲಿ ಹಾಲಿರಲ್ಲೆಂದು ಈ ರೀತಿ ಮಾಡಿರಬೇಕು. ದೊಡ್ಡ ಗೋಧಿ ಸರ ಮಾಡಿ ಕೊರಳಿಗೆ ಹಾಕುವುದರಲ್ಲಿ ಮುಂದೆ ಹುಟ್ಟುವ ಮಗು ಶ್ರೇಷ್ಠವಾಗಿ ಇರಲಿ, ದೊಡ್ಡ ಗೋಧಿಗೆ ಹೆಸರು ಪಡೆದಂತೆ ಆತನು ಪಡೆಯಲೆಂಬ

ನಂಬಿಕೆ ಅವರಿಗಿರಬಹುದು. ಕುಪ್ಪಸ ತೊಡಿಸುವುದರಿಂದ ಬಸುರಿಯಾದವಳು ಸದಾ ಸುಖದಿಂದರಲ್ಲೆಂದು ಈ ಸಂಪ್ರದಾಯ ಮಾಡಿರಬೇಕು. ಆಕೆ ಸಂತೋಷ ಸುಖದಿಂದಿದ್ದರೆ ಹೊಟ್ಟೆಯಲ್ಲಿ ಬೆಳೆಯುವ ಮಗು ಕೂಡ ಚೆನ್ನಾಗಿ ಬೆಳೆದು ಆರಾಮಾಗಿರುವುದು. ಆದ್ದರಿಂದಲೆ ಗರ್ಭಧರಿಸಿದ ಮೂರು ತಿಂಗಳಿಂದ ಒಂಬತ್ತು ತಿಂಗಳವರೆಗೆ ಮೂರು ಕಾರ್ಯವಾಗಿ, ತವರು ಮನೆಯವರು ಕರೆದುಕೊಂಡು ಹೋಗುವರು. ತವರಿನಲ್ಲಿ ಬಸುರಿ ಯಾವ ಚಿಂತೆ ಇರಲಾರದೆ ಆರಾಮಾಗಿರಲು ಸಾಧ್ಯ ಆದರಿಂದಲೇ ಬಾಣಂತನ ಎರಡು ತಿಂಗಳಿರುವಾಗಲೇ ಆಕೆಯನ್ನು ಕರೆದೊಯ್ಯುವರು.

ಚೊಚ್ಚಲು ಹೆರಿಗೆ ತವರುಮನೆಯವರೇ ಮಾಡಬೇಕೆಂಬ ಸಂಪ್ರದಾಯ ಇವರಲ್ಲಿದೆ. ಎಂಟು ತಿಂಗಳ ಮುಗಿದ ನಂತರ ಅಥವಾ ಏಳು ತಿಂಗಳಲ್ಲಿ ಆಕೆಯನ್ನು ಕರೆದೊಯುವರು. ಆಕೆಯನ್ನು ತವರಿನವರು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾರೆ. ಏಳೆಂಟು ತಿಂಗಳು ಕಷ್ಟವೋ ಸುಖವೋ ಅನುಭವಿಸಿದ ಗರ್ಭಿಣಿಗೆ ಹೆರಿಗೆಯ ಸಮಯದಲ್ಲಾದರೂ ತಂದೆ ತಾಯಿಯ ಪ್ರೀತಿಯಲ್ಲಿ ಸುಖವಾಗಿದ್ದರೆ ಗರ್ಭದಲ್ಲಿರುವ ಮಗು ಆರೋಗ್ಯಕರವಾಗಿರುತ್ತದೆ. ಎಂಬ ನಂಬಿಕೆಯುಂಟು. ಹೆರಿಗೆಯ ನಂತರವೂ ಆಕೆಯ ಆರೋಗ್ಯ ಚೆನ್ನಾಗಿರಲು ಎಚ್ಚರಿಕೆ ವಹಿಸುವರು. ಪ್ರತಿಯೊಂದು ಸಂಪ್ರದಾಯವೂ ನಂಬಿಕೆಯ ಆಧಾರದ ಮೇಲೆ ಹುಟ್ಟಿದರೂ, ಕೆಲವೂ ಸಂದರ್ಭಗಳಲ್ಲಿ ಅದಕ್ಕೆ ವೈಜ್ಞಾನಿಕ ಕಾರಣವಿರುತ್ತದೆ.

೪.೧೩ ಬಾಣಂತನ : ಗರ್ಭಿಣಿಯಾದವಳು ಹೆರಿಗೆಯ ಬೇನೆಯಿಂದ ನರಳುತ್ತಿದ್ದರೆ ಸೂಲಗಿತ್ತಿಯನ್ನು ಬರಲು ಹೇಳುತ್ತಾರೆ. ಅವಳು ಬಂದು ಹೆರಿಗೆ ಮಾಡಿಸುತ್ತಾರೆ. ಕತ್ತರಿಸಿದ ಮಗುವಿನ ಹೊಕ್ಕಳ ಬಳ್ಳಿಯ ಮಾಸನ್ನು ಒಂದು ಹೊಸ ಕಳ್ಳಿಯಲ್ಲಿ ಹಾಕಿ ಬಚ್ಚಲ ಹತ್ತಿರ ಅಥವಾ ಅಂಗಳದಲ್ಲಿ ಹುಗಿಯುವರು. ಬಾಣಂತಿ ಮತ್ತು ಮಗುವಿಗೆ ಐದು ದಿವಸದವರೆಗೆ ಸುಲಗಿತ್ತಿಯೇ ನೀರು ಹಾಕುತ್ತಾಳೆ. ಒಂದು ವೇಳೆ ಮಗು ಕೊರಳಿಗೆ ಹೊಕ್ಕಳ ಬಳ್ಳಿ ಹುರಿ ಹಾಕಿಕೊಂಡು ಬಂದರೆ ಸುಲಗಿತ್ತಿಯ ಬಾಯಲ್ಲಿ ಬಂಗಾರ ಕೊಟ್ಟು ಅದನ್ನು ಕತ್ತರಿಸುತ್ತಾರೆ. ಇದು ಜಡವಿದೆ. ದೂರವಾಗಲೆಂದು ಹಾಗೆ ಮಾಡುವರು. ಸೂಲಗಿತ್ತಿಗೆ ಸೀರೆ ಕೊಡುವರು. ಅಗಸಗಿತ್ತಿಗೆ ಗಂಡಾಗಿದ್ದಾರೆ ೧೦ ಅಡ್ಡಿ (೪ಂಕೆಜಿ) ಜೋಳ, ಹೆಣ್ಣಾಗಿದ್ದರೆ ಹತ್ತು ಸೇರು ಜೋಳವನ್ನು ಕೃತಜ್ಞತೆಗಾಗಿ ಕೊಡುತ್ತಾರೆ. ಬಾಣಂತಿ ಮತ್ತು ಮಗುವಿಗೆ ಸ್ನಾನ ಮಾಡಿಸಿ ಹೊರಸಿನ ಮೇಲೆ ಮಲಗಿಸುವರು. ಆಕೆಯ ಹತ್ತಿರ ಕಬ್ಬಿಣದ ವಸ್ತುಗಳ ಕೂಡುಗೋಲನ್ನು ಇಟ್ಟಿರುತ್ತಾರೆ. ಆಕೆಗೆ ಕಂಬಳಿಯನ್ನು ಹಾಸುತ್ತಾರೆ. ಕಬ್ಬಿಣದ ವಸ್ತು, ಜವೆ ಹಾಗೂ ಕಂಬಳಿ ಇರುವುದರಿಂದ ದೆವ್ವ ಆಕೆಯ ಹತ್ತಿರ ಸುಳಿಯುವುದಿಲ್ಲವೆಂದು ಹೇಳುವರು. ಬಾಣಂತಿಗೆ ಮೊದಲ ದಿನದಿಂದ ಸವ್ವಾ ತಿಂಗಳ ವರೆಗೆ ಎರಡು ಸಲ ಬೆಂಕಿ ಅಗಟಿಗೆಯನ್ನು ಮೈ ಕಾಯಿಸಿಕೊಳ್ಳಲು ಕೊಡುವರು. ಹೀಗೆ ಮೈ ಕಾಯಿಸಿಕೊಳ್ಳುವುದರಿಂದ ಹಸಿ ಮೈ ಗಟ್ಟಿಯಾಗುತ್ತದೆ. ಹಾಗೂ ಯಾವ ಬೇನೆಗಳು ಬರಲಾರವೆಂದು ಹಿಂದಿನ ಜನರು ಹೇಳುತ್ತಾರೆ.

೪.೧೪ ವಿವಾಹ ವಿಚ್ಛೇದನೆ : ವಿವಾಹದ ನಂತರ ಸದಾ ಗಂಡ ಹೆಂಡಿರಲ್ಲಿ ವಿರಸ ಭಾವನೆ, ಜಗಳ ಸ್ತ್ರೀಯೊಂದಿಗೆ ಪರಪುರುಷನ ಸಂಬಂಧವಿದ್ದಾಗ ವಿವಾಹ ವಿಚ್ಛೇದನೆಯಾಗುತ್ತಿತ್ತು. ಹೆಣ್ಣಿಗೆ ಗುಣ, ಶೀಲವೇ ಮುಖ್ಯವಾಗಿರುತ್ತದೆ. ಅದನ್ನು ಬಿಟ್ಟು ಶೀಲವೇ ಕಳೆದುಕೊಂಡ ಹೆಣ್ಣಿಗೆ ವಿವಾಹ ವಿಚ್ಛೇದನೆ ನೀಡುವ ಸಂದರ್ಭ

ಒದಗುವುದು. ವಿಚ್ಛೇದನೆ ಸಾಧಾರಣ ಸಂಧರ್ಭಗಳಲ್ಲಿ ನಡೆಯುತ್ತಿರಲಿಲ್ಲ. ವಿಚ್ಛೇದನೆ ಆಗಬೇಕಾದರೆ ವಿಶೇಷ ಕಾರಣವಿದ್ದಾಗ ಮಾತ್ರ ಸಾಧ್ಯ. ಚೆನ್ನಣ್ಣ ವಾಲೀಕಾರರು

೧) ಮೊದಲಿನ ಗಂಡನಿಗೆ ಲಗ್ನಕ್ಕೆ ಹತ್ತುವ ಖರ್ಚು ಎರಡನೆಯವರು ಎಂದರೆ ತಪ್ಪಿಸ್ಥನು ಕೊಡಬೇಕು.

೨) ಅಪವಿತ್ರ ಎಂದು ಭಾವಿಸಲಾದ ಹೆಣ್ಣಿಗೆ ತಪ್ಪಿಸ್ಥ ಇಟ್ಟುಕೊಳ್ಳಬಹುದು ಅಥವಾ ಆಕೆಯ ತವರಿಗೆ ಕಳಿಸಬಹುದು.

೩) ಆಕೆಗೆ ಗಂಡು ಮಕ್ಕಳು ಇದ್ದರೆ ಮೊದಲನೇ ಗಂಡ ಪಡೆಯುವನು. ಹೆಣ್ಣು ಮಕ್ಕಳಿದ್ದರೆ ಎರಡನೇ ಗಂಡ ಪಡೆಯುವನು. ಇಲ್ಲವೆ ಆಕೆಯ ತವರವರು ನೋಡಿಕೊಳ್ಳಬೇಕು.

೪) ಟೋಕ್ರೆ ಕೋಳಿ ಜನಾಂಗದ ಆರಾಧ್ಯ ವಸ್ತುವಾದ ನಾವೆ ಇರುವಲ್ಲಿಗೆ ಆ ಹೆಣ್ಣಿಗೆ ಕರೆದುಕೊಂಡು ಹೋಗಿ ಆಕೆಯ ಸೀರೆ ಸೆರಗು ಹರಿದು ಬಳೆ ಒಡೆದು, ಕುಂಕುಮ ತೆಗೆದು ಮಾರಿ ನೋಡದಂತೆ ಆಕೆ ಹೋದ ದಿಕ್ಕಿಗೆ ಉಗುಳಿ ಕಳಿಸಿಕೊಡುವರು. ಆಂದಿನಿಂದ ಆಕೆಯ ಮತ್ತು ಮೊದಲ ಗಂಡನ ಸಂಬಂಧ ಮುಗಿದು ಹೋಯಿತು. ಆಕೆ ಹೋದ ದಾರಿಗೆ ಮಣ್ಣು ತೂರುವರು(ಚೆನ್ನಣ್ಣ,ವಾಲೀಕಾರ(ಲೇ):೨೦೦೦:೩೪೬).

ಹಿಂದಿನ ಕಾಲದಲ್ಲಿ ವಿಚ್ಛೇಧನೆ ಮಾಡಬೆಕಾದರೆ ತೆರವು ಕೊಟ್ಟ ಹಣ ವಾಪಸ್ಸು ಕೊಡಬೇಕಾಗುತ್ತಿತ್ತು. ಅವರು ಹೆಣ್ಣಿನ ಮೇಲೆ ಆಭರಣವಿಟ್ಟಿದನ್ನು ವಾಪಸ್ ತೆಗೆದುಕೊಳ್ಳುತ್ತಿದ್ದರು. ವಿಚ್ಛೇಧನ ಪತ್ರ ಬರೆಯಬೇಕಾದರೆ ಊರ ಹೊರಗೆ ಹೋಗಿ ಊರಿನ ಮುಖ್ಯಸ್ಥರಿಂದ ಬರೆಸುತ್ತಿದ್ದರು.

೪.೧೫ ವಿಧವಾ ವಿವಾಹ : ಗಂಡನನ್ನು ಕಳೆದುಕೊಂಡ ಹೆಣ್ಣಿಗೆ ವಿಧವೆಯೆಂದು ಮತ್ತು ಹೆಂಡತಿಯನ್ನು ಕಳೆದುಕೊಂಡ ಗಂಡಿಗೆ ವಿಧುರನೆಂದು ಕರೆಯುವರು. ವಿಧವೆ ವಿಧುರರಾದವರು ಪುನಹ ಮದುವೆಯಾಗಬಹುದು. ವಿಧವೆ ಹೆಣ್ಣು ಮದುವೆಯಾಗದ ಗಂಡಿನೊಂದಿಗೆ ವಿವಾಹ ಮಾಡಿಕೊಳ್ಳುವ ಸಂಪ್ರದಾಯವಿಲ್ಲ. ಆದರೆ, ವಿಧುರನಾದವನು ಮದುವೆಯಾಗದ ಹೆಣ್ಣಿನೊಂದಿಗೆ ವಿವಾಹ ಮಾಡಿಕೊಳ್ಳಬಹುದಾಗಿದೆ.

ಟೋಕ್ರೆ ಕೋಳಿಯವರಲ್ಲಿ ವಿಧವಾ ಪದ್ಧತಿ ಇದೆ. ಈ ವಿಧವಾ ವಿವಾಹ ಮಾಡಬೇಕಾದರೆ ಗಂಡು ಮೊದಲು ಆಕೆಯನ್ನು ನೋಡಿ ಒಪ್ಪಿದ ಮೇಲೆ ಮುಂದಿನ ಕೆಲಸ ನಡೆಯುತ್ತದೆ. ವಿಧವಾ ವಿವಾಹಕ್ಕೆ ಉಡಕಿ ವಿವಾಹ ಎಂದು ಕರೆಯುತ್ತಾರೆ. ಇದನ್ನು ರಾತ್ರಿಯ ಸಂದರ್ಭದಲ್ಲಿ ಜರುಗಿಸುತ್ತಾರೆ. ವಿಧವೆಗೆ ತಲೆ ಸ್ನಾನ ಮಾಡಿಸಿ ಕುಂಕುಮ ಹಚ್ಚಿ ಪಚ್ಚದ ಸೀರೆ ಉಡಿಸುತ್ತಾರೆ. ಉಡಕಿ ಮದುವೆ ಮಾಡುವಾಗ ಎದುರಿಗೆ ಮುತ್ತೈದೆಯರು ಮತ್ತು ಮಕ್ಕಳು ಬರಲಾರರು. ಇವರು ಮದುವೆಯಾದರೂ ಶುಭ ಕಾರ್ಯಗಳಲ್ಲಿ ಕೆಲಸ ಮಾಡುವಂತಿಲ್ಲ. ಇವರು ಪಟ್ಟದವಳು ಎಂಬ ಭಾವನೆ ಜನರಲ್ಲಿರುತ್ತದೆ.

ಪಟ್ಟ ಅಥವಾ ಉಡಕಿ ವಿವಾಹವನ್ನು ಮಾಡಿಕೊಂಡ ದಂಪತಿಗಳು ತಮ್ಮ ಸಂಸಾರದ ಸಹ ಬಾಳ್ವೆಗಾಗಿ ಮಾತ್ರ ಬದುಕುತ್ತಾರೆ ಹೊರತು ಅವರು ಕಳೆದುಕೊಂಡ ಮಂಗಳ ಕಾರ್ಯಗಳನ್ನು ಮಾಡುವ ಅರ್ಹತೆಗಳನ್ನು ಅವರು ಮರಳಿ ಪಡೆಯಲು ಸಾಧ್ಯವಿಲ್ಲ. ಉಡಕಿಯಾದವರ ಮಕ್ಕಳ ಮದುವೆಯಾಗಬೇಕಾದರೆ ಬಹಳ ಕಷ್ಟವಿದೆ. ಏಕೆಂದರೆ ಅವರಂತೆ ಉಡಕಿ ಮಾಡಿಕೊಂಡ ಬೇರೆ ಕುಟುಂಬದ ಮಕ್ಕಳೊಡನೆ ಸಂಬಂಧ ಬೆಳೆಸಬೇಕಷ್ಟೆ.

ಆದ್ದರಿಂದ ಅಥವಾ ಕುಟುಂಬದವರಿಗೆ ಮದುವೆ ಒಂದು ಸಮಸ್ಯೆಯಾಗುತ್ತದೆ. ಆದುದರಿಂದ ಟೋಕ್ರೆ ಕೋಳಿಯವರಲ್ಲಿ ಪುನರ್ ವಿವಾಹಗಳು ಬಹಳ ಅಪರೂಪ.

**೪.೧೬ ಮರಣ :** ಮನುಷ್ಯ ಹುಟ್ಟುವುದು ಖಚಿತವಿಲ್ಲ. ಆದರೆ ಸಾಯುವುದು ಖಚಿತ. ಇದು ನಿಸರ್ಗನಿಯಮವಿದೆ. ಹುಟ್ಟು-ಸಾವು ಮಾನವ ಜೀವನದ ಎರಡು ಪ್ರಮುಖ ಘಟ್ಟಗಳಾಗಿವೆ. ಹುಟ್ಟಿನಿಂದ ಸಾಯುವವರೆಗೆ ಹಲವಾರು ಆಚರಣೆಗಳು ಆಚರಿಸುವುದು ಎಲ್ಲ ಸಮುದಾಯಗಳಲ್ಲಿರುವಂತೆ ಟೋಕ್ರೆ ಕೋಳಿ ಬುಡಕಟ್ಟಿನಲ್ಲಿಯೂ ಕಂಡು ಬರುವುದು.

ಟೋಕ್ರಕೋಲಿ ಬುಡಕಟ್ಟಿನವರು ಸತ್ತವರನ್ನು ಸುಡುವುದಕ್ಕಿಂತ ಹುಳುವುದೇ ಹೆಚ್ಚು. ರೋಗದಿಂದ , ಬಾಣಂತನದಿಂದ, ವಿಷ ಸೇವಿಸಿ, ನೇಣು ಹಾಕಿಕೊಂಡು ಸತ್ತವರನ್ನು ಸುಡುವರು. ಯಾವುದೇ ಮನೆಯಲ್ಲಿ ವ್ಯಕ್ತಿ ಸತ್ತರೆ ಮೊದಲು ತಲೆಯನ್ನು ಪಶ್ಚಿಮಕ್ಕೆ ಕಾಲುಗಳು ಪೂರ್ವಕ್ಕೆ ಇರುವಂತೆ ಮಲಗಿಸುತ್ತಾರೆ. ಕಾಲುಗಳು ಮುರಿದು ಚಪಗಾಲ ಹಾಕುವರು, ಕೈಗಳು ಎದೆಯ ಮೇಲೆ ಇಡುವರು. ಮನೆಯ ಮುಂದೆ ಬೆಂಕಿ ಹಾಕಿ, ಮನೆಯೊಳಗೆ ದೀಪ ಹಚ್ಚಿಡುವರು. ಬಂಧುಗಳಿಗೆ ಸುದ್ದಿ ಹೇಳಿ ಕಳಿಸುವರು.

ಬಂಧುಗಳು ಕೆಲ ಜನರು ಬಂದ ಬಳಿಕ ಹಲಗೆಯನ್ನು ಬಾರಿಸುತ್ತಾ ಶವಕ್ಕೆ ಸ್ನಾನ ಮಾಡಿಸುತ್ತಾರೆ. ಮಾಡಿಸುವಾಗ ಬಳಗದವರೆಲ್ಲ ಎರಡೆರಡು ತಂಬಿಗೆ ನೀರು ಹಾಕುವರು. ಹೊಸ ಬಟ್ಟೆಗಳನ್ನು ಹಾಕಿ ಕೂಡಿಸಿ ಗಟಾಯಿ ಕಟ್ಟುವರು. ಹೆಣಕ್ಕೆ ಕುಂಕುಮ ಹಚ್ಚಿ ಕೊರಳಲ್ಲಿ ಹಾರ ಹಾಕುವರು. ಹಣೆಗೆ ಒಂದು ರೂಪಾಯಿ ಬಂದಿ ಹಚ್ಚುವರು. ಪ್ರತಿಯೊಬ್ಬರು ಬಂದು ಕುಂಕುಮ ಹಚ್ಚಿ ರೂಪಾಯಿಗಳ ಹಾರನ್ನು ಕೊರಳಲ್ಲಿ ಹಾಕಿ ಆರತಿ ಮಾಡಿ ಹೋಗುತ್ತಾರೆ. ಶವವನ್ನು ಕೂಡಿಸಿದ ನಂತರ ಗಂಡಾಗಿದ್ದರೆ ಹೆಂಡತಿಯನ್ನು ಎಡಕ್ಕೆ ಕೂಡಿಸಿ ಕುಂಕುಮ ಹಚ್ಚಿ ತವರಿನವರು ತಂದ ಸೀರೆ ಉಡಿಸುತ್ತಾರೆ. ಒಂದು ವೇಳೆ ಆಕೆ ಸಣ್ಣವಳಿದ್ದು ಪುನರ್ ವಿವಾಹ ಮಾಡಿಕೊಳ್ಳುವುದಿದ್ದರೆ ಶವದೊಡನೆ ಕೂಡಿಸಿ ಸೀರೆ ಉಡಿಸುವುದಿಲ್ಲ. ಒಂದು ವೇಳೆ ಹೆಂಡತಿ ತೀರಿಕೊಂಡರೆ ಗಂಡನಿಗೆ ಹೊಸ ಬಟ್ಟೆ ಉಡಿಸುವರು. ದುಃಖತಪ್ತರಾದ ಹೆಣ್ಣು ಮಕ್ಕಳು ಕ್ರೋಧದಿಂದ ಸತ್ತವನ ಗುಣಗಾನ ಮಾಡಿ ಅಳುತ್ತಾರೆ. ಕೆಲವರು ಎದೆ ಬಡಿದುಕೊಂಡು ಅಳುವರು. ಊರಿನಿಂದ ಸಂಬಂಧಿಕರು ಬರುತ್ತಿದ್ದರೆ ಹಲಗೆ ವಾದ್ಯದ ಬಡಿತದ ವೇಗ ಹೆಚ್ಚಾಗುತ್ತದೆ. ಶವ ಕಂಡೊಡನೆಯೇ ಒಬ್ಬರನ್ನೊಬ್ಬರು ಕೊರಳಿಗೆ ಬಿದ್ದು ಅಳುತ್ತಾರೆ. ಸತ್ತಾಗ ಅಳುವುದು ಒಂದು ಕಲೆ, ಎಲ್ಲರಿಗೂ ಅಳಲು ಬರುವುದಿಲ್ಲ. ಅಳುತ್ತಿದ್ದರೆ ಸತ್ತವರ ನೆನಪು ಮರುಕಳಿಸುತ್ತದೆ. ನೆರೆದವರು ಹೆಂಡತಿ ಮಕ್ಕಳನ್ನು ಸಮಾಧಾನಪಡಿಸುತ್ತಾರೆ.

ಒಬ್ಬ ವ್ಯಕ್ತಿ ತೀರಿಕೊಂಡಾಗ ಅವನ ದಿನ ನಿತ್ಯದ ಚಟುವಟಿಕೆಗಳನ್ನು ತಾಯಿ ಮತ್ತು ಹೆಂಡತಿ ಗಮನಿಸುತ್ತಾರೆ. ಅವುಗಳನ್ನು ನೆನಪಿಸುತ್ತಾ ಅಳುತ್ತಾರೆ. ಮುತ್ತೈದೆತನವನ್ನು ಕಳೆದುಕೊಂಡ ಹೆಂಡತಿ ಶುಭಕಾರ್ಯದಲ್ಲಿ ಓಡಾಡದಂತೆ ಮಾಡಿದೆಲ್ಲೋ, ಯಾರ ಕೈಯಲ್ಲಿ ಕೊಟ್ಟು ಹೋದೆಲ್ಲೋ, ಮಕ್ಕಳು ಯಾರಿಗೆ ತಂದೆಯೆಂದು ಕರೆಯಬೇಕೋ, ಯಾವ ಗಿಡದ ಹಕ್ಕಿ ಮಾಡದೆಲ್ಲೋ ಎಂದು ಹೇಳುತ್ತಾ ಆತನು ಮಾಡಿದ ಕಾರ್ಯಗಳನ್ನು ನೆನಪಿಸುತ್ತಾ ದುಃಖವನ್ನು ವ್ಯಕ್ತಪಡಿಸುವುದು ಪ್ರತಿಯೊಂದು ಬುಡಕಟ್ಟಿನಲ್ಲಿಯೂ ಸಹ ಕಂಡು ಬರುತ್ತದೆ.

೪.೧೬.೧ ಶವ ಯಾತ್ರೆ : ಶವವನ್ನು ಯಾತ್ರೆಗೆ ತೆಗೆದುಕೊಂಡು ಹೋಗುವುದಕ್ಕೆ ಮುಂಚೆಯೇ ಕುಣಿ ತಯಾರಾಗಿರುತ್ತದೆ. ಕುಣಿ ತೆಗೆದವರಲ್ಲಿ ಒಬ್ಬರು ಅದರಲ್ಲಿ ಕುಳಿತ್ತಿರುವರು. ಯಾಕೆಂದರೆ ಅದು ಖಾಲಿ ಇರಬಾರದೆಂಬ ಉದ್ದೇಶ ಅವರದು. ಎಲ್ಲಾ ಬಳಗದವರು ಬಂದ ನಂತರ ನಾಲ್ಕೈದು ಗಂಟೆಗೆ ಶವವನ್ನು ನಾಲ್ಕು ಜನ ಹೊತ್ತುಕೊಂಡು ಸ್ಮಶಾನಕ್ಕೆ ಕೊಂಡುಯ್ಯುವರು. ಇತ್ತಿಚೆಗೆ ಟ್ರ್ಯಾಕ್ಟರ ಅಥವಾ ಎತ್ತಿನ ಬಂಡಿಯಲ್ಲಿ ಕೂಡಿಸಿಕೊಂಡು ಹೋಗುತ್ತಿದ್ದಾರೆ. ಒಯ್ಯುವಾಗ ಹೆಣ್ಣು ಮಕ್ಕಳು (ಮಗಳು ಅಕ್ಕ ತಂಗಿಯರು) ಶವದ ತಲೆ ಹಿಡಿಯುವರು. ಹೆಣ ಎತ್ತುವ ಮೊದಲು ಮನೆಯವರೆಲ್ಲ ಅದಕ್ಕೆ ಆರತಿ ಮಾಡಿ ನಮಸ್ಕರಿಸುವರು. ಮನೆಯಿಂದ ಹೊರಟ ಶವದ ಹಿಂದೆ ಕೆಲವರು ನವಣೆ ಅಥವಾ ಸಾಸಿವೆ ಚೆಲ್ಲುತ್ತಾರೆ. ಈ ಸಾಸಿವೆ ಚೆಲ್ಲುವುದರ ಉದ್ದೇಶ ದೆವ್ವವಾಗಿ ಮನೆಯವರಿಗೆಲ್ಲ ಕಾಡಿಸಬಾರದೆಂದು ಹೀಗೆ ಮಾಡುವರು. ಕೆಲವು ಜಾತಿಯವರಲ್ಲಿ ಗಂಡಸರಷ್ಟೆ ಶವಸಂಸ್ಕಾರಕ್ಕೆ ಹೋಗುತ್ತಾರೆ. ಆದರೆ ಇವರಲ್ಲಿ ಗಂಡಸರು ಮತ್ತು ಹೆಂಗಸರು ಇಬ್ಬರು ಶವಸಂಸ್ಕಾರಕ್ಕೆ ಹೋಗುವರು.

ಶವವನ್ನು ಹಣಮಂತನ ಗುಡಿಯಿಂದ ಹಾಯ್ದುಕೊಂಡು ಒಯುತ್ತಾರೆ. ಊರ ಹೊರಗೆ ಹೋದ ಕೂಡಲೆ ಶವವನ್ನು ಕೆಳಗಿಳಿಸಿ ಎಡೆಯಲ್ಲಿದ್ದ ಉಡೆಕ್ಕಿ(ಇಸ್ಕಿಕ್ಕಿ)ಯನ್ನು ಬಿಟ್ಟು ಚೆಲ್ಲುವರು. ನಂತರ ಶವ ಸಂಸ್ಕಾರ ಮಾಡುವ ಸ್ಥಳಕ್ಕೆ ಕೊಂಡೊಯ್ಯುದು ಕುಣಿಯ ಹತ್ತಿರ ಇಳಿಸುತ್ತಾರೆ. ಅಲ್ಲಿ ಶವದ ಮುಖ ತೊಳೆದು ಕುಂಕುಮ ಹಚ್ಚಿ, ವಿಳೆದೆಲೆಯಲ್ಲಿ ಬಂಗಾರದ ತುಣುಕು ಇಟ್ಟು ಬಾಯಲ್ಲಿ ಹಾಕುತ್ತಾರೆ. ಶವ ಗಂಡಾಗಿದ್ದರೆ, ಶವದ ತಲೆಯ ಮೇಲಿನ ಟೋಪಿ ಅಥವಾ ಮುಂಡಾಸು ಹಿರಿಯ ಮಗನ ತಲೆಯ ಮೇಲಿಡುವರು. ಒಂದು ವೇಳೆ ಹೆಂಗಸಾಗಿದ್ದರೆ ಆಕೆಯ ಕಾಲುಂಗರ, ಮಂಗಳಸೂತ್ರ ಹಿರಿಯ ಸೊಸೆಗೆ ಕೊಡುವರು. ಮುಂಡಾಸು ಮಗನ ತಲೆಯ ಮೇಲಿಡುವ ಉದ್ದೇಶ ಆತನು ಮಾಡುವ ಕಾರ್ಯಗಳು, ಜವಾಬ್ದಾರಿಗಳು ಮಗನು ಮಾಡಬೆಕು ಸೊಸೆಗೆ ಕಾಲುಂಗರ ಮಂಗಳಸೂತ್ರ ಕೊಡುವುದರ ಉದ್ದೇಶ ಅತ್ತೆಯಂತೆ ಸೋಸೆಯು ಮುತ್ತೈದೆಯಿಂದ ಬಹಳ ದಿನದವರೆಗೆ ಬಾಳಲೆಂದು ಮುತ್ತೈದೆತನದಿಂದ ಸಾಯಲೆಂದು.

ಹೆಣವನ್ನು ಪೂರ್ವ ದಿಕ್ಕಿನ ಕಡೆ ಮುಖ ಮಾಡಿ ಕೂಡಿಸಿದ ನಂತರ ಎಲ್ಲಾ ಜನರು ಹೂಪತ್ರೆ ಹಾಕುತ್ತಾರೆ. ಎಲ್ಲರಿಗೆ ಕೊನೆಯ ದರ್ಶನ ಮಾಡಿಸಿದ ನಂತರ ಕುಣಿಯ ಬಾಗಿಲಿಗೆ ಕಲ್ಲು ಹಚ್ಚುವರು. ಅನಂತರ ಕುಣಿ ತೋಡಿದ ಮಣ್ಣನ್ನು ಹಿಡಿಯಲ್ಲಿ ತೆಗೆದುಕೊಂಡು ಬಂದ ಜನರೆಲ್ಲ ಹಾಕುವರು. ಹೆಣದ ಮುಂದಿನ ತುಂಬಿದ ತಂಬಿಗೆಯಲ್ಲಿ ಜನರು ಹಾಕಿದ ಚಿಲ್ಲರೆ ದುಡ್ಡು ಮತ್ತು ಶವದ ಕೊರಳಲ್ಲಿ ಜನರು ರೂಪಾಯಿಂದ ಮಾಡಿ ಹಾಕಿದ ಹಾರದ ಹಣವನ್ನು ಮನೆಯ ಹೆಣ್ಣು ಮಕ್ಕಳಿಗೆ ಕೊಡುವರು. ನಂತರ ಜಂಗಮರಿಗೆ, ಬಾಜಿದವರಿಗೆ ದುಡ್ಡು ಕೊಟ್ಟು ನಂತರ ಮನೆಗೆ ಬರುತ್ತಾರೆ. ಹೆಣದ ಮೇಲಿನ ಬಟ್ಟೆಗಳು ಹೊಲೆಯರಿಗೆ ಕೊಡುವರು. ಕೆರೆ ಅಥವಾ ಬಾವಿಗೆ ಹೋಗಿ ಕೈಕಾಲು ತೊಳೆದುಕೊಂಡು ಕರ್ಕಿಯನ್ನು ತೆಗೆದುಕೊಂಡು ಎಲ್ಲರೂ ಮನೆಗೆ ಬರುತ್ತಾರೆ. ಶವಸಂಸ್ಕಾರ ಮಾಡಿ ಮನೆಗೆ ಬರುವಷ್ಟರಲ್ಲಿ ಮನೆಯಲ್ಲಿದ್ದವರು ವ್ಯಕ್ತಿಯ ಜೀವ ಹೋದ ಸ್ಥಳವನ್ನು ಸಗಣಿಯಿಂದ ಸಾರಿಸಿ ತಂಬಿಗೆ ತುಂಬಿಟ್ಟು ದೀಪ ಹಚ್ಚಿಡುತ್ತಾರೆ. ಕರ್ಕಿಯನ್ನು ತಂದವರು ತಂಬಿಗೆಯ ನೀರಿನಲ್ಲಿ ಅದ್ದಿ ಅದರ ಮುಂದಿಡುವರು. ಆ ಮೇಲೆ ಸತ್ತ ವ್ಯಕ್ತಿಯ ಮನೆಯವರಿಗೆ ಸಮಾಧಾನ ಹೇಳಿ ತಮ್ಮ ತಮ್ಮ

ಊರಿಗೆ ಹೋಗುತ್ತಾರೆ. ಊರಿನ ಜಂಗಮರು ಕೊಟ್ಟ ಅಥವಾ ಅಂಗಡಿಯಿಂದ ತಂದ ಅಕ್ಕಿಯನ್ನು ಉಪ್ಪಿಲ್ಲದ ಅನ್ನ ಮಾಡಿ ಅದರಲ್ಲಿ ಬೆಲ್ಲ ಹಾಕಿಕೊಂಡು ಮನೆಯವರೆಲ್ಲ ಊಟ ಮಾಡುತ್ತಾರೆ. ಉಪ್ಪಿಲ್ಲ ಅನ್ನಮಾಡುವುದರ ಉದ್ದೇಶ ಹಿತವಲ್ಲದ ಸಮಂಜಸವಲ್ಲದು, ರುಚಿಸದ ದಿನದ ಸಂಕೇತವಾಗಿರಬಹುದು.

ಗಂಡ ತೀರಿಕೊಂಡರೆ ಹೆಂಡತಿಯಾದವಳು ತನ್ನ ಮುತ್ತೈದೆತನ ಕಳೆದುಕೊಂಡಂತೆ. ತಾನು ಯಾವ ಶುಭಕಾರ್ಯಗಳಲ್ಲಿ ಓಡಾಡುವಂತಿಲ್ಲ, ತನ್ನ ಜೀವನ ಸಾಗಿಸುವುದು ಮಕ್ಕಳನ್ನು ಸಲಹುವುದು ಹೀಗೆ ಹಲವಾರು ವಿಷಯಗಳನ್ನು ನೆನಪಿಸುತ್ತ ಎಷ್ಟೋ ತಿಂಗಳಗಳವರೆಗೆ ಕೊರಗುತ್ತಾಳೆ. ಆದರೆ ಗಂಡಸಾದವನು ಹೆಂಡತಿ ತೀರಿಕೊಂಡರೆ ಹೆಚ್ಚಾಗಿ ದುಃಖಿಸುವುದಿಲ್ಲ. ಕೆಲವೇ ತಿಂಗಳಲ್ಲಿ ಪುನರ್ ವಿವಾಹವಾಗುತ್ತಾನೆ. ಮೊದಲಿನ ಹೆಂಡತಿಯ ನೆನಪು ಕೂಡ ಆತನಿಗೆ ಬರುವುದಿಲ್ಲ.

೪.೧೬.೨ **ಹಾಲು ಹಾಕುವುದು :** ವ್ಯಕ್ತಿ ತೀರಿಕೊಂಡ ಮೂರನೆಯ ದಿವಸಕ್ಕೆ ಹಾಲು ಹಾಕುವರು. ಅಂದು ಶವ ಹೂಳಿದ ಸ್ಥಳಕ್ಕೆ ಬಳಗದವರೆಲ್ಲರೂ ಕೂಡಿಕೊಂಡು ಹೋಗುವರು. ಹೋದ ಜನರೆಲ್ಲ ಎರಡೆರಡು ಚಮಚ ಹಾಲನ್ನು ಕುಣಿಗೆ ಹಾಕುವರು.

೪.೧೬.೩ **ತಿಥಿ/ದಿನ :** ವ್ಯಕ್ತಿ ತೀರಿದ ಐದನೆಯ ದಿವಸಕ್ಕೆ ಮನೆಯನ್ನು ಸಾರಿಸಿ, ಬಟ್ಟೆಗಳನ್ನು ಸ್ವಚ್ಛಗೊಳಿಸುತ್ತಾರೆ. ಸತ್ತ ವ್ಯಕ್ತಿ ಊಟ ಮಾಡುವ ಎಲ್ಲಾ ಅಡಿಗೆಯನ್ನು ಸ್ವಲ್ಪ ಸ್ವಲ್ಪ ಮಾಡಿಕೊಂಡು, ಅಂದು ಮಾಡಿದ ಪಾಯಸವನ್ನು ಐಳು ಎಲೆಯ ಪತ್ರೋಳಿಯ ಮೇಲೆ ಹಾಕುವರು. ಅದನ್ನು ಬೆಂಕಿ ಹಿಡಿದವನ ದೋತರದ ಚಮಕಿನ ಪದರಲ್ಲಿ ಕೊಡುವರು. ಕುಣಿಯ ಹತ್ತಿರ ಅದನ್ನು ಒಯ್ದು ಇಡುವನು. ಎಲ್ಲರೂ ಪೂಜೆ ಮಾಡಿದ ನಂತರ ದೂರ ಹೋಗಿ ನಿಲ್ಲುತ್ತಾರೆ. ಕಾಗೆ ಆ ಕೂಳನ್ನು ಮುಟ್ಟುವವರೆಗೆ ಅಲ್ಲಿಯೇ ನಿಲ್ಲುವರು. ಒಂದು ವೇಳೆ ಕಾಗೆ ಕೂಳು ಮುಟ್ಟದಿದ್ದರೆ ಆಕಳನ್ನು ತಂದು ತಿನಿಸುವರು. ಕಾಗೆ ಕೂಳು ಬೇಗ ಮುಟ್ಟಿದ್ದರೆ ಸತ್ತವರ ಆಯುಷ್ಯ ಮುಗಿದಿತ್ತು. ಆಸೆ ಇರಲಿಲ್ಲವೆಂಬ ನಂಬಿಕೆ ಕೋಲಿಯವರಲ್ಲಿದೆ. ಒಂದು ವೇಳೆ ಕಾಗೆ ಕೂಳು ಮುಟ್ಟದಿದ್ದರೆ ಆಯುಷ್ಯವಿತ್ತು, ಆಸೆಯಿತ್ತೆಂದು ಹೇಳುವರು.

ಸತ್ತ ವ್ಯಕ್ತಿಯ ಮಗ ಬೆಂಕಿ ಹಿಡಿದಿದ್ದರೆ ಆತನ ತಲೆಯನ್ನು ನಾಯಿದನ್ನು ಬೋಳಿಸುವನು. ಆತನ ಮೈ ಮೇಲಿನ ಬಟ್ಟೆಗಳನ್ನು ನಾಯಿದನು ಸ್ನಾನದ ನಂತರ ತೆಗೆದುಕೊಂಡು ಹೋಗುವನು. ಸತ್ತವ್ಯಕ್ತಿಯ ಹೆಂಡತಿಯ ಕಾಲುಂಗರ, ಮಂಗಳಸೂತ್ರ, ಬಳೆ ಆಗಸಗಿತ್ತಿ ತೆಗೆಯುವಳು. ಇಲ್ಲವೆ ಯಾವುದಾದರೂ ವಯಸ್ಸಾದ ಹೆಣ್ಣುಮಗಳು ಊರ ಹೊರಗೆ ಹೋಗಿ ತೆಗೆಯುವಳು. ಮನೆಗೆ ಬಂದು ಸ್ನಾನ ಮಾಡುವಳು. ಬೆಂಕಿ ಹಿಡಿದವನಿಗೆ ಬಂಧುಗಳು ಹೊಸ ಬಟ್ಟೆ ಮಾಡುವರು. ಗಂಡ ತೀರಿದವಳಿಗೆ ತವರಿನವರು ಕರೆದುಕೊಂಡು ಹೋಗಿ ಹೊಸ ಸೀರೆ ಉಡಿಸುವರು. ಪ್ರಸ್ತುತದಲ್ಲಿ ನೇರವಾಗಿ ತವರಿಗೆ ಕರೆದುಕೊಂಡು ಹೋಗದೆ. ದೇವಾಲಯಕ್ಕೆ ಕರೆದುಕೊಂಡು ಹೋಗಿ ಅಲ್ಲಿಯೇ ಸೀರೆ ಉಡಿಸಿ ಗಂಡನ ಮನೆಗೆ ಕಳುಸುತ್ತಿದ್ದಾರೆ. ಹೀಗೆ ಮಾಡುವುದರ ಉದ್ದೇಶ ತವರ ಮನೆಗೆ ತಮ್ಮಿಂದ ಕೆಡಕಾಗಬಾರದೆಂದು ಹೀಗೆ ಮಾಡುತ್ತಲಿದ್ದಾರೆ. ಅನಂತರ ತವರು ಮನೆಗೆ ಕರೆತರುತ್ತಿದ್ದಾರೆ.

ಒಂದು ವೇಳೆ ಗರ್ಭಿಣಿಯರು, ಬಾಣಂತಿಯರು, ದೊಡ್ಡರೋಗದವರು ಸತ್ತರೆ ಸುಡುತ್ತಾರೆ. ಒಂದು ವೇಳೆ ಸಣ್ಣ ಮಗು ತೀರಿದರೆ ಬಳಗದವರಿಗೆ ಹೇಳಿ ಕಳಿಸದೆ ಹೊಲದ ಕಟ್ಟೆಗೆ ಹೂಳುತ್ತಾರೆ. ಒಂದು ವೇಳೆ ಮದುವೆಯಾಗದವರು ತೀರಿದರೆ ಎಕ್ಕೆಯ ಟೊಂಗೆಯನ್ನು ತಂದು ಅದರಿಂದ ಭಾಸಿಂಗ ಮಾಡಿ ಶವಕ್ಕೆ

ಕಟ್ಟುತ್ತಾರೆ. ಎಕ್ಕೆಯ ಗಿಡದ ಕೆಳಗಿನ ಮಣ್ಣು ತಂದು ಆ ಮಣ್ಣನ್ನೆ ಅಕ್ಷತೆಯೆಂದು ಹಾಕುವರು. ಅನಂತರ ಬಾಜೆ ಅಥವಾ ಹಲಗೆ ಮಾಡುವರು. ಹಾಗೆ ಮಾಡಿದರೆ ಮದುವೆಯಾದವರಂತೆ ತಿಥಿ ಮಾಡಲು ಬರುತ್ತದೆ. ಒಂದು ವೇಳೆ ಎಕ್ಕೆ ಗಿಡಕ್ಕೆ ಲಗ್ನ ಮಾಡದಿದ್ದರೆ ತಿಥಿ ಮಾಡಲು ಬರುವುದಿಲ್ಲವೆಂದು ಸಂದರ್ಶನಕ್ಕೆ ಹೋದಾಗ ವಕ್ತೃವಿನಿಂದ ಬಂದ ಮಾತಿದು.

೪.೧೬.೪ **ದೈವದಲ್ಲಿ ತೆಗೆದು ಕೊಳ್ಳುವುದು :** ಟೋಕ್ರೆ ಕೋಳಿ ಬುಡಕಟ್ಟಿನವರಲ್ಲಿ ಒಂದು ತಿಂಗಳಿಂದ ಮೂರು ತಿಂಗಳವರೆಗೆ ಸತ್ತ ವ್ಯಕ್ತಿಯನ್ನು 'ದೈವದಲ್ಲಿ ಕೂಡಿಸಿಕೊಳ್ಳುವ' ಸಂಪ್ರದಾಯವಿದೆ. ದೈವದಲ್ಲಿ ತೆಗೆದುಕೊಳ್ಳಬೇಕಾದರೆ ಅಂದು ಸತ್ತ ವ್ಯಕ್ತಿಯ ಹೆಸರಿನಿಂದ ಬೆಳ್ಳಿ ರೂಪದ ಮುತ್ತೈದೆಯನ್ನು ಮಾಡಿ ಜಗುಲಿಯ ಮೇಲೆ ಇಡುವರು. ಆ ವ್ಯಕ್ತಿಗಿಂತಲೂ ಮೊದಲು ಯಾರಾದರು ತೀರಿಕೊಂಡರೆ ಅವರ ಹೆಸರಿನಲ್ಲಿ ಸಹ ಮುತ್ತೈದೆ ಇಡುವರು. ಸತ್ತ ವ್ಯಕ್ತಿಯ ನೆನಪಿಗಾಗಿ ಅಕ್ಕಸಾಲಿಗನ ಹತ್ತಿರ ಬೆಳ್ಳಿಯ ರೂಪ (ಪ್ರತಿಮೆ) ಮಾಡಿಸಿಕೊಂಡು ಬರುತ್ತಾರೆ. ಅದಕ್ಕೆ ಪೇಟೆ(ಪೇಟಿ)ಎಂದು ಕರೆಯುವರು. ಅಂದು ಸತ್ತ ವ್ಯಕ್ತಿ ಇಷ್ಟಪಟ್ಟು ಊಟ ಮಾಡುತ್ತಿದ್ದ ಅಡಿಗೆಯನ್ನು ರೂಪದೊಂದಿಗೆ ಜಗಲಿಯ ಮೇಲಿಟ್ಟು ಹೊಸ ಬಟ್ಟೆಯನ್ನು ಏರಿಸಿ ನೈವೇದ್ಯ ತೋರುವರು. ಏರಿಸಿದ ಬಟ್ಟೆ ಹೊರಗಿನವರಿಗೆ ಕೊಡಬಾರದೆಂಬ ನಿಯಮವಿದೆ. ಮನೆಯವರು ಮಾತ್ರ ಆ ಬಟ್ಟೆ ತೊಡಬೇಕು. ಈ ರೀತಿ ದೈವದಲ್ಲಿ ತೆಗೆದುಕೊಳ್ಳುವುದರಿಂದ ಅವನ ಅವಳ ಆತ್ಮಕ್ಕೆ ಶಾಂತಿ ಸಿಗುತ್ತದೆಂಬ ನಂಬಿಕೆ ಇವರಲ್ಲಿದೆ. ಒಂದು ವೇಳೆ ದೈವದಲ್ಲಿ ತೆಗೆದುಕೊಳ್ಳದಿದ್ದರೆ ಸತ್ತವನ ಆತ್ಮ ಮಧ್ಯದಲ್ಲಿಯೇ ಓಡಾಡುವುದು. ಆತನ ಆತ್ಮಕ್ಕೆ ಶಾಂತಿ ದೊರೆಯದೇ ದೆವ್ವನಾಗುತ್ತಾನೆ ಎಂದು ಅವರು ಹೇಳುವರು. ಫೆಬ್ರುವರಿ ತಿಂಗಳಲ್ಲಿ ಬರವಂತ ಭಾರತ ಹುಣ್ಣಿಮೆ(ಗೋಧಿ ಏರಿಸುವ ಹುಣ್ಣಿಮೆ)ಗೆ ಸತ್ತ ವ್ಯಕ್ತಿಗಳ ಹೆಸರಿನಲ್ಲಿ ಮುತ್ತೈದೆ ಇಟ್ಟು ಊಟಕ್ಕೆ ಹಾಕುತ್ತಾರೆ.

೪.೧೬.೫ **ಪುಣ್ಯತಿಥಿ :** ವ್ಯಕ್ತಿ ಸತ್ತ ಒಂದು ವರ್ಷದ ಒಳಗಾಗಿ ಹೂಳಿದ ಸ್ಥಳದಲ್ಲಿ ಸಮಾಧಿ ಕಟ್ಟುತ್ತಾರೆ. ವ್ಯಕ್ತಿ ಸತ್ತ ದಿನವನ್ನು ಪ್ರತಿ ವರ್ಷಕ್ಕೆ ಪುಣ್ಯತಿಥಿ ದಿನವೆಂದು ಆಚರಿಸುತ್ತಾರೆ. ಮನೆಯನ್ನು ಸಗಣಿಯಿಂದ ಸಾರಿಸಿ ಸಮಾಧಿಗೆ ಸುಣ್ಣ ಬಳಿದು ಹಂದರ ಹಾಕಿ ಮಾವಿನ ತೋರಣ ಕಟ್ಟುವರು. ಅಂದು ಬೆಳಿಗೆ ಸಿಹಿ ಅಡಿಗೆ ಮಾಡಿ ಹಲವಾರು ಜನರಿಗೆ ಊಟಕ್ಕೆ ಹಾಕುತ್ತಾರೆ. ಬಳಗದವರೆಲ್ಲ ಬರುವರು. ಅಂದಿನ ರಾತ್ರಿ ಮನೆಯಲ್ಲಿ ಸತ್ತ ವ್ಯಕ್ತಿಯ ಭಾವ ಚಿತ್ರವಿಟ್ಟು ಪೂಜೆ ಸಲ್ಲಿಸಿ ಜಾಗರಣೆ (ಭಜನೆ) ಮಾಡುತ್ತಾರೆ. ಎಲ್ಲಾ ದಾನಗಳಲ್ಲಿ ಅನ್ನ ದಾನವೇ ಶ್ರೇಷ್ಠವೆಂದು ಹೇಳುವರು. ಅದೇ ರೀತಿ ಅನ್ನ ಹಾಕುವುದರಿಂದ ಹಾಗೂ ಭಜನೆ ಮಾಡುವುದರಿಂದ ಸತ್ತವರ ಆತ್ಮ ಸಂತುಷ್ಟವಾಗುವುದೆಂದು ಹೇಳುವರು.

## ಆಧಾರ ಗ್ರಂಥಗಳು

೧. ಅಂಬಳಿಕೆ ಹಿರಿಯಣ್ಣ.,೧೯೯೪, 'ಬುಡಕಟ್ಟು ಜನರ ಬದಲಾಗುತ್ತಿರುವ ಆರ್ಥಿಕ ಜೀವನ', ಜೀ.ಶ.ಪರಮಶಿವಯ್ಯ (ಪ್ರ.ಸಂ) *ಜಾನಪದ: ಕೆಲವು ವಿಚಾರಗಳು* (ಬೆಂಗಳೂರು:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ).

೨. ಚಿದಾನಂದ ಮೂರ್ತಿ(ಲೇ)., *ಕನ್ನಡ ನುಡಿ*, ಸಂಪುಟ ೪೦, ಸಂಚಿಕೆ ೪೨, (ಪು.೬,೧೧,೧೮).

೩. ಗುಂಡಪ್ಪ ಡಿ.ವಿ., ೧೯೫೩, ***ಸಂಸ್ಕೃತಿ***, (ಮೈಸೂರು:ಕಾವ್ಯಾಲಯ,ಪ್ರಕಾಶನ).

೪. ನಿಂಗಣ್ಣ ಸಣ್ಣಕ್ಕಿ.,೧೯೯೩, *ಗೊಂದಲಿಗರ ಸಂಸ್ಕೃತಿ* (ಬೆಂಗಳೂರು:ಕರ್ನಾಟಕ ಸಾಹಿತ್ಯ ಅಕಾಡೆಮಿ)ಪು.೩೩,೪೦

೫. ತಿಪ್ಪೆರುದ್ರ ಸ್ವಾಮಿ ಹೆಚ್., ೧೯೬೮, *ಕರ್ನಾಟಕ ಸಂಸ್ಕೃತಿ ಸಮೀಕ್ಷೆ*(ಮೈಸೂರು:ಡಿ.ವಿ.ಕೆ.ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ).

೬. ವಾಲೀಕಾರ,ಚನ್ನಣ್ಣ(ಲೇ)., ೨೦೦೦, 'ಟೋಕ್ರೆಕೋಳಿ' ಎಚ್.ಜೆ.ಲಕ್ಕಪ್ಪಗೌಡ (ಪ್ರ.ಸಂ)., *ಕರ್ನಾಟಕ ಬುಡಕಟ್ಟುಗಳು* (ಬೆಂಗಳೂರು:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ) ಸಂಪುಟ ೨.

7. Kissing Felix M., 1962, *Cultural Anthropology*, (New York : Holt Rinehart and winston).

8. Krober, A.L., 1976, *Anthropology*, ( New Delhi : Oxford University Press)

9. Tylor E.B., 1891, *Primitive Culture*, (London)

10. William J. Goode., 1976, *The Family Foundation of Modern Sociology* (Delhi : Prentice Hall of India (p) Limited).

# ಅಧ್ಯಾಯ ೪
# ಟೋಕ್ರೆ ಕೋಳಿ ಬುಡಕಟ್ಟಿನ ವಿವಿಧ ನೆಲೆಗಳ ಶೋಧ

೧. ಸಾಮಾಜಿಕ ನೆಲೆ

೨. ಧಾರ್ಮಿಕ ನೆಲೆ

೩. ಆರ್ಥಿಕ ನೆಲೆ

೪. ಶೈಕ್ಷಣಿಕ ನೆಲೆ

೫. ರಾಜಕೀಯ ನೆಲೆ

# ಅಧ್ಯಾಯ ೪
# ಟೋಕ್ರಿ ಕೋಳಿ ಬುಡಕಟ್ಟಿನ ವಿವಿಧ ನೆಲೆಗಳ ಶೋಧ

## ೧. ಸಾಮಾಜಿಕ ನೆಲೆ

ಶಿಲಾಯುಗದಿಂದ ಇಂದಿನ ಕಾಲದವರೆಗೆ ಮಾನವನ ಬದುಕು ಅನೇಕ ಸ್ಥಿತ್ಯಂತರಗಳನ್ನು ಕಂಡುಕೊಂಡಿದೆ. ಅನೇಕ ವೈವಿಧ್ಯತೆಗಳನ್ನು ಮೈಗೂಡಿಸಿಕೊಂಡಿದೆ. ಇಂದು ಮಾನವ ನಾಗರಿಕತೆಯ ಸ್ಥಿತಿಯನ್ನು ತಲುಪಿದ್ದು, ತನ್ನ ಮೂಲದ ಸಾಂಸ್ಕೃತಿಕ ಪರಂಪರೆಯ ನಿಜವಾದ ಬದುಕನ್ನು ಮರೆಯುತ್ತಿರುವುದು ಕಂಡುಬರುತ್ತಿದೆ.

ಬಹು ಹಿಂದೆ ಆರ್ಯ ದ್ರಾವಿಡರ ಸಂಘರ್ಷದಿಂದ ಒಡೆದ ಭಾರತವನ್ನು ಉತ್ತರ, ದಕ್ಷಿಣವೆಂದು ವಿಂಗಡಿಸಿಕೊಂಡರು. ಭಾರತದ ದ್ರಾವಿಡ ಜನಾಂಗ ಪ್ರದೇಶಗಳಿಂದ ಪ್ರದೇಶಗಳಿಗೆ ಅನುಕೂಲಕ್ಕೆ ತಕ್ಕಂತೆ ಹರಿದು ಹಂಚಿ ಹೋಗಿದ್ದಾರೆ. ಮೂಲ ದ್ರಾವಿಡರು ವಿವಿಧ ವೃತ್ತಿಗನುಗುಣವಾಗಿ ಬುಡಕಟ್ಟುಗಳಾಗಿಯೇ ತನ್ನದೆ ಆದ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಅಂತಹ ಬುಡಕಟ್ಟುಗಳಲ್ಲಿ ಟೋಕ್ರಿ ಕೋಳಿ ಬುಡಕಟ್ಟು ಒಂದು.

ಸಮಾಜ ಹರಿಯುವ ಹಳ್ಳವಾಗಿದೆ ಹೊರತು ನಿಂತ ನೀರಲ್ಲ, ಅದು ಚಲಿಸುತ್ತಲೇ ಇರುತ್ತದೆ. ಟೋಕ್ರಿ ಕೋಳಿಯವರ ಸಾಮಾಜಿಕ ಚಲನೆಯನ್ನು ಗಮನಿಸಿದಾಗ ಜನಸಂಖ್ಯೆಯಲ್ಲಿ ಸಂಸ್ಕೃತಿಯಲ್ಲಿ, ನಂಬಿಕೆಯಲ್ಲಿ, ಭಾಷೆಯಲ್ಲಿ, ಭೌಗೋಳಿಕ ಪ್ರದೇಶದಲ್ಲಿ ಒಟ್ಟು ಜೀವನ ವಿಧಾನದಲ್ಲಿ ನಿರಂತರವಾದ ವ್ಯತ್ಯಾಸವನ್ನು ಕಂಡು ಬರುತ್ತದೆ. ಇದಕ್ಕೆ ನಗರೀಕರಣ, ಸಂಸ್ಕೃತೀಕರಣ ಮತ್ತು ಪಾಶ್ಚಾತೀಕರಣಗಳೇ ಕಾರಣ.

ಟೋಕ್ರಿ ಕೋಳಿ ಜನರು ತುಂಬಾ ಸರಳ ಜೀವಿಗಳು. ಮೋಸಕ್ಕೆ, ದಂಡನೆಗೆ, ಶೋಷಣೆಗೆ ಗುರಿಯಾಗುವ ಜನರಿವರು. ಕಾರಣವೆಂದರೆ ನಿರಕ್ಷರತೆ, ಬಡತನ, ಸಂಪ್ರದಾಯ ಮುಂತಾದವುಗಳು. ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸಲು ಕೈಕೊಳ್ಳುವ ಸರಕಾರಿ ಕ್ರಮಗಳು ಮಾನವ ಸಮಾಜದ ಮೇಲೆ ನಿಧಾನವಾಗಿ ಪರಿಣಾಮಬೀರುತ್ತಿವೆ. ಆದರೆ ಈ ಸಂಬಂಧದ ವೈಜ್ಞಾನಿಕ ಅಧ್ಯಯನ ಆರಂಭವಾಗಿರುವುದು ಇತ್ತೀಚಿನ ಬೆಳವಣಿಗೆ. ಒಂದು ಸ್ಥಿತಿಯಿಂದ ಮತ್ತೊಂದು ಸಾಮಾಜಿಕ ಸ್ಥಿತಿಗೆ ಕಸಬು, ಸಾಮಾಜಿಕ ಸ್ಥಾನಮಾನ, ಹಣ ಮತ್ತು ಅಧಿಕಾರ ಹೀಗೆ ನಾಲ್ಕು ಪ್ರಮುಖ ಕಾರಣಗಳಿಂದ ಸ್ಥಿತ್ಯಂತರಕ್ಕೊಳಗಾಗುವ ಬುಡಕಟ್ಟುಗಳ ಸಾಮಾಜಿಕ ಸಂಚಲನ ಪ್ರಕ್ರಿಯೆ ನಡೆಯುತ್ತಿದೆ.

ಭಾರತದಲ್ಲಿ ಟೋಕ್ರೆ ಕೋಳಿ ಬುಡಕಟ್ಟಿನವರ ಪರಿಸ್ಥಿತ ಕಾಲದಿಂದ ಕಾಲಕ್ಕೆ ಪರಿಸರ ಮತ್ತು ಪರಿಸ್ಥಿತಿಗೆ ಅನುಗುಣವಾಗಿ ಬದಲಾವಣೆ ಆಗುತ್ತಲೇ ಬಂದಿದೆ. ಸ್ವತಂತ್ರ್ಯ ಪೂರ್ವದ ಇಂಗ್ಲೀಷರ ಆಳ್ವಿಕೆಯ ಸಮಯದಲ್ಲಿ ಟೋಕ್ರೆ ಕೋಳಿ ಬುಡಕಟ್ಟಿನವರು ತಮ್ಮ ಸಂಸ್ಕೃತಿಯನ್ನು ಇತರರ ಸಂಪರ್ಕದಿಂದಾಗಿ ಸ್ವಲ್ಪ ಸ್ವಲ್ಪ ಕೈ ಬಿಡುತ್ತಾ ಹೋದರು. ರಸ್ತೆಗಳ ನಿರ್ಮಾಣ, ಸಂಪರ್ಕ ಸಾಧನಗಳು ಹೆಚ್ಚಾದಂತೆಲ್ಲಾ ಇವರು ಇತರ ಜನರ ಸಂಪರ್ಕ ಮಾಡುತ್ತಿರುವುದರಿಂದ ತಮ್ಮ ಮೂಲ ಸಂಸ್ಕೃತಿಯನ್ನು ಕೈ ಬಿಟ್ಟು ಉನ್ನತ ವರ್ಗದವರ ಸಂಸ್ಕೃತಿಯನ್ನು ಆಚರಿಸಲು ಪ್ರಾರಂಭಿಸಿದರು. (ದಟ್ಟ ಅರಣ್ಯ ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ವಾಸವಾಗಿದ್ದ ಹಲವಾರು ಜನಾಂಗದವರು ಮಾತ್ರ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡಿದ್ದಾರೆ). ಅದೇ ಕರ್ನಾಟಕದ ಕೀರಿಟದಂತೆ ಶೋಭಿಸುತ್ತಿರುವ ಬೀದರ ಜಿಲ್ಲೆಯ ಟೋಕ್ರೆ ಕೋಳಿ ಜನರು ಸಹ ಅದಕ್ಕೆ ಹೊರತಾಗಿಲ್ಲ. ಮೂಲ ಸಂಸ್ಕೃತಿಯೊಂದು ಅವರಿಗಿದ್ದರೂ ಸಹ ಇತರ ಜನರ ಸಂಪರ್ಕದಿಂಗಾಗಿ ಹಾಗೂ ಸಮೂಹ ಮಾಧ್ಯಮಗಳ ಪ್ರಭಾವದಿಂದ ಇವರ ಸಂಸ್ಕೃತಿಯಲ್ಲಿ ಬದಲಾವಣೆಯಾಗಿದ್ದು ಕಂಡು ಬರುತ್ತದೆ. ಬುಡಕಟ್ಟು ಜನಾಂಗದವರ ಶುಭಕಾರ್ಯದಲ್ಲಿ ಬ್ರಾಹ್ಮಣರು ಪ್ರವೇಶಗೊಂಡಂತೆ ಇವರಲ್ಲಿ ಸಾಂಸ್ಕೃತಿಕ ಬದಲಾವಣೆಗಳಾಗಿರುವುದನ್ನು ಕಂಡುಬರುತ್ತದೆ.

ಸಮಾಜವೆಂದರೆ ಕೂಡಿ ಬಾಳುವುದು. ಆದುದರಿಂದ ಮಾನವ ಸಮಾಜ ಜೀವಿ ಹಾಗೂ ಸಂಘಜೀವಿಯಾಗಿದ್ದಾನೆ. ಮಾನವ ಒಂಟಿಯಾಗಿ ಹಾಗೂ ಸಮಾಜ ಬಿಟ್ಟು ಜೀವಿಸಲು ಸಾಧ್ಯವಿಲ್ಲ. ಒಂದು ವೇಳೆ ಹಾಗೆ ಜೀವಿಸುತ್ತಿದ್ದರೆ ಆತನು ದೇವನಾದರು ಇರಬೇಕು, ಇಲ್ಲವೆ ಹುಚ್ಚನಾದರೂ ಇರಬೇಕು ಎಂದು ಕೆಲವು ಸಮಾಜ ಚಿಂತಕರ ಹೇಳಿಕೆ. ಇವೆರಡಲ್ಲದ ಮನುಷ್ಯ ಒಂದು ವೇಳೆ ಆತನು ಏಕಾಂಗಿಯಾಗಿ ಬದುಕಲು ಪ್ರಯತ್ನಿಸಿದರೆ ಸಮಸ್ಯೆಯ ಸುರಿಮಳೆಗಳು ಆತನಿಗೆ ಎದುರಾಗುತ್ತವೆ. ಆದುದರಿಂದ ಅವನು ಸಮಾಜದೊಡನೆ ಕೂಡಿ ಬದುಕಿದಾಗ ಆತನ ಸಮಸ್ಯೆಗಳಿಗೆ ಪರಿಹಾರ ದೊರಕುತ್ತವೆ. ಆದ್ದರಿಂದಲೇ ಒಕ್ಕಟ್ಟಿನಲ್ಲಿ ಶಕ್ತಿ ಇರುತ್ತದೆಂದು ಹೇಳಲಾಗುತ್ತದೆ.

ಡಾ. ಚನ್ನಣ್ಣ ವಾಲೀಕಾರರ ಪ್ರಕಾರ "ಟೋಕ್ರೆ ಕೋಳಿ ಜನಕ್ಕೆ ಮೊದಲು ಸಾಮಾಜಿಕ ಬದುಕೇ ಇರಲಿಲ್ಲ ನದಿಯ ದಂಡೆಯ ಮೇಲೆ, ಗಿಡದ ಕೆಳಗೆ ಇಲ್ಲವೆ ಗುಡಿಸಿ ಇಲ್ಲವೆ ಚಪ್ಪರಮನೆ ಕಟ್ಟಿ ತಮ್ಮದೊಂದೇ ಕುಟುಂಬದೊಂದಿಗೆ ವಾಸಿಸುತ್ತಿದ್ದರು. ಬರುಬರುತ್ತಾ ತಮ್ಮ ಕುಟುಂಬ ದೊಡ್ಡದಾದಂತೆ ಮಕ್ಕಳು, ಮೊಮ್ಮಕ್ಕಳು, ಮರಿಮೊಮ್ಮಕ್ಕಳು, ಗಿರಿಮೊಮ್ಮಕ್ಕಳು ಆದಂತೆ ಅವರಿಗೆಲ್ಲ ಹೆಂಡಿರು, ಮಕ್ಕಳು, ಮೊಮ್ಮಕ್ಕಳು, ಮರಿಮೊಮ್ಮಕ್ಕಳು, ಗಿರಿಮೊಮ್ಮಕ್ಕಳು ಆದಂತೆ ಬೀಗರಿಗೆ ಬೀಗರು, ಬೀಗರಿಗೆ ಬೀಗರು ಆದಂತೆ ಮೆಲ್ಲಮೆಲ್ಲನೆ ಅಲ್ಲೊಂದು ಆ ದಂಡೆಯ ಮೇಲೆ ಒಂದು ಹಟ್ಟಿ, ನಂತರ ಕೇರಿ ಮುಂದೆ ಕಾಲಾನು ಕ್ರಮದಲ್ಲಿ ಒಂದು ಊರು ಎದ್ದು ನಿಂತಿತು. ಈಗ ನಾಡಿನ ನದಿ ದಂಡೆಗುಂಟ ಕಾಣುವ ಊರುಗಳೆಲ್ಲ ಇವೆ ಆಗಿವೆ" ಎಂದು ತಿಳಿಸುವರು.

ಟೋಕ್ರೆ ಕೋಳಿಯವರು ಸಾವಿರಾರು ವರ್ಷದಿಂದ ಸಮಾಜದಲ್ಲಿ ಜೀವನ ಸಾಗಿಸುತ್ತಿದ್ದಾರೆ. ಅವರಿಗೆ ಹಿಂದೆ ರಾಜರ ಆಳ್ವಿಕೆಯ ಕಾಲದಲ್ಲಿ ಕೆಲವು ಉನ್ನತ ಹುದ್ದೆಗಳಿದ್ದವು. ಉದಾಹರಣೆಗೆ ತಳವಾರಿಕೆ, ತಲವಾರ(ಖಡ್ಗ)ವನ್ನು ಕೈಯಲ್ಲಿ ಹಿಡಿದು ಊರಿನ ಸಂರಕ್ಷಣೆಗಾಗಿ ಅಗಸಿಯನ್ನು ಕಾಯುವದು. ಊರಿನಲ್ಲಿ ಕಳ್ಳತನ, ದರೋಡೆ, ಜಗಳ,

ತಂಟೆತಕರಾರುಗಳು ನಡೆಯದಂತೆ ನೋಡಿಕೊಳ್ಳುವುದು. ಅಗಸಿಯ ಹೊರ ಜನರು ಊರೊಳಗೆ ನುಗ್ಗದಂತೆ ದಿನವಿಡಿ ಕಾಯುವ ಕೆಲಸ ಈತನದು. ಇವನು ಊರಿನ ಹಿತಕ್ಕಾಗಿ ಜೀವನ ಸವೆಸುವವನು. ಇದು ಇಂದಿನ ಸೈನಿಕ ವೃತ್ತಿಯನ್ನು ಹೋಲುತ್ತದೆ. ಐತಿಹಾಸಿಕ ಕಾಲದಿಂದ ಆಳರಸರ ಸೈನಿಕರಾಗಿದ್ದುದರ ಫಲವಾಗಿ ಇವರಿಗೆ ಕೊಲೆ, ಸುಲಿಗೆ, ತಂಟೆತಕರಾರುಗಳು ರಕ್ತಗತವಾಗಿ ಬಂದದ್ದಾಗಿವೆ. ಈ ಕಾರಣಗಳಿಗಾಗಿ ಬಹಳ ನಿಧಾನವಾಗಿ ಈ ಬುಡಕಟ್ಟಿನವರು ಅಭಿವೃದ್ಧಿಯತ್ತ ಸಾಗಿದ್ದಾರೆ.

ವಾಲೀಕಾರ(ಓಲೆಕಾರ)ರು ಅರಸೊತ್ತಿಗೆಯ ಕಾಲದಲ್ಲಿ ಓಲೆ(ಪತ್ರ)ಯನ್ನು ಹಂಚುತ್ತಿದ್ದವರು, ಇವರು ಕುದುರೆ ಸವಾರಿಯ ಮೂಲಕ ಇಲ್ಲವೆ ಕಾಲು ನಡೆಗೆಯಿಂದ ಒಂದು ಕಡೆಯ ಸುದ್ದಿಯನ್ನು ಇನ್ನೊಂದು ಕಡೆಗೆ ತಲುಪಿಸುತ್ತಿದ್ದರು. ರಾಜರ ಸುದ್ದಿ ತಲುಪಿಸುವ ದೂತ ಇವರಾಗಿದ್ದರು. ಈ ಓಲೆಕಾರರನ್ನೇ ವಾಲಿಕಾರನೆಂಬ ಹೆಸರಿನಿಂದ ಕರೆಯಲಾಗಿಯು. ಈ ಕಾರ್ಯ ಇಂದಿನ ಪೋಸ್ಟಮ್ಯಾನ್‌ರು ನಿರ್ವಹಿಸುತ್ತಲಿದ್ದಾರೆ.

ಮಚಕೂರಿ,ಓಲೇಕಾರ,ಜಮಾದಾರ ಮುಂತಾದ ಹುದ್ದೆಗಳನ್ನು ಟೋಕ್ರೆ ಕೋಳಿಯವರು ಹಿಂದೆ ನಿರ್ವಹಿಸುತ್ತಿರುವುದನ್ನು ನೋಡಿದಾಗ ಇವರು ಅನ್ಯ ಸಮಾಜಗಳೊಂದಿಗೆ ಜೊತೆಜೊತೆಯಾಗಿ ಜೀವಿಸುತ್ತಿದ್ದರೆಂಬುದು ತಿಳಿದು ಬರುತ್ತದೆ. ಆದರೆ ಇಂದಿನ ಕಾಲದಲ್ಲಿ ಇವು ಯಾವವು ಇವರ ಕೆಲಸಗಳಲ್ಲ. ಕೆಲವು ವೃತ್ತಿಗಳನ್ನು ನೋಡಿದಾಗ ಇವರ ಸಾಮಾಜಿಕ ಸ್ಥಾನಮಾನ ಅಸ್ಪೃರ ಮಟ್ಟಿಗೆ ಉತ್ತಮವಿರಲಿಲ್ಲವೆಂಬುದು ಡಾ. ಚೆನ್ನಣ್ಣ ವಾಲೀಕಾರರ ಅಧ್ಯಯನದಿಂದ ಕಂಡುಬರುತ್ತದೆ.

೧ **ಮುಸುರೆ ತಿಕ್ಕುವುದು :** ಉಚ್ಚ ಜಾತಿಯವರ ಮದುವೆ ಮುಂಜಿ ಮುಂತಾದ ಶುಭ ಸಮಾರಂಭಗಳಲ್ಲಿ ಬಂದ ಅತಿಥಿಗಳೆಲ್ಲ ಊಟ ಮಾಡಿ ಬಿಟ್ಟ ಮುಸುರಿಯ ಪಾತ್ರೆಗಳನ್ನೆಲ್ಲಾ ಕೋಳಿಯವರು ಕೆರೆದು, ತಿಕ್ಕಿ ತೊಳೆದು ಉಳಿದ ಮುಸುರೆಯನ್ನು ಉಡಿಯಲ್ಲಿ ತಂದು ತಿನ್ನುವರು.

೨ **ಹೆಣ ಕಾಯುವುದು :** ಕೊಲೆ ಹಾಗೂ ಅಪಘಾತಗಳಿಂದ ಸತ್ತ ಹೆಣಗಳನ್ನು ಕಾಯುವರು.

೩ **ಗಸ್ತಿ ತಿರುಗುವುದು :** ದಿನಂಪ್ರತಿ ನಡುರಾತ್ರಿಯಲೆಲ್ಲ ಹಳ್ಳಿಗಳಲ್ಲಿ ಕೂಗಿ ಗಸ್ತಿ ಮಾಡುವರು ಇಲ್ಲವೆ ಊರು ಕಾಯುವರು.

೪ **ಎಕ್ಕೆಲೆ ಹಾಕುವುದು :** ಇದನ್ನು ತಳವಾರರು ಮಾಡುವರು. ಎಕ್ಕೆಲೆಗಳಲ್ಲಿ ತಂಬಾಕು ತುಂಬಿ ಚುಟ್ಟಾ ಕಟ್ಟುವರು. ಇದನ್ನೇ ಹಳ್ಳಿಯ ರೈತರು ಧೂಮಪಾನ ಮಾಡುವರು. ಈ ಸೇವೆಗಾಗಿ ಪ್ರತಿನಿತ್ಯ ಸಂಜೆ ತಳವಾರರು ರೈತರ ಮನೆಗ ಹೋಗಿ ಎಕ್ಕಲೆ ರೊಟ್ಟಿ ನೀಡಿಸಿಕೊಂಡು ಬಂದು ಊಟಮಾಡುವರು.

೫ **ದನ ಕಾಯುವುದು :** ಇವರು ಹಳ್ಳಿಗಳಲ್ಲಿ ದನಕಾಯುವರು. ಅದಕ್ಕಾಗಿ ಇವರಿಗೆ ದನಕಾಯುವವರು ಎನ್ನುವರು. ಒಂದು ದನ ಕಾಯಲಿಕ್ಕೆ ವರ್ಷಕ್ಕೆ ಒಂದುನೂರು (ಇಂದು ೩೦೦) ರೂಪಾಯಿ ರೈತರು ಕೊಡುವರು. ಈ ದನಗಳಿಗೆ ಜಂಗಳದನ, ಗುಂಪುದನ, ಗವಾರಿದನ ಎನ್ನುವರು.

೬ **ಕುದುರೆಗೆ ನಡಿಗೆ ಕಲಿಸುವುದು :** ಊರೊಳಗಿನ ಗೌಡ, ಕುಲಕರ್ಣಿ, ಸಾಹುಕಾರರ ಕುದುರೆಗಳಿಗೆ ಇವರು ನಡಿಗೆ ಕಲಿಸುವರು. ಇದಕ್ಕಾಗಿ ಇವರು ಬಟ್ಟೆ ಇಲ್ಲವೆ ಮಾತಾಡಿದಂತೆ ಹಣ ಪಡೆಯುವರು.

೭ **ಸಿಂದಿ ಬನ ಕಾಯುವುದು :** ಇವರಲ್ಲಿ ಹೆಚ್ಚಿನವರು ಕುಡುಕರು ಮತ್ತು ಶೂರರು. ಸಿಂದಿಗಾಗಿ ಬನಗಳನ್ನು ಗುತ್ತಿಗೆಗಾಗಿ ಕೊಡುವರು. ಗುತ್ತಿಗೆದಾರರು ಇವರನ್ನು ಬನಕಾಯುವ ಕೆಲಸ ಕೊಡುವರು. ನಿತ್ಯ ಸಿಂದಿ ಕುಡಿಯುವುದರ ಜೊತೆಗೆ ವರುಷಕ್ಕೆ ಒಂದು ಸಾವಿರ ರೂಪಾಯಿಗಳಷ್ಟು ಕೂಲಿ ಕೊಡುವರು.

೮ **ಸುಣಗಾರಿಕೆ :** ಬೆಟ್ಟ ಗುಡ್ಡಗಳಿಗೆ, ಹರಿಯುವ ಹಳ್ಳಗಳಿಗೆ ಅಡ್ಡಾಡಿ ಸುಣ್ಣಕ್ಕೆ ಬೇಕಾಗುವ ಕಲ್ಲು ಹರಳುಗಳನ್ನು ಕೂಡಿ ಹಾಕಿ ಹೊತ್ತು ತಂದು ಸುಟ್ಟು ಬುಟ್ಟಿಯಲ್ಲಿ ಹೊತ್ತು ಇವರು ಮಾರುವರು.

೯ **ಉರುವಲು ಕಟ್ಟಿಗೆ :** ಅರಣ್ಯಗಳಿಗೆ ಹೋಗಿ ಉರುವಲು ಕಟ್ಟಿಗೆ ಮತ್ತು ಬಂಬುಗಳನ್ನು ಕಡಿದು, ಹೊತ್ತು ತಂದು ಮಾರುವರು.

೧೦ **ಹೊಲಗದ್ದೆಗಳಿಗೆ ನೀರು ಬಿಡುವುದು :** ಇವರು ಶ್ರೀಮಂತರ ಹೊಲ ಗದ್ದೆಗಳಿಗೆ ಕೂಲಿ ಕೆಲಸದಲ್ಲಿ ನೀರು ಬಿಡುವುದರೊಂದಿಗೆ ಹೊತ್ತು ಹಾಕುವ ಕಾಯಕ ಮಾಡುವರು.

ನಾಟಿಕಾರ ಎಂಬ ಹೆಸರು ವೃತ್ತಿಯಿಂದ ಬಂದದ್ದು. ಇವರು ಊರ ಮುಖ್ಯಸ್ಥರಾದ ಗೌಡರು ಹೇಳಿದನ್ನು ಕೇಳಿಕೊಂಡು ಅಡಿಯಾಳಾಗಿ, ಅಧೀನರಾಗಿ ಇರುವುದು ಇವರ ಕೆಲಸವಾಗಿದೆ. ಬೇರೆಯವರ ಬಂದೂಕಿಗೆ ಹೆಗಲೊಡ್ಡುವ ಜನ ಇವರಾಗಿದ್ದಾರೆ. ಊರಿನ ಮುಖ್ಯಸ್ಥನಾದ ಗೌಡನು ಬೇರೆಯವರೊಡನೆ ಜಗಳ ಆಡಬೇಕಾದರೆ ಅವರು ಸ್ವಂತ ಆಡುವುದಿಲ್ಲ. ಇಂತಹವರಿಂದ ಹೊಡೆಸುತ್ತೇವೆ ಎಂದು ಹೇಳುತ್ತಾರೆ. ವಿನಃ ತಾವೇ ಹೊಡೆಯಲಾರರು. ಇಲ್ಲಿ ಇವರ ಧೈರ್ಯ, ಶೂರತನವನ್ನು ಕಂಡು ಬರುತ್ತದೆ ಎಂದು ಗುಲ್ಬರ್ಗಾ ವಿಶ್ವವಿದ್ಯಾಲಯದ ಪ್ರವಾಚಕರಾದ ಡಾ. ನಾಗಾಬಾಯಿ ಬುಳ್ಳಾರವರು ತಿಳಿಸುವರು. ಮೇಲಿನ ಹೇಳಿಕೆಯನ್ನು ನೋಡಿದಾಗ ಇವರಲ್ಲಿ ಸ್ವಾತಂತ್ರ್ಯ ಮನೋಭಾವದ ಕೊರತೆಯನ್ನು ಎದ್ದು ಕಾಣುತ್ತದೆ. ಜೀವನವೇ ಇನ್ನೊಬ್ಬರಿಗಾಗಿ ಮೀಸಲಿಡುತ್ತಾರೆ. ಪರರ ಅಧೀನದಲ್ಲಿದ್ದೇ ಜೀವನ ಕಳೆಯುತ್ತಾರೆ. ತನ್ನ ಹೊಟ್ಟೆಗೆ ಊಟ ಸಿಕ್ಕರೆ ಸಾಕು ಒಡೆಯನು ಹೇಳಿದ್ದನು ಕೇಳಿಕೊಂಡು ದಿನ ಕಳೆಯುತ್ತಾನೆ. ನೋಡಲು ದೃಢಕಾಯರು, ಕೃಷಿ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವವರು, ಗ್ರಾಮಸೇವಕರಾಗಿ, ಗ್ರಾಮ ಕಾವಲುಗಾರರಾಗಿ ಸೇವೆ ಸಲ್ಲಿಸುತ್ತಿದ್ದವರು. ದೃಢಕಾಯರಾಗಿರುವುದರಿಂದ ಗ್ರಾಮದ ಅನೇಕ ಪ್ರತಿಷ್ಠಿತರಿಗೆ ಬೆಂಗಾವಲಿಗರಾಗಿ ಸೇವೆ ಸಲ್ಲಿಸುತ್ತಲ್ಲಿದ್ದವರು. ಸಿಟ್ಟು ಹೆಚ್ಚು ವಿವೇಕರಹಿತವಾಗಿ ಇನ್ನೊಬ್ಬರ ಹಿತಕ್ಕಾಗಿ ತಮ್ಮ ಪ್ರಾಣ ಕೂಡ ಕೊಡುವವರು. ಹೀಗಾಗಿ ಬೀದರಿನ ಜೇಲುಗಳಲ್ಲಿ ಹೆಚ್ಚಿನವರು ಟೋಕ್ರೆ ಕೋಳಿಯವರಿರುವರು. ಇವರನ್ನು ಕಾಟಿ ಕಬ್ಬಲಿಗ ಎಂದು ಸ್ಥಳೀಯರು ಪರಿಚಯಿಸುವರು(ಮೈತ್ರಿ,ಕೆ.ಎಂ:೧೯೯೪:೯೮).

ಸಾಮಾನ್ಯವಾಗಿ ಕೋಲಿಯವರು ಊರ ಹೊರಾವರಣದ ಪರಿಧಿಯಲ್ಲಿ ತಮ್ಮದೆಯಾದ ಹಟ್ಟಿಗಳನ್ನು ಕಟ್ಟಿಕೊಂಡಿರುತ್ತಾರೆ. ಇದಕ್ಕೆ ಕೋಲಿ ಜನಾಂಗದವರ ಓಣಿಯೆಂದು ಕರೆಯುತ್ತಾರೆ. ಒಂದು ಊರಿನಲ್ಲಿ ಒಂದೊಂದು ಜಾತಿಯವರ ಒಂದೊಂದು ಓಣಿ ಬೇರೆ ಬೇರೆಯೇ ಇರುತ್ತವೆ. ಅದರಂತೆ ಇವರದು. ಇದು ಇವರು ಸಾಮಾಜಿಕವಾಗಿ ಯಾವ ಸ್ಥಾನದಲ್ಲಿದ್ದಾರೆಂಬುದನ್ನು ಸೂಚಿಸುತ್ತದೆ. ಇವರ ಓಣಿಯಲ್ಲಿ ಕಡಿಮೆಯೆಂದರೆ ೧೦ರಿಂದ ೨೦ರ ವರೆಗೆ ಕುಟುಂಬಗಳಿರುತ್ತವೆ. ಹೆಚ್ಚೆಂದರೆ ೨೦ರಿಂದ ೧೦೦ರ ವರೆಗೆ ಕುಟುಂಬಗಳಿರುತ್ತವೆ.

ಭಾಲ್ಕಿ ತಾಲೂಕಿನಲ್ಲಿಯ ಕೋಳವಾಡಿ ಎಂಬ ಗ್ರಾಮ ಕೋಳಿಗಳದ್ದೇ ಆಗಿದೆ. ಈ ಗ್ರಾಮದಲ್ಲಿ ಸಂಪೂರ್ಣ ಕೋಳಿ ಸಮುದಾಯ ಇರುವುದರಿಂದ ಕೋಳವಾಡಿ ಎಂಬ ಹೆಸರು ಬಂದಿದೆ. ಇವರ ಓಣಿಯಲ್ಲಿ ಯಾವುದೆ ಸಮಸ್ಯೆ ಅಥವಾ ಜಗಳವಿದ್ದರೆ ಓಣಿಯ ವಯಸ್ಸಾದ ಹಿರಿಯರು ಅಥವಾ ಊರಿನ ಪಂಚರು ಇವರ ಸಮಸ್ಯೆ ಬಗೆಹರಿಸುತ್ತಾರೆ. ಇವರ ಹಟ್ಟಿಗಳಲ್ಲಿ ಹೆಚ್ಚಾಗಿ ಗುಡಿಸಲು ಮತ್ತು ಟೀನ್ ಮನೆಗಳೇ ಹೆಚ್ಚು. ಇತ್ತೀಚೆಗೆ ಮಾಳಿಗೆ ಮತ್ತು ತಾರಸಿಯ ಕೆಲವು ಮನೆಗಳು ಕಾಣಸಿಕೊಳ್ಳುತ್ತಿವೆ. ಇವು ಇವರ ಆರ್ಥಿಕ ಸ್ಥಿತಿಯನ್ನು ಪರಿಚಯಿಸುತ್ತದೆ.

**ಕುಟುಂಬ :** ಮಾನವ ವಿಕಾಸದ ಅವಧಿಯಲ್ಲಿ ಆದಿಮಾನವರು ತಮ್ಮಲ್ಲಿಯೇ ರೂಪಿಸಿಕೊಂಡ ಸಾಮಾಜಿಕ ಸಂಘಟನೆಯ ಚಿಕ್ಕ ಘಟಕ ಮತ್ತು ಸಂಸ್ಥೆಯೇ ಕುಟುಂಬ. ಅದು ಮಾನವ ಸಂಸ್ಕೃತಿಯ ಮತ್ತು ನಾಗರಿಕತೆಯ ತೊಟ್ಟಿಲು ಆಗಿರುವುದು (ಮೈತ್ರಿ,ಕೆ.ಎಂ:೧೯೯೪:೨೨೮).

The Family is the only social insitution other than religion which is formally developed in all societies indeed, the term social structure in Anthropology is often used in the sense of family and kinship structure (William,j.Goode:1965:4).

ಟೋಕ್ರೆ ಕೋಳಿಯವರು ಆರ್ಥಿಕವಾಗಿ ತೀರಾ ಹಿಂದುಳಿದಿದ್ದರಿಂದ ಜೀವನ ವಿಧಾನ ತುಂಬ ಸರಳವಾಗಿದೆ. ಅವರ ದುಡಿಮೆಯು ಆಯಾ ದಿನದ ಹೊಟ್ಟೆ ಹೊರೆದುಕೊಳ್ಳಲು ಕೂಡ ಕಷ್ಟವಾಗುತ್ತಿತ್ತು. ಹೀಗಾಗಿ ಹಿಂದೆ ಅವರು ಮನೆ ಕಟ್ಟಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಅವರ ಮನೆಗಳು ಹೆಚ್ಚಾಗಿ ಗುಡಿಸಲುಗಳಾಗಿದ್ದವು. ಪ್ರಸ್ತುತ ಸಮೀಕ್ಷೆಯ ಪ್ರಕಾರ ಶೇಕಡ ೧೫ರಷ್ಟು ಗುಡಿಸಲು, ೫೯ರಷ್ಟು ತಗಡು, ೧೪ರಷ್ಟು ಮಾಳಿಗೆ, ೧ರಷ್ಟು ಆರ್.ಸಿ.ಸಿ., ೯ರಷ್ಟು ಹೆಂಚಿನ ಮನೆಗಳನ್ನು ಹಾಗೂ ೨ರಷ್ಟು ಬಾಡಿಗೆ ಮನೆಯನ್ನು ಹೊಂದಿರುವರು (ವೃತ್ತ ಚಿತ್ರ ೪.೧ ನೋಡಿ). ಮನೆಗಳ ಗಾತ್ರ, ಅವುಗಳ ರಚನೆಗಳನ್ನು ನೋಡಿದಾಗ, ಅವರ ಆರ್ಥಿಕ ಪರಿಸ್ಥಿತಿ ಇನ್ನೂ ಸುಧಾರಿಸಿಲ್ಲೆಂಬುದನ್ನು ಇದರಿಂದ ತಿಳಿದು ಬರುವುದು.

ವೃತ್ತಚಿತ್ರ : ೪.೧ ಟೋಕ್ರೆ ಕೋಳಿಗಳ ವಾಸದ ಮನೆಗಳ ಮಾದರಿ



ಬೀದರ ಜಿಲ್ಲೆಯ ತಾಲೂಕುವಾರು ಟೋಕ್ರೆ ಕೋಳಿ ಬುಡಕಟ್ಟು ಕುಟುಂಬಗಳ ಗುಂಪುಗಳಿಗೆ ಅನುಗುಣವಾಗಿ ಗ್ರಾಮಗಳ ಹಂಚಿಕೆಯನ್ನು ಅವಲೋಕಿಸಿದಾಗ ೧೦ ರಿಂದ ೩೦ ಕುಟುಂಬಗಳು ವಾಸವಾಗಿರುವ ಗ್ರಾಮಗಳೇ ಅಧಿಕ ಸಂಖ್ಯೆಯಲ್ಲಿರುವವು. ಬೆರಳೆಣಿಕೆಯ ಗ್ರಾಮಗಳು ಪೂರ್ಣವಾಗಿ ಟೋಕ್ರೆ ಕೋಳಿ ಬುಡಕಟ್ಟಿನ ಕುಟುಂಬಗಳಿಂದ ಕೂಡಿವೆ. ಉದಾ. ಭಾಲ್ಕಿ ತಾಲೂಕಿನ ಕೋಳವಾಡಿ, ಹುಮ್ನಾಬಾದ ತಾಲೂಕಿನ ಹಳ್ಳಿಖೇಡ ಕೆ. ವಾಡಿ ಮತ್ತು ಬಸವಕಲ್ಯಾಣ ತಾಲೂಕಿನ ಕೌಡಿಯಾಳ ಇತ್ಯಾದಿ.

ಕೋಷ್ಟಕ : ೪.೧ ಟೋಕ್ರೆ ಕೋಳಿ ಬುಡಕಟ್ಟಿನ ಕುಟುಂಬಗಳ ಗುಂಪುವಾರು ಗ್ರಾಮಗಳು

| ಕ್ರ. ಸಂ. | ಕುಟುಂಬಗಳ ಗುಂಪು | ಟೋಕ್ರೆ ಕೋಳಿ ಗ್ರಾಮಗಳು (ಸಂಖ್ಯೆಗಳಲ್ಲಿ) | | | | | ಒಟ್ಟು |
|---|---|---|---|---|---|---|---|
| | | ಔರಾದ | ಬಸವಕಲ್ಯಾಣ | ಭಾಲ್ಕಿ | ಬೀದರ | ಹುಮನಾಬಾದ | |
| ೧. | ೧-೧೦ | ೨೧ | ೧೪ | ೨೧ | ೧೬ | ೫ | ೭೭ |
| ೨. | ೧೧-೨೦ | ೨ | ೪ | ೫ | ೭ | ೬ | ೨೩ |
| ೩. | ೨೧-೩೦ | ೩ | ೭ | ೨ | ೬ | ೧೦ | ೨೭ |
| ೪. | ೩೧-೪೦ | ೨ | ೩ | ೧ | - | ೨ | ೮ |
| ೫. | ೪೧-೫೦ | ೨ | ೧ | ೧ | - | ೪ | ೮ |
| ೬. | ೫೧-೬೦ | - | ೧ | - | - | ೨ | ೩ |
| ೭. | ೬೧-ರ ಮೇಲ್ಪಟ್ಟು | - | - | ೧ | ೧ | ೨ | - |
| ಬೀದರ ಜಿಲ್ಲೆ ಒಟ್ಟು | | ೩೦ | ೩೦ | ೩೦ | ೩೦ | ೩೦ | ೧೫೦ |

ಕುಟುಂಬದ ಸರಾಸರಿ ಗಾತ್ರ : ಟೋಕ್ರೆ ಕೋಳಿಯವರ ಕುಟುಂಬಗಳಲ್ಲಿ ಸುಮಾರು ಆರು ಜನರಾದರೂ ಇರುತ್ತಾರೆ. ಬೀದರಿನ ಐದೂ ತಾಲೂಕುಗಳಲ್ಲಿ ಸರಾಸರಿ ೬ ಜನರಿರುವ ಇವರ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ (ಕೋಷ್ಟಕ ನೋಡಿ ೪.೨). ಬಸವ ಕಲ್ಯಾಣ ಮತ್ತು ಬೀದರ ತಾಲೂಕಿನಲ್ಲಿಯ ಟೋಕ್ರೆ ಕೋಳಿ ಬುಡಕಟ್ಟಿನ ಸರಾಸರಿ ಗಾತ್ರ ಕ್ರಮವಾಗಿ ೫.೮೪ ಮತ್ತು ೫.೮೫ ಇದ್ದರೆ, ಹುಮನಾಬಾದ ಮತ್ತು ಔರಾದ ತಾಲೂಕಿನಲ್ಲಿ ೬.೬ ಮತ್ತು ೬.೧೧ ಇರುವುದು. ಭಾಲ್ಕಿ ತಾಲೂಕಿನಲ್ಲಿ ಇದರ ಗಾತ್ರ ಅತಿ ಹೆಚ್ಚು ಅಂದರೆ ೬.೩೩ ಇರುವುದು. ಜಿಲ್ಲೆಯ ಸರಾಸರಿ ಕುಟುಂಬದ ಗಾತ್ರ ೬.೦೯ ಇರುವುದು. ೧೨ ಕ್ಕಿಂತ ಹೆಚ್ಚು ಜನರಿರುವ ಕುಟುಂಬಗಳ ಪ್ರಮಾಣ ಕಡಿಮೆಯಿವೆ. ಭಾಲ್ಕಿ ತಾಲೂಕಿನ ಹಲಸಿ ಗ್ರಾಮದಲ್ಲಿ ಸುಮಾರು ೩೦ ಜನರ ಕುಟುಂಬವಿರುವುದು ಬೆಳಕಿಗೆ ಬಂದಿದೆ. ಅದೇ ರೀತಿ ಹುಮನಾಬಾದ ತಾಲೂಕಿನ ಶಾಮತಾಬಾದ ಗ್ರಾಮದಲ್ಲಿ ೨೫ ಜನರ ಕುಟುಂಬ ಕಂಡು ಬಂದಿದೆ. ಅತಿ ಕಡಿಮೆಯೆಂದರೆ ಇಬ್ಬರು ಇಲ್ಲವೆ ಒಬ್ಬರು ಇರುವ ಕುಟುಂಬಗಳು ಬಹಳ ವಿರಳ.

**ಕೋಷ್ಟಕ : ೪.೨ ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಕುಟುಂಬಗಳ ಸರಾಸರಿ ಗಾತ್ರ**

| ಕ್ರ.ಸಂ. | ತಾಲೂಕ | ಕುಟುಂಬದ ಸರಾಸರಿ ಗಾತ್ರ |
|---|---|---|
| ೧. | ಔರಾದ | ೬.೧೧ |
| ೨. | ಬಸವಕಲ್ಯಾಣ | ೫.೮೪ |
| ೩. | ಭಾಲ್ಕಿ | ೬.೩೩ |
| ೪. | ಬೀದರ | ೫.೮೫ |
| ೫. | ಹುಮನಾಬಾದ | ೬.೦೬ |
| | ಬೀದರ ಜಿಲ್ಲೆ | ೬.೦೯ |

**ಟೋಕ್ರೆ ಕೋಳಿಯವರ ತಾಲೂಕುವಾರು ಜನಸಂಖ್ಯೆ ಪ್ರಮಾಣ :** ಬೀದರ ಜಿಲ್ಲೆಯ ಟೋಕ್ರೆ ಕೋಳಿ ಸಮುದಾಯವು ಸುಮಾರು ೬೦ ಸಾವಿರ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ಕ್ಷೇತ್ರಕಾರ್ಯ ಕೈಗೊಂಡ ೧೫೦ ಹಳ್ಳಿಗಳಲ್ಲಿ ೧೫,೦೩೭ ಜನಸಂಖ್ಯೆ ಟೋಕ್ರೆ ಕೋಳಿಯವರದಿದೆ. ಅದರಲ್ಲಿ ೭,೯೯ ಪುರುಷರು, ೭೦೩೮ ಸ್ತ್ರೀಯರಿದ್ದಾರೆ. ಬೀದರ ಜಿಲ್ಲೆಯ ಹುಮನಾಬಾದ (೩೨%), ಬೀದರ (೨೦%) ಮತ್ತು ಬಸವಕಲ್ಯಾಣ(೨೦%) ತಾಲೂಕುಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ. ಔರಾದ (೧೬%) ಮತ್ತು ಭಾಲ್ಕಿ (೧೨%) ತಾಲೂಕುಗಳಲ್ಲಿ ಕಡಿಮೆ ಪ್ರಮಾಣದಲ್ಲಿ ವಾಸಿಸುವರು (ವೃತ್ತಚಿತ್ರ೪.೨ ನೋಡಿ).

**ವೃತ್ತಚಿತ್ರ : ೪.೨ ಟೋಕ್ರೆ ಕೋಳಿಗಳ ತಾಲೂಕುವಾರು ಜನಸಂಖ್ಯೆ ಪ್ರಮಾಣ**




**ಲಿಂಗ ಪ್ರಮಾಣ :** ಸ್ತ್ರೀ ಮತ್ತು ಪುರುಷರ ಲಿಂಗ ಪ್ರಮಾಣದಲ್ಲಿ ಅಧಿಕ ವ್ಯತ್ಯಾಸ ಕಂಡು ಬರಬಾರದು. ಅದು ಸಮ ಪ್ರಮಾಣದಲ್ಲಿದ್ದರೆ ಒಳ್ಳೆಯದು. ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಸರಾಸರಿ ಲಿಂಗ ಪ್ರಮಾಣ ೮೮೧ ಅಂದರೆ ಒಂದು ಸಾವಿರ ಪುರುಷರಿಗೆ ೮೮೧ ಸ್ತ್ರೀಯರಿದ್ದಾರೆಂದು ತಿಳಿದು ಬರುವುದು. ಇಷ್ಟಿದ್ದರು ವರದಕ್ಷಿಣೆ ಎಂಬ ಪಿಡುಗು ಜನರನ್ನು ಕಾಡುತ್ತಲಿದೆ. ಇದಕ್ಕೆ ನಿರಕ್ಷರತೆ, ಕೀಳರಿಮೆ ಕಾರಣವೆಂದು ತಿಳಿಯುವುದು. ಒಂದು ವೇಳೆ ಪುರುಷರ ಲಿಂಗ ಪ್ರಮಾಣ ಕಡಿಮೆ ಇದ್ದು ಸ್ತ್ರೀಯರ ಲಿಂಗ ಪ್ರಮಾಣ ಹೆಚ್ಚಾಗಿದ್ದಾರೆ ಬಹುಪತ್ನಿತ್ವ ಕಂಡು ಬರುವುದು. ಜಿಲ್ಲೆಯ ಬಸವಕಲ್ಯಾಣ ತಾಲೂಕಿನಲ್ಲಿ ಕೇವಲ ೮೪೨ ಲಿಂಗ

ಪ್ರಮಾಣವಿದ್ದು ಅತಿ ಕಡಿಮೆಯಾಗಿರುವುದು. ಬೀದರ ತಾಲೂಕಿನಲ್ಲಿ ೯೧೯ ಲಿಂಗ ಪ್ರಮಾಣವಿದ್ದು ಸಮ ಪ್ರಮಾಣಕ್ಕೆ ಸಮೀಸುತ್ತಲಿದೆ(ಕೋಷ್ಟಕ ೪.೩ ನೋಡಿ).

**ಕೋಷ್ಟಕ : ೪.೩ ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಲಿಂಗ ಪ್ರಮಾಣ**

| ಕ್ರ.ಸಂ. | ತಾಲೂಕ | ಗಂಡು | ಹೆಣ್ಣು | ಒಟ್ಟು | ಲಿಂಗ ಪ್ರಮಾಣ |
|---|---|---|---|---|---|
| ೧. | ಔರಾದ | ೧೨೪೧ | ೧೧೦೭ | ೨೩೪೮ | ೮೯೧ |
| ೨. | ಬಸವಕಲ್ಯಾಣ | ೧೬೧೧ | ೧೩೫೮ | ೨೯೬೯ | ೮೪೨ |
| ೩. | ಭಾಲ್ಕಿ | ೯೬೬ | ೮೪೭ | ೧೮೧೩ | ೮೭೬ |
| ೪. | ಬೀದರ | ೧೫೫೭ | ೧೪೩೧ | ೨೯೮೮ | ೯೧೯ |
| ೫. | ಹುಮನಾಬಾದ | ೨೬೨೪ | ೨೨೯೬ | ೪೯೨೦ | ೮೭೯ |
| | ಬೀದರ ಜಿಲ್ಲೆ | ೭೯೯೯ | ೭೦೩೮ | ೧೫೦೩೭ | ೮೮೧ |

ಗಂಡು ಮಗುವಿದ್ದರೆ ಮುಕ್ತಿದೊರೆಯುವುದು, ಸ್ವರ್ಗ ಲಭಿಸುವುದೆಂಬ ಕಲ್ಪನೆ ಜನರಲ್ಲಿದೆ. ಇದು ಕುಟುಂಬದ ಗಾತ್ರವನ್ನು ಹೆಚ್ಚಿಸುತ್ತದೆ. ಈ ಜನರಿಗೆ ಮಕ್ಕಳು ಹೆಚ್ಚಿದ್ದರೆ ಸಂಪತ್ತು ಇದ್ದಂತೆ. ಸಣ್ಣ ಮಕ್ಕಳಿರುವವರೆಗೆ ಸಾಕಿದರೆ ಸಾಕು ಮುಂದೆ ಕೆಲಸ ಮಾಡಿ ದುಡಿದು ತರುತ್ತಾರೆಂಬ ಭಾವನೆ ಇರುವುದರಿಂದಲೇ ಇವರಲ್ಲಿ ಬಡತನ ಹೆಚ್ಚಾಗಿದೆ. "ಕೊಟ್ಟ ಹೆಣ್ಣು ಕುಲದ ಹೊರಗೆ" ಎಂಬ ನಾಣ್ಣುಡಿಯ ಮಾತಿನಂತೆ ಕುಟುಂಬದ ಉದ್ಧಾರಕ್ಕೆ ಗಂಡು ಬೇಕೇಬೇಕು ಎನ್ನುವರು. ಟೋಕ್ರೆ ಕೋಳಿಯ ಕುಟುಂಬದ ವ್ಯವಸ್ಥೆಯನ್ನು ಎರಡು ರೀತಿಯಲ್ಲಿವೆ. ಒಂದು ವಿಭಕ್ತ ಕುಟುಂಬ ಇನ್ನೊಂದು ಅವಿಭಕ್ತ ಕುಟುಂಬ

**ಅವಿಭಕ್ತ ಕುಟುಂಬ :** ಮಗ,ತಂದೆ,ತಾಯಿ,ಅಜ್ಜಿ,ಅಜ್ಜ,ಮೊಮ್ಮಕ್ಕಳು ಒಂದೆ ಕಡೆ ಒಟ್ಟಾಗಿ ಇದ್ದರೆ ಅಂಥ ಕುಟುಂಬಗಳಿಗೆ ಅವಿಭಕ್ತ ಕುಟುಂಬವೆಂದು ಕರೆಯುತ್ತಾರೆ. ಸುಮಾರು ೫೦ ವರ್ಷಗಳ ಹಿಂದೆ ಬಹಳಷ್ಟು ಕುಟುಂಬಗಳು ಅವಿಭಕ್ತ ಕುಟುಂಬಗಳೇ ಆಗಿದ್ದವು. ಇಲ್ಲಿ ಮನೆಯ ಜವಾಬ್ದಾರಿ ಮನೆಯ ಮುಖಂಡ(ಯಜಮಾನ)ನಿಗೆ ಬಿಟ್ಟಿರುತ್ತಾರೆ. ಇಂಥ ಕುಟುಂಬದ ಸದಸ್ಯರ ಕೆಲಸವೆಂದರೆ ಶ್ರಮಿಸುವುದು ಮಾತ್ರ. ಊಟ, ವಸತಿ, ಪೂಜೆ, ಮದುವೆ, ಮುಂಜಿಯಂತಹ ಶುಭಕಾರ್ಯಗಳಲ್ಲಿ ಒಟ್ಟಾಗಿ ಭಾಗವಹಿಸುವರು. ಹಲವಾರು ವಕ್ತೃಗಳು ಅವಿಭಕ್ತ ಕುಟುಂಬವೆ ಸರಿ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಯಾಕೆಂದರೆ ಒಟ್ಟಾಗಿ ಇರುವುದರಿಂದ ಯಾವ ಸಮಸ್ಯೆಯಾಗಲಿ, ಕಷ್ಟಗಳಾಗಲಿ ಬಂದರೆ ಸರಳವಾಗಿ ಎದುರಿಸಲು ಸಾಧ್ಯ. ಕೂಡಿದ್ದರೆ ಮನೆಯಲ್ಲಿ ಲಕ್ಷ್ಮೀ ಇರುವಳು, ಒಡೆದ ಮನೆ ಖಾಲಿ ಇರುವುದು ಎಂದು ವಕ್ತೃಗಳು ಹೇಳುವರು.

ಅವಿಭಕ್ತ ಕುಟುಂಬದಲ್ಲಿ ಸದಸ್ಯರೆಲ್ಲರೂ ಯಾವ ಜವಾಬ್ದಾರಿ ಇಲ್ಲದೆ ಆರಾಮಾಗಿರಬಹುದು. ಒಟ್ಟಾಗಿ ಇದ್ದರೆ ಎಲ್ಲರೂ ಕೆಲಸದಲ್ಲಿ ತೊಡಗಿ ಹಣ ಸಂಪಾದಿಸಿ ಮನೆ ಕಟ್ಟಿ, ಹೊಲ ಖರಿದಿಸಬಹುದು ಎಂದು ವಕ್ತೃಗಳು ತಿಳಿಸಿದ್ದಾರೆ. ಆ ಕುಟುಂಬದ ಸದಸ್ಯರಿಗೆಲ್ಲ ಆರಾಮ ದೊರೆಯುವುದು. ಹೆಣ್ಣು ಮಕ್ಕಳಿಗೆ ಹತ್ತೈದು ದಿವಸ ನೆಮ್ಮದಿಯಾಗಿ ತವರ ಮನೆಗೆ ಹೋಗಿರಲು ಸಾಧ್ಯ. ಮೊಮ್ಮಕಳ ಜವಾಬ್ದಾರಿ ಹಿರಿಯರಾದ ಅಜ್ಜಿಯ ಮೇಲೆ ಇರುವುದರಿಂದ ಮಕ್ಕಳ ತಾಯಂದಿರು ಆರಾಮಾಗಿರುತ್ತಾರೆ.

ವಿಭಕ್ತ ಕುಟುಂಬ : ಕೌಟುಂಬಿಕ ಸಮಸ್ಯೆಗಳು ಮತ್ತು ನಾಗರಿಕತೆಯ ಪ್ರಭಾವದಿಂದ ಪ್ರಸ್ತುತದಲ್ಲಿ ಶೇಕಡ ೯೫ ಪ್ರತಿಶತ ವಿಭಕ್ತ ಕುಟುಂಬಗಳೇ ಕಂಡು ಬರುತ್ತವೆ. ಗಂಡ, ಹೆಂಡತಿ ಅವರ ಮಕ್ಕಳು ಒಂದೆಡೆ ಇರುವುದಕ್ಕೆ ಮಾತ್ರ ವಿಭಕ್ತ ಕುಟಂಬವೆಂದು ಕರೆಯುಬಹುದು. ಮನೆಯ ಕೆಲಸವನ್ನು ಕೂಡಿ ಮಾಡಲಾಗದೆ ಅಥವಾ ಮನೆಯ ಹೆಣ್ಣು ಮಕ್ಕಳಲ್ಲಿ ಯಾವುದೋ ಕಾರಣಾಂತರಗಳಿಂದ ಜಗಳ ಉಂಟಾಗಿರುತ್ತವೆ. ಅವರಿಂದ ಯಾವ ಹೊಸ ಕೆಲಸ ಮಾಡಲು ಸಾಧ್ಯವಾಗುವುದಿಲ್ಲ. ಓದು ಬರಹ ಕಲಿತ ವಿದ್ಯಾವಂತ ಜನರಲ್ಲಿ ವಿಭಕ್ತ ಕುಟುಂಬ ಹೆಚ್ಚಾಗಿ ಕಾಣುವುದು. ಅಂಥಹ ಮನೆಯಲ್ಲಿ ಸ್ತ್ರೀಗೆ ಯಾವ ವಿಶ್ರಾಂತಿ ದೊರೆಯದು.

ಟೋಕ್ರೆ ಕೋಳಿ ಬುಡಕಟ್ಟಿನಲ್ಲಿ ಅವಿಭಕ್ತ ಕುಟುಂಬಗಳಿಗಿಂತ ವಿಭಕ್ತ ಕುಟುಂಬಗಳೇ ಹೆಚ್ಚು. ಏಕ ಪತ್ನಿತ್ವ ಹೆಚ್ಚಾಗಿ ಪಾಲಿಸುತ್ತಾರೆ. ಗೌಣವಾಗಿ ಬಹುಪತ್ನಿತ್ವವೂ ರೂಢಿಯಲ್ಲಿದೆ. ವಿಧವಾ ವಿವಾಹ ಪದ್ಧತಿ ಇದೆ. ವಿವಾಹ ವಿಚ್ಛೆದನೆ ಬಹಳ ವಿರಳ. ಕುಟುಂಬ ಯೋಜನೆಯನ್ನು ಮೊದಲು ಅಳವಡಿಸಿಕೊಳ್ಳುತ್ತಿರಲಿಲ್ಲ. ಇತ್ತೀಚೆಗೆ ಸಾಮಾನ್ಯವಾಗಿ ನಾಲ್ಕು ಮಕ್ಕಳ ನಂತರ ಕುಟುಂಬ ಯೋಜನೆ ಅಳವಡಿಸಿಕೊಳ್ಳುತ್ತಿದ್ದಾರೆ. ಜನರಿಗೆ ವಯಸ್ಸಾದವರಿಗೆ ಸಂದರ್ಶನಕ್ಕೆ ಹೋದಾಗ, ಕುಟುಂಬ ಯೋಜನೆ ಬಗ್ಗೆ ಕೇಳಿದರೆ ಕುಟುಂಬ ಯೋಜನೆ ಮಾಡಿಕೊಳ್ಳುವುದು ಪಾಪದ ಕೆಲಸ. ಮುಂದೆ ಹುಟ್ಟುವ ಮಕ್ಕಳ ಕುತ್ತಿಗೆ ಕತ್ತರಿಸಿದಂತೆ. ಆದ್ದರಿಂದ ನಾವು ಕುಟುಂಬ ಯೋಜನೆ ಮಾಡಿಕೊಳ್ಳುವುದನ್ನು ಇಚ್ಛಿಸುವುದಿಲ್ಲವೆಂದು ಹಲವರು ಅಭಿಪ್ರಾಯಪಟ್ಟರು. ಆದರೆ ಇತ್ತೀಚೆಗೆ ಕುಟುಂಬ ಯೋಜನೆ ಸುಮಾರು ಜನರು ಅಳವಡಿಸಿಕೊಂಡಿದ್ದು ಕಂಡು ಬರುತ್ತದೆ.

ಟೋಕ್ರೆ ಕೋಳಿಯವರು ತಮ್ಮ ಕರುಳು ಬಳ್ಳಿಯಲ್ಲಿ ಅಂದರೆ ರಕ್ತ ಸಂಬಂಧದಲ್ಲಿ ಮದುವೆ ಮಾಡುವರು. ಬಹುದೂರದ, ಅಪರಿಚಿತರ ಹೆಣ್ಣು ತರುವುದಿಲ್ಲ. ತಮ್ಮ ಕುಟುಂಬ ಸುಖ ಶಾಂತಿ ಸಮೃದ್ಧಿಯಿಂದ ಇರಲು, ಸರಳವಾಗಿ ಸಂಸಾರ ಸಾಗಿಸಿಕೊಂಡು ಹೋಗಲು ತಮ್ಮ ಒಳಗಿನ ಹೆಣ್ಣುಗಳನ್ನು ತಂದು ಮದುವೆ ಮಾಡುವರು. ಆದರೆ ಹೆಚ್ಚಾಗಿ ತಮ್ಮ ರಕ್ತ ಸಂಬಂಧದಲ್ಲೇ ಮದುವೆಯಾಗುವುದರಿಂದ ಅಂಗವಿಕಲ ಸಂತಾನಗಳು ಜನಿಸುವುದನ್ನು ಅರಿತುಕೊಂಡು ಇವರು ಹೊರಗಿನ ಅಂದರೆ ದೂರದ ಸಂಬಂಧ ಬೆಳೆಸುತ್ತಿದ್ದಾರೆ. ಹಾಗೆ ಹೊರಗಿನ ಸಂಬಂಧದಿಂದ ಒಳ್ಳೆಯ ಕನ್ಯೆಯೊಂದಿಗೆ ವರದಕ್ಷಿಣೆ ಸಿಗಬಹುದೆಂದು ದೂರದ ಸಂಬಂಧವನ್ನು ಅಪೇಕ್ಷಿಸುವರು.

ಹಿಂದಿನ ಕಾಲದಲ್ಲಿ ಹಲವು ಕುಟುಂಬಗಳ ಘಟಕವೇ ಎಂದು ಹಳ್ಳಿಯಾಗಿರುತ್ತಿತ್ತು. ಇಂದು ಹಾಗೆ ಕಂಡುಬರುವುದಿಲ್ಲ. ಪ್ರತಿ ಓಣಿಯ ಪ್ರತಿ ಮನೆಯ ಜನ ಒಬ್ಬರಿಗೊಬ್ಬರು ಅಣ್ಣ, ತಮ್ಮಂದಿರಂತೆ ಅಕ್ಕತಂಗಿಯರಂತೆ ನಡೆದು ಕೊಳ್ಳುವುದು ಮಾಯವಾಗಿದೆ. ಯಾಕೆಂದರೆ ಇಂದಿನ ಅವಸರದ ಕಾಲದಲ್ಲಿ ಯಾರು ಯಾರಿಗೆ ಮಾಯ ಮಮತೆಯಿಂದ ಮಾತಾಡಿಸುವಷ್ಟು ಸಹನೆ ಉಳಿಸಿಕೊಂಡಿಲ್ಲ. ಸ್ವಾರ್ಥವೇ ಜನರ ಮನದಲ್ಲಿ ಮನೆಮಾಡಿ ಕೊಂಡಿರುವುದು ಕಂಡುಬರುವುದು.

ಟೋಕ್ರೆ ಕೋಳಿಯವರು ದುಶ್ಚಟಗಳಿಗೆ ಬಲಿಯಾಗಿ ಹಾಳಾಗುತ್ತಿದ್ದಾರೆ. ಸಾಮಾನ್ಯವಾಗಿ ಬಡತನ ರೇಖೆಯಿಂದ ಕೆಳಗಿದ್ದ ಇವರು ದಿನನಿತ್ಯ ದುಡಿಯಬೇಕಾಗುತ್ತದೆ. ಶಕ್ತಿ ಮೀರಿ ದುಡಿಯುವ ಇವರು ದಿನನಿತ್ಯ ಮದ್ಯಪಾನ ಸೇವನೆ, ಧೂಮಪಾನ ಮಾಡುತ್ತಾರೆ. ಕಷ್ಟಪಟ್ಟು ದುಡಿದ ಹಣವೆಲ್ಲ ದುಶ್ಚಟಗಳಿಗೆ ಹಾಳು ಮಾಡಿ ಹೆಂಡಿರು

ಅಂಕಿಅಂಶಗಳು ೧೮. ಬೀದರ ತಾಲೂಕಿನ ಟೋಕ್ರೆ ಕೋಳಿ ಬುಡಕಟ್ಟಿನ ಗ್ರಾಮವಾರು, ಲಿಂಗವಾರು ಶೈಕ್ಷಣಿಕ ಸ್ಥಾನಮಾನಗಳು

| ಊರುಗಳು | ಪ್ರಾಥಮಿಕ ಶಿಕ್ಷಣ | | | ಮಾಧ್ಯಮಿಕ ಶಿಕ್ಷಣ | | | ಪ್ರೌಢಶಿಕ್ಷಣ | | | ಪದವಿ ಪೂರ್ವ ಶಿಕ್ಷಣ | | | ಡಿಪ್ಲೋಮ ಶಿಕ್ಷಣ | | | ಪದವಿಯೆತ್ತರ ಶಿಕ್ಷಣ | | | ಸ್ನಾತಕೋತ್ತರ ಶಿಕ್ಷಣ | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
| ೦೧. ಅಗ್ರಹಾರ | ೬ | ೩ | ೯ | ೫ | ೩ | ೮ | ೧೦ | ೪ | ೧೪ | ೫ | ೨ | ೭ | | | | | | | | | |
| ೦೨. ಅಲಿಯಂಬರ | ೧೭ | ೮ | ೨೫ | ೧೩ | ೯ | ೨೨ | ೧೪ | ೩ | ೧೭ | ೩ | | ೩ | | | | | | ೩ | | | |
| ೦೩. ಅಮಲಾಪುರ | ೪ | ೧ | ೫ | ೨ | ೧ | ೩ | ೮ | ೪ | ೧೨ | ೨ | | ೨ | | | | | | | | | |
| ೦೪. ಅಣದೂರವಾಡಿ | ೯ | ೧೩ | ೨೨ | ೧೬ | ೪ | ೨೦ | ೮ | ೫ | ೧೩ | ೩ | | ೩ | | | | | | ೧ | | | |
| ೦೫. ಅಷ್ಟೂರ | ೭ | ೨ | ೯ | ೧೧ | ೬ | ೧೭ | ೧೧ | ೫ | ೧೬ | ೧ | | ೧ | | | | ೧ | | ೧ | | | |
| ೦೬. ಅಯಾಸಪುರ | ೫ | ೪ | ೯ | ೫ | ೩ | ೮ | ೪ | | ೪ | ೧ | | ೧ | | | | | | | | | |
| ೦೭. ಬಗ್ದಲ | ೧ | | ೧ | ೧ | ೫ | ೬ | ೯ | | ೯ | ೧ | | ೧ | | | | | | | | | |
| ೦೮. ಬೀದರ ನಗರ | | | | | | | | | | | | | | | | | | | | | |
| ೧. ಲಾಡಗೇರಿ | ೪ | ೫ | ೯ | ೧೨ | ೭ | ೧೯ | ೧೧ | ೪ | ೧೫ | ೨ | | ೨ | | | | ೨ | ೧ | ೩ | | | |
| ೨. ನಾವದಗೇರಿ | ೧೨ | ೭ | ೧೯ | ೮ | ೮ | ೧೬ | ೧೦ | ೧೦ | ೨೦ | ೬ | ೧ | ೭ | | | | ೫ | | ೫ | | | |
| ೩. ಶಾಹಪುರ ಗೇಟ | ೪ | ೯ | ೧೩ | ೧೨ | ೧೦ | ೨೨ | ೧೧ | ೩ | ೧೪ | ೧ | ೧ | ೨ | | | | | ೧ | ೧ | | | |
| ೦೯. ಬೊಂಬಳಗಿ | ೯ | ೮ | ೧೭ | ೧೮ | ೨೪ | ೪೨ | ೧೯ | ೧೦ | ೨೯ | ೬ | ೧ | ೭ | | | ೨ | | | ೪ | | | |
| ೧೦. ಬುಧೇರಾ | ೩ | ೧ | ೪ | ೧ | ೫ | ೬ | ೬ | ೬ | ೧೨ | ೪ | ೧ | ೫ | | | | | | [illegible] | ೧ | | ೧ |
| ೧೧. ಚಾಂಬೋಳ | ೫ | ೨ | ೭ | ೭ | ೧ | ೮ | ೮ | ೪ | ೧೨ | ೪ | ೨ | ೬ | | | ೧ | | | ೩ | | | |

ಬ) ಒಕ್ಕಲಿಗರಾದುದರಿಂದ

೧) ಬಾಣಿನವರು ೨) ಹಗ್ಗದವರು ೩) ಬಾರಿಕೋಲಿನವರು ೪) ನೇಗಿಲದವರು ೫) ಜಲ್ರಾಯವರು ೬) ಬುಕ್ಕದವರು

ಕ) ಪೂಜಾರಿಗಳಾದುದರಿಂದ

೧) ಘಂಟೆಯವರು ೨) ಚೌಡಿಕೆಯವರು ೩) ಚಂದ್ರದವರು ೪) ಅರಿಷಿಣದವರು

ಡ) ನೀರಿನ ವೃತ್ತಿಯಿಂದ

೧) ಮೀನಿನವರು ೨) ಮುತ್ತಿನವರು ೩) ಡೋಣಿಯವರು ೪) ಕೊಡಮಿಯವರು

ಇ) ಬೇಟೆಯ ವೃತ್ತಿಯಿಂದ

೧) ಹುಲಿಯವರು ೨) ಮೊಲದವರು ೩) ಎಳ್ಳಿಡವರು ೪) ಕರಡಿಯವರು

ಒಳಾಡಳಿತ ವ್ಯವಸ್ಥೆ : ಟೋಕ್ರೆ ಕೋಳಿಯವರಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಿದೆ. ಮನೆಯ ಎಲ್ಲಾ ನಿರ್ವಹಣೆಯ ಜವಾಬ್ದಾರಿ ಹಿರಿಯನಾದ ತಂದೆಯ ಮೇಲಿರುತ್ತದೆ. ಅವರ ಆಸ್ತಿ ಅವರ ನಂತರ ವರ್ಗವಾಗುವುದು ಗಂಡು ಮಕ್ಕಳಿಗೆ ಹೊರತು ಹೆಣ್ಣು ಮಕ್ಕಳಿಗಲ್ಲ. ಒಂದು ಓಣಿಯಲ್ಲಿ ಎಲ್ಲಾ ಕುಟುಂಬಗಳೂ ಒಂದೇ ಎಂಬಂತೆ ಇರುತ್ತಾರೆ. ಇವರಲ್ಲಿ ಹೆಣ್ಣುಮಕ್ಕಳು ಮಕ್ಕಳ ಪಾಲನೆ ಪೋಷಣೆ ನೋಡಿಕೊಂಡು ಮನೆಯಲ್ಲಿರುತ್ತಾರೆ. ಕಡು ಬಡವರಾದರೆ ಬೇರೆಯವರ ಹೊಲದಲ್ಲಿ, ಮನೆಯಲ್ಲಿ ಕೂಲಿ ಕೆಲಸಕ್ಕಾಗಿ ಹೋಗುತ್ತಾರೆ. ವಯಸ್ಸಾದವರು ಮನೆಯಲ್ಲಿದ್ದು ಮೊಮ್ಮಕ್ಕಳನ್ನು ನೋಡಿಕೊಳ್ಳುತ್ತಾರೆ.

ಟೋಕ್ರೆ ಕೋಳಿಯವರಿಗೆ ಕೋರ್ಟು ಕಛೇರಿಯ ಅಗತ್ಯಬಿದ್ದದು ಕಡಿಮೆ. ಯಾಕೆಂದರೆ ಅವರಿಗೆ ಆಸ್ತಿಯಿಲ್ಲ. ಇವರಲ್ಲಿ ಜಗಳವೇ ಇಲ್ಲವೆಂದಲ್ಲ ಜಗಳವಾಗುತ್ತವೆ. ಊರಿನ ಮುಖಂಡರಿಂದಲೇ, ಕುಲದ ವಯಸ್ಸಾದ ಹಿರಿಯ ವ್ಯಕ್ತಿಗಳಿಂದಲೆ ನ್ಯಾಯ ಬಗೆಹರಿಸಿಕೊಳ್ಳುತ್ತಾರೆ. ಇವರು ತಪ್ಪಿತಸ್ತರಿಗೆ ದಂಡವಿಧಿಸುತ್ತಾರೆ. ಅವರಲ್ಲಿ ಅಂತರ್ಜಾತಿ ವಿವಾಹ ಮತ್ತು ವಿಧಯಾಗಿದ್ದು ಗರ್ಭಧರಿಸಿದಂತಹ ಪ್ರಕರಣಗಳನ್ನು ಅವರು ಸಹಿಸಲಾರದೇ ಗಂಡು ಮತ್ತು ಹೆಣ್ಣಿಗೆ ಕುಲದಿಂದ ಬಹಿಷ್ಕರಿಸುವರಲ್ಲದೆ ಅವರಿಗೆ ಶುಭ ಕಾರ್ಯಗಳಲ್ಲಿ ಪಾಲ್ಗೊಳ್ಳಲು ಅವಕಾಶ ನೀಡುವುದಿಲ್ಲ.

ಡಾ.ಚೆನ್ನಣ್ಣ ವಾಲೀಕಾರರು ಟೋಕ್ರೆ ಕೋಳಿಯವರ ಒಳಾಡಳಿತ ವ್ಯವಸ್ಥೆಯನ್ನು ಈ ಕೆಳಗಿನ ಮೂರು ರೀತಿಯಲ್ಲಿರುವುದನ್ನು ಅವಲೋಕಿಸಿದ್ದಾರೆ. ಅವು

೧.ನ್ಯಾಯಂಗ-ದೇವರು ಧರ್ಮ ನ್ಯಾಯ ನೀತಿಗಳನ್ನು ಕುರಿತು ಬುಡಕಟ್ಟಿನ ಹಿರಿಯರಾದ ಅಜ್ಜ ಅಜ್ಜಿಯವರು ರೂಪಿಸುವರು ಮತ್ತು ನೋಡಿಕೊಳ್ಳುವರು.

೨.ರಾಜ್ಯಾಂಗ-ನ್ಯಾಯಾಂಗ ಹೇಳುವಂತೆ ಕಾಯ್ದೆ ಕಾನೂನುಗಳನ್ನು ರೂಪಿಸಿ ಕುಟುಂಬವನ್ನು ನಡೆಸಿಕೊಂಡು ಹೋಗುವ ವಿಧಿವಿಧಾನಗಳನ್ನು ಮಧ್ಯಮ ವಯಸ್ಸಿನ ತಂದೆತಾಯಿಗಳು ಮಾಡುವವರು..

ಕಾರ್ಯಾಂಗ-ನ್ಯಾಯಾಂಗ ಹೇಳಿದಂತೆ ನ್ಯಾಯ ನೀತಿಯಿಂದ ರಾಜ್ಯಾಂಗ ಹೇಳಿದಂತೆ ಸರಿಯಾದ ವಿಧಿವಿಧಾನಗಳಿಂದ ಹಕ್ಕು ಕರ್ತವ್ಯಗಳಿಗಾಗಿ ಕೆಲಸಮಾಡುವವರು ಸಣ್ಣವರು, ಯುವಕರು, ಅಣ್ಣತಮ್ಮರು, ಅಕ್ಕತಂಗಿಯರು, ಕಕ್ಕ, ಕಕ್ಕಿಯರು ಮನೆಯ ಎಲ್ಲಾ ಕೆಲಸ ಹಂಚಿಕೊಂಡು ಮಾಡುವವರು''.

ಮೇಲಿನ ಒಳಾಡಳಿತ ವ್ಯವಸ್ಥೆಗಳನ್ನು ಅವಿಭಕ್ತ ಕುಟುಂಬಕ್ಕೆ ಹೋಲುವಂತಾಗಿದೆ. ವಿಭಕ್ತ ಕುಟುಂಬದಲ್ಲಿ ಗಂಡ ಹೆಂಡತಿ ಮಕ್ಕಳಷ್ಟೆ ಇರುವುದರಿಂದ ಮೇಲಿನ ಹೇಳಿಕೆಗಳಾದ ನ್ಯಾಯಾಂಗ, ರಾಜ್ಯಾಂಗ, ಕಾರ್ಯಾಂಗ ವ್ಯವಸ್ಥೆಗಳೆಲ್ಲ ಗಂಡ ಹೆಂಡತಿ ಮಕ್ಕಳೆ ನೋಡಿಕೊಳ್ಳಬೇಕಾಗುತ್ತದೆ.

ಒಟ್ಟಿನಲ್ಲಿ ನಿಸರ್ಗದ ಮಡಿಲಲ್ಲಿ ಸಾಹಸ ಪ್ರವೃತ್ತಿಯಿಂದ ಬೇಟೆಯನ್ನು ಅವಲಂಬಿಸಿ ಬದುಕಿದ ಇವರ ಪೂರ್ವಜರು ತಮ್ಮದೆ ಆದ ರೀತಿ ರೀವಾಜಗಳನ್ನು ಬದುಕಿನುದ್ದಕ್ಕೂ ಕಟ್ಟು ನಿಟ್ಟಾಗಿ ಪಾಲಿಸಿಕೊಂಡು ಬಂದವರು. ಆದರೆ ಈ ಸಮುದಾಯದ ಮಕ್ಕಳು ಶಾಲೆಗೆ ಹೋಗಿ ವಿದ್ಯಾಭ್ಯಾಸ ಮಾಡುತ್ತಿರುವುದರ ಪರಿಣಾಮವಾಗಿ ಅವರ ನಡವಳಿಕೆಗಳಲ್ಲಿ, ನಿತ್ಯ ಜೀವನ ಕ್ರಮದಲ್ಲಿ ಅನೇಕ ಮಾರ್ಪಾಟುಗಳಾಗುತ್ತಿವೆ. ಹೀಗೆ ಆಗುವುದು ಕೂಡ ಒಳ್ಳೆಯದೆ. ಅವರಲ್ಲಿಲ್ಲೂ ಪರಿವರ್ತನೆ ಕಾಣಬೇಕಾಗಿದೆ.

**ಊಟೋಪಚಾರ :** ಪಾಕಶಾಸ್ತ್ರ ಭಾರತದಲ್ಲಿ ಪ್ರಸಿದ್ಧ ಕಲೆಯಾಗಿದೆ. ಆಹಾರ ಪದ್ಧತಿ ಬಹುವೈವಿದ್ಯವಾಗಿದೆ. ಋತುಮಾನಕ್ಕೆ ಅವಲಂಬಿಸಿ ಜನಾಂಗಕ್ಕೆ ಅವಲಂಬಿಸಿ, ಪ್ರಾದೇಶಿಕತೆಗೆ ಅನುಗುಣವಾಗಿ ಆಹಾರ ಊಟ ಮಾಡುತ್ತಾರೆ.

ಕನಕದಾಸರು ಹೇಳುವಂತೆ "ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಎನ್ನುವಂತೆ ಜೀವವುಳ್ಳ ಪ್ರತಿಯೊಂದು ಪ್ರಾಣಿಗೂ ಆಹಾರ ಬೇಕಬೇಕು. ಆಹಾರವಿಲ್ಲದೆ ಬದುಕಲು ಅಸಾಧ್ಯ. ಅದೇ ಆಹಾರಕ್ಕಾಗಿ ಮಾನವ ಹಗಲು ರಾತ್ರಿ ಕಷ್ಟ ಪಟ್ಟು ದುಡಿಯುತ್ತಾನೆ. ದುಡಿದರೂ ಸಹ ಒಂದೊತ್ತು ಆಹಾರ ದೊರೆಯಲಾರದ ಪರಿಸ್ಥಿತಿ ಇರುತ್ತದೆ. ಇಡೀ ಮಾನವ ಜನಾಂಗವೆಲ್ಲಾ ಒಂದೇ ರೀತಿಯ ಆಹಾರ ಸೇವಿಸುವುದಿಲ್ಲ. ಪರಿಸರಕ್ಕೆ ಅನುಗುಣವಾಗಿ ಆಯಾ ಪ್ರದೇಶದಲ್ಲಿ ದೊರೆಯುವ ಆಹಾರ ಸೇವಿಸುವರು. ಒಂದು ಪ್ರದೇಶದಲ್ಲಿ ವಾಸಿಸುವ ಜನರು ಸೇವಿಸುವಂಥ ಆಹಾರ ಇನ್ನೊಂದು ಪ್ರದೇಶದವರಿಗೆ ಅದು ಇಷ್ಟವಾಗದೆ ಇರಬಹುದು. ಯಾಕೆಂದರೆ ಅದು ಅವರ ಅಭ್ಯಾಸದಿಂದ ಆಗುವ ಪ್ರಭಾವವೇ ಕಾರಣವಿರಬಹುದು. ಉದಾಹರಣೆಗೆ ಬೀದರ ಜಿಲ್ಲೆಯವರು ತಿನ್ನುವ ಜೋಳದ ರೊಟ್ಟಿಯಾಗಲಿ, ಪುಂಡಿಪಲ್ಯ ಬೆಂಗಳೂರಿನವರು ತಿನ್ನದೆ ಇರಬಹುದು.

ಟೋಕ್ರೆ ಕೋಳಿಯವರು ಮುಲತಃ ಬೇಟೆಗಾರರಾದ್ದರಿಂದ ಮಾಂಸಾಹಾರವೇ ಇವರಿಗೆ ಇಷ್ಟ. ಕುರಿ, ಕೋಳಿ, ಮೇಕೆ, ಮೀನು, ಮೊಲ ಮೊದಲಾದವನ್ನು ಸಾಮಾನ್ಯವಾಗಿ ತಿನ್ನುತ್ತಾರೆ. ಬೀದರ ಜಿಲ್ಲೆಯ ಹನ್ನೆರಡನೆಯ ಶತಮಾನದ ಶರಣ ಅಂಬಿಗಾರ ಚೌಡಯ್ಯನ ಪ್ರಭಾವಕ್ಕೆ ಇಲ್ಲಿಯ ಟೋಕ್ರೆಕೋಶಳಿಗಳು ಒಳಗಾಗದೆ ತಮ್ಮ ಆಹಾರದಲ್ಲಿ ಯಾವ ಬದಲಾವಣೆಗಳನ್ನು ಮಾಡಿಕೊಳ್ಳಲಿಲ್ಲವೆಂದು ಕಂಡು ಬರುತ್ತದೆ.

ಟೋಕ್ರೆ ಕೋಳಿಯವರು ಮೂಲತಃ ಮಾಂಸಾಹಾರಿಗಳಾದರೂ ಪ್ರಸ್ತುತದಲ್ಲಿ ದಿನಾಲು ಮಾಂಸಾಹಾರ ಸೇವಿಸಲು ಸಾಧ್ಯವಿಲ್ಲ. ಕಾರಣ ಬಡತನ ಹೆಚ್ಚಾಗಿದ್ದರಿಂದ ಇವರು ದಿನಾಲು ಹಣ ಕೊಟ್ಟು ಮಾಂಸ ತಂದು ಸೇವಿಸಲು ಸಾಧ್ಯವಿಲ್ಲ. ಆದ್ದರಿಂದ ದಿನನಿತ್ಯದ ಸಸ್ಯಾಹಾರವಾದ ರೊಟ್ಟಿ, ಅನ್ನ, ಸಾರು ತರಕಾರಿ ಸೇವಿಸುವರು. ಮೊದಲು ಅನ್ನ ಕೂಡ ಸೇವಿಸುತ್ತಿದ್ದಿಲ್ಲ. ರೊಟ್ಟಿ, ಬೇಳೆ ಮಾತ್ರ ಸೇವಿಸುತ್ತಿದ್ದರು. ಎಳ್ಳಾಮಾಸ್ಯೆ, ಸಂಕ್ರಾಂತಿ, ಕಾರಹುಣ್ಣಿಮೆ ಮೊದಲಾದ ಹಬ್ಬದ ಮಾರನೆಯ ದಿನವನ್ನು ಕರಿಯೆಂದು ಆಚರಿಸಿ ಅಂದು ಮಾಂಸಾಹಾರವನ್ನು ಸೇವಿಸುವರು. ಇವರು ಪ್ರಾಣಿಗಳ ಮಾಂಸ ಸೇವನೆ ಮಾಡಿದರೂ ಮೇಕೆಯ ಮಾಂಸ ಪ್ರಿಯವೆಂದು ಹೇಳುವರು. ಯಾಕೆಂದರೆ ಇದು ನಂಜು ಇರುವುದಿಲ್ಲವೆಂದು ತಿಳಿಸುವರು.

ಹಬ್ಬ ಹರಿದಿನಗಳಲ್ಲಿ ಸಿಹಿ ಪದಾರ್ಥಗಳಾದ ಹೋಳಿಗೆ, ಪಾಯಸದೊಂದಿಗೆ ಸಾಂಬಾರ, ಅನ್ನ ಮೊದಲಾದವುಗಳನ್ನು ಮಾಡುತ್ತಾರೆ. ಇವರಲ್ಲಿ ಹಾಲು ಹೈನಗಳ ಬಳಕೆ ಮೊದಲಿನಿಂದಲೂ ಇರುವುದು. ಒಂದೆ ಹಾಲು, ತುಪ್ಪ, ಮೊಸರುಗಳ ಮಾರಾಟ ಮಾಡುತ್ತಿರಲಿಲ್ಲ. ಆದರೆ ಇಂದಿನ ದಿನಗಳಲ್ಲಿ ವ್ಯಾಪಾರ ಮನೋಭಾವ ಬೆಳೆದು ಮನೆಯಲ್ಲಿ ಹೈನ ಉಳಿಸಿಕೊಳ್ಳುತ್ತಿಲ್ಲ. ಹಿಂದಿನ ಜನ ಹೈನ ಊಟ ಮಾಡಿ ಸಂತೃಪ್ತರಾಗಿದ್ದು ದಷ್ಟಪುಷ್ಟರಾಗಿರುತ್ತಿದ್ದರು. ತರಕಾರಿ ಅಥವಾ ಬೇಳೆ ಕಡಿಮೆ ಬಳಸುತ್ತಿದ್ದರು. ಬೆಳಿಗ್ಗೆ ನ್ಯಾಹರಿ (ಟಿಫಿನ್) ಮಾಡಬೇಕಾದರೆ ಮೊಸರು ಪುಡಿಕಾರ, ಉಪ್ಪಿನಕಾಯಿ ರೊಟ್ಟಿಯೊಂದಿಗೆ ಊಟ ಮಾಡಿ ಅದನ್ನೆ ಕಟ್ಟಿಕೊಂಡು ಕೆಲಸಕ್ಕೆ ಹೋಗುತ್ತಿದ್ದರು. ಆದರೆ ಇತ್ತೀಚಿಗೆ ಬೆಳಿಗ್ಗೆ ನ್ಯಾಹರಿ ಬದಲಾಗಿ ಚಾ ಕುಡಿಯುವುದು ರೂಢಿಯಾಗಿದೆ. ಇದರಿಂದ ಯಾವ ವಿಟಾಮಿನ್ ದೊರೆಯದೇ ಶಕ್ತಿಯಸ್ನು ಹಾಳಾಗುವುದು. ಆದುದರಿಂದಲೇ ಇಂದಿನ ಜನಗಳ ಕೈಯಿಂದ ಹೆಚ್ಚು ಕೆಲಸ ಮಾಡಲು ಸಾಧ್ಯವಾಗುತ್ತಿಲ್ಲ.

**ಉಡುಗೆ ತೊಡುಗೆ** :ಹಲವು ಬುಡಕಟ್ಟಿನವರನ್ನು ಅವರ ಉಡುಗೆ ತೊಡುಗೆಗಳಿಂದ ಅವರು ಯಾವ ಸಮುದಾಯದವರೆಂಬುದನ್ನು ಗುರುತಿಸಬಹುದು. ಆದರೆ ಟೋಕ್ರೆ ಕೋಳಿ ಬುಡಕಟ್ಟಿನವರಲ್ಲಿ ಅಂಥಹ ವಿಶೇಷ ಉಡುಗೆ ತೊಡುಗೆಗಳು ಕಂಡು ಬರುವುದಿಲ್ಲ. ಇವರ ಉಡುಗೆ ತೊಡುಗೆಗಳು ಸಾಮಾನ್ಯ ವರ್ಗದವರ ಉಡುಗೆ ತೊಡೆಗೆಗಳ ರೀತಿಯಲ್ಲಿಯೇ ಇರುತ್ತವೆ. ವಯಸ್ಸಾದ ಗಂಡಸರು ತಲೆಗೆ ರೂಮಾಲು (ಮುಂಡಾಸು) ಅಥವಾ ಟೋಪಿಯನ್ನು ಧರಿಸುತ್ತಾರೆ. ಖಾದಿ ಬಟ್ಟೆಯ ತೋಳಿಲ್ಲದ ಅಂಗಿ, ಧೋತರ (ಪಂಚೆ) ಉಡುವರು. ಬಹಳ ವಯಸ್ಸಾದವರು ಬಾರಾಬಂಧಿ  ಅಂಗಿ ತೋಡುವರು. ಆದರೆ ಇಂದಿನ ಯುವಕರು ತಲೆಗೆ ಮುಂಡಾಸು ತೊಡುವುದಿಲ್ಲ. ಪೂರ್ಣ ತೋಳಿನ ಅಂಗಿ, ಪ್ಯಾಂಟು, ಲುಂಗಿ ತೊಡುತ್ತಿರುವುದು ಕಂಡು ಬರುವುದು. ಸಣ್ಣ ಹುಡುಗರು ಅರ್ಧ ತೋಳಿನ ಅಂಗಿ, ಸಣ್ಣ ಚಡ್ಡಿ ಉಡುವರು. ಸಣ್ಣ ಮಗುವಿನ ತಲೆಗೆ ಕುಲಾಯಿ, ಮೈಯಲ್ಲಿ ಅಂಗಿ ಮಾತ್ರ ಇರುವುದು, ಚಡ್ಡಿ ತೊಡಿಸುವುದು ವಿರಳ.

ಟೊಕ್ರೆ ಕೋಳಿಯವರಲ್ಲಿ ಗಂಡು ಅಥವಾ ಹೆಣ್ಣು ಮಗುವಾದಾಗ ಮಗು ಹುಟ್ಟಿದ ಸವ್ವಾ ತಿಂಗಳಿಗೆ ಇಲ್ಲವೆ ಮೂರು ತಿಂಗಳ ಒಳಗಾಗಿ ಅದಕ್ಕೆ ತಾಮ್ರದ ಕಡ್ಡಿಯಿಂದ ಕಿವಿ ಚುಚ್ಚುವರು. ಆರ್ಥಿಕ ಪರಿಸ್ಥಿತಿ ಚೆನ್ನಾಗಿದ್ದರೆ ಬಂಗಾರದ ಮುರುವು ಇಲ್ಲವೆ ಲೋಲಕ ಹಾಕುವರು. ಇವರಲ್ಲಿ ತಾಮ್ರದ ಕೊಂಡಿಗಳನ್ನು ಧರಿಸುವ ಮಕ್ಕಳೇ ಹೆಚ್ಚಾಗಿ ಕಂಡು ಬರುತ್ತಾರೆ. ಗಂಡು ಮಕ್ಕಳಿಗೆ ಒಂದು ವರ್ಷದವರೆಗೆ ಕಿವಿತೊಡುಗೆ ಇಟ್ಟಿರುತ್ತಾರೆ. ಮಗು ಹೆಣ್ಣಾಗಿದ್ದರೆ ಅದನ್ನು ತೆಗೆದು ಬೇವಿನ ಕಡ್ಡಿ(ಖಡ್ಡಿ)ಯನ್ನು ಅಥವಾ ಖರಿದಿಸಿದ ಹಿತ್ತಾಳೆ ಓಲೆ ಅಥವಾ ರಿಂಗ ಇಟ್ಟಿರುತ್ತಾರೆ. ಗಂಡು ಮಗುವಿಗೆ ಟೊಂಕದಲ್ಲಿ ಬೆಳ್ಳಿಯ ಅಥವಾ ನೂಲಿನ ಉಡುದಾರ ಕಟ್ಟುತ್ತಾರೆ. ಕೊರಳಲ್ಲಿ ಶಟವಿ ರೂಪ, ಕಾಸಿದಾರ, ದಿಟ್ಟಿ (ದೃಷ್ಟಿ) ಮಣಿ ಹಾಕುವರು. ಕೈಯಲ್ಲಿ ಲೈಟಿನ ಮಣಿ, ಕರಿದಾರ ಇತ್ತೀಚಿಗೆ ಬಂಗಾರ ಮಣಿ ಕಟ್ಟುವರು. ಇವುಗಳಿಂದ ಮಗುವಿಗೆ ಜನರ ದೃಷ್ಟಿ ತಾಗದಿರವಲೆಂದು ಕಟ್ಟುತ್ತಾರೆ. ಕಾಲಲ್ಲಿ ಬೆಳ್ಳಿಯ, ತಾಮ್ರದ ಕಡ್ಗ ಹಾಕಿರುತ್ತಾರೆ. ಇಂದಿನ ಮಕ್ಕಳಿಗೆ ಹಲ್ಲು ಸರಳವಾಗಿ ಬರಲೆಂದು ಮೋತಿ ಎಂಬುದನ್ನು ಕೊರಳಲ್ಲಿ ಹಾಕುತ್ತಿದ್ದಾರೆ.

ಟೋಕ್ರೆ ಕೋಳಿ ಗಂಡಸರಿಗೆ ವಿಶೇಷ ತೊಡುಗೆ ಕಂಡು ಬರುವುದಿಲ್ಲ. ಕೆಲವರಿಗೆ ಮಾತ್ರ ಬೆಳ್ಳಿಯ ಉಡುದಾರ ಕೈಯಲ್ಲಿ ಗಡಿಯಾರ, ಬೆರಳಲ್ಲಿ ತಾಮ್ರ, ಬಂಗಾರ ಅಥವಾ ಬೆಳ್ಳಿ ಉಂಗುರ ಕೊರಳಲ್ಲಿ ಕಾಶಿದಾರ, ಸರಪಳಿ ಇರುವುದನ್ನು ಕಂಡು ಬರುತ್ತದೆ. ಆರ್ಥಿಕ ಪರಿಸ್ಥಿತಿಯಿಂದ ಹಿಂದುಳಿದವರಿಗೆ ಟೊಂಕದಲ್ಲಿ ನೂಲಿನ ಉಡುದಾರ ಮಾತ್ರ ಇರುತ್ತದೆ.

ಟೋಕ್ರೆ ಕೋಳಿಯ ವಯಸ್ಸಾದ ಹೆಂಗಸರು ೯ ವಾರ ಸೀರೆ, ಗುಂಡಿ ಇಲ್ಲದ ಕುಪ್ಪಸ ತೊಡುವರು. ಹರೆಯದ ಹೆಂಗಸರು ಸಣ್ಣ ಸೀರೆ, ಲಂಗ, ಗುಂಡಿಯ ಪೋಲಕಾ(ಕುಪ್ಪಸ) ತೋಡುತ್ತಾರೆ. ಸಣ್ಣ ಮಕ್ಕಳು ಬರಿ ಅಂಗಿಯನ್ನು ತೋಡುವರು. ಹೆಚ್ಚಾಗಿ ಮುದುಕಿಯರಿಗೆ ಕಿವಿಯಲ್ಲಿ ಏನು ಇರುವುದಿಲ್ಲ. ಕೊರಳಲ್ಲಿ ೧ ಎಳೆ ಕರಿಮಣಿ ಸರ ಮಾತ್ರ ಇರುತ್ತದೆ. ಕೈಯಲ್ಲಿ ದೇವರ ಛಾಯ ಇರುವ ತಾಮ್ರದ ಉಂಗುರ ಹಾಕಿಕೊಳ್ಳುವರು. ಹೆಂಗಸರು ಮುತ್ತಿನ ಸರ, ಮಂಗಳಸೂತ್ರ, ಕಾಲಲ್ಲಿ ಬೆಳ್ಳಿಯ ಕಾಲುಂಗರ, ಚೈನ, ಕಡಗ, ಬೆರಳಲ್ಲಿ ತಾಮ್ರ, ಹಿತ್ತಾಳಿ, ಬೆಳ್ಳಿ, ಬಂಗಾರ ಯಾವುದಾದರೂ ಧಾತುವಿನ ಉಂಗುರ ಹಾಕಿಕೊಳ್ಳುತ್ತಾರೆ. ಕಿವಿಯಲ್ಲಿ ಬುಗುಡಿ, ಕತ್ತರಬಾಳೆ, ಘಂಟಿ, ಬೆಂಡೋಲಿ, ಘೋಸ, ಮೂಗಿನಲ್ಲಿ ಮೂಗಬಟ್ಟು ನತ್ತು ಹಾಕಿಕೊಳ್ಳುತ್ತಾರೆ. ಕೊರಳಲ್ಲಿ ಚಂದನ ಹಾರ, ಗೋಧಿಮಣಿ, ಘುಳ್ಳ, ಗುಂಡಿನಸರ ಬೊರಮಳ, ಕಂಠಿಹಾರ, ಗೆಜ್ಜೆಟಿಕೆ, ವಜ್ರಟಿಕೆ ಇರುವವು. ಕೈಯಲ್ಲಿ ಬಿಲ್‌ವರ, ಪಾಟಲಿ, ತೋಡ್ಯಾ, ರೊಟ್ಟಿಕಡಗ, ಗಜರ್ಯಾ ಇರುವವು. ಇವರ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ತೊಡಿಗೆಗಳನ್ನು ತೊಡುವರು.

**ಕೋಷ್ಟಕ : ४.४ ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಕುತ್ತಿಗೆಯ ತೊಡಗೆಗಳ ಪಟ್ಟಿ**

| ಕ್ರ.ಸಂ. | ತೊಡುಗೆಗಳು | ತೂಕ | ಸಂಖ್ಯೆ |
|---|---|---|---|
| ೧ | ನಾನು | ೨ ತೋಲಿ | ೧ |
| ೨ | ಲಾಕಿಟು | ೧ರಿಂದ೧/೨ತೋಲಿ | ೧ |
| ೩ | ಗುಂಡಿನ ಸರ | ೧ ತೋಲಿ | ೧ |
| ೪ | ಅಪ್ಪಪೈಲಿಮಣಿ | ೫ ಮಾಸಿ | ೮೦ ಮಣಿ |
| ೫ | ತಾಳಿ | ೨ರಿದ೧/೨ಮಾಸಿ | ೨ |
| ೬ | ಪತ್ತಿ | ೬ಮಾಸಿ | ೧೨ |
| ೭ | ಬೋರಮಳ | ೧ತೋಲಿ | ೧ |
| ೮ | ಗೋಧಿಮಣಿ | ೧ತೋಲಿ | ೪೫ ಸಣ್ಣಮಣಿ |
| ೯ | ಅಂಟಿಗುಂಡ | ೬ಮಾಸಿ | ೮೦ ಮಣಿ |
| ೧೦ | ಮಂಗಳಸೂತ್ರ ಬಂಗಾರದು | ೩ರಿಂದ ೫ತೋಲಿ | ೧ ಸರಳಿಯಾಕಾರದಲ್ಲಿ |
| ೧೧ | ಮುತ್ತಿನಸರ | ೧ತೋಲಿ | ಮುತ್ತುಗಳು ಬಂಗಾರದಲ್ಲಿ ಪೋಣಿಸುವರು ೧ |
| ೧೨ | ಎಲೆ ೭ ಮತ್ತು ಸಣ್ಣಮಣಿ | ೬ಮಾಸಿ | ಜಿರಾಮಣಿಯೊಡನೆ ೭ ಎಲೆಗಳ ಸರ ೧ |

ಕೋಷ್ಟಕ : ೪.೫ ಟೋಕ್ರೆ ಕೋಳಿ ಬುಡಕಟ್ಟಿನ ಕಿವಿಯ ತೊಡುಗೆಗಳ ಪಟ್ಟಿ

| ಕ್ರ.ಸಂ. | ತೊಡುಗೆಗಳು | ತೂಕ | ಸಂಖ್ಯೆ |
|---|---|---|---|
| ೧ | ಬೆಂಡೋಲಿ | ೩ಮಾಸಿ | ೨ |
| ೨ | ಜುಮಕಿ | ೫ಮಾಸಿ | ೨ |
| ೩ | ಸರಪಳಿ | ೪ಮಾಸಿ | ೨ |
| ೪ | ಕ್ಷತ್ರಬಾಳ್ಯಾ | ೨ಮಾಸಿ | ೨ |
| ೫ | ಬುಗುಡಿ | ೨ಮಾಸಿ | ೨ |
| ೬ | ಘಂಟಿ | ೧ತೊಲಿ | ೨ |
| ೭ | ಪೊಂಗ | ೨ಮಾಸಿ | ೧ |

ಕೋಷ್ಟಕ : ೪.೬ ಟೋಕ್ರೆ ಕೋಳಿ ಬುಡಕಟ್ಟಿನ ಕಾಲ್ತೊಡುಗೆಗಳ (ಬೆಳ್ಳಿಯ ಧಾತುವಿನವು) ಪಟ್ಟಿ

| ಕ್ರ.ಸಂ. | ತೊಡುಗೆಗಳು | ತೂಕ | ಸಂಖ್ಯೆ |
|---|---|---|---|
| ೧ | ಕಡಗ | ೪ರಿದ೨೦ತೋಲಿ | ೨ |
| ೨ | ಚೈನ | ೨ರಿಂದ೧೫ತೋಲಿ | ೨ |
| ೩ | ರುಳಿ | ೫ರಿಂದ ೮ತೋಲಿ | ೨ |
| ೪ | ಕಾಲುಂಗುರ | ೨ತೋಲಿ | ೪ |
| ೫ | ಪಿಲ್ಯ | ೫ಮಾಸಿ | ೨ |

ಕೋಷ್ಟಕ : ೪.೭ ಟೋಕ್ರೆ ಕೋಳಿ ಬುಡಕಟ್ಟಿನ ಟೊಂಕದ ಬೆಳ್ಳಿ ತೊಡುಗೆಗಳ ಪಟ್ಟಿ

| ಕ್ರ.ಸಂ. | ತೊಡುಗೆಗಳು | ತೂಕ | ಸಂಖ್ಯೆ |
|---|---|---|---|
| ೧ | ಡಾಬು | ೨೦-೩೦ತೊಲಿ | ೧ |
| ೨ | ಉಡುದಾರ | ೧ರಿಂದ ೨ತೊಲಿ | ೧ |

ಕೋಷ್ಟಕ : ೪.೮ ಟೋಕ್ರೆ ಕೋಳಿ ಬುಡಕಟ್ಟಿನ ಮೂಗು ತೊಡುಗೆಗಳ (ಬಂಗಾರ) ಪಟ್ಟಿ

| ಕ್ರ.ಸಂ. | ತೊಡುಗೆಗಳು | ತೂಕ | ಸಂಖ್ಯೆ |
|---|---|---|---|
| ೧ | ಸುಪಾನಿ | ೧-೨ಮಾಸಿ | ೧ ಅಥವಾ ೨ |
| ೨ | ನತ್ತು | ೧ತೋಲಿ | ೧ |
| ೩ | ರಿಂಗ | ೩ಮಾಸಿ | ೧ |

ಕೋಷ್ಟಕ : ೪.೯ ಟೋಕ್ರೆ ಕೋಳಿ ಬುಡಕಟ್ಟಿನ ಕೈತೊಡೆಗೆಗಳ (ಬೆಳ್ಳಿ ಮತ್ತು ಬಂಗಾರವು) ಪಟ್ಟಿ

| ಕ್ರ.ಸಂ. | ತೊಡುಗೆಗಳು | ತೂಕ | ಸಂಖ್ಯೆ |
|---|---|---|---|
| ೧ | ಪಾಟ್ಲಿ | ೪-೫ತೋಲಿ | ೨ |
| ೨ | ಉಂಗುರ | ೫-ಆಮಾಸಿ | ೧ |
| ೩ | ಬಳೆ | ೫ತೋಲಿ | ೪ |
| ೪ | ರಟ್ಟಿಕಢಗ | ೨ತೋಲಿ | ೧ |
| ೫ | ಗಜರೆ | ೪ತೋಲಿ | ೨ |

ಮಡಕೆ ಪಾತ್ರೆಗಳ ಬಳಕೆ :

ಹಿಂದಿನ ಕಾಲದಲ್ಲಿ ಟೋಕ್ರೆ ಕೋಳಿಯವರ ಪ್ರತಿಯೊಂದು ಬಳಕೆಯ ವಸ್ತುಗಳು ಮಣ್ಣಿನದಾಗಿರುತ್ತಿದ್ದವು. ಮಡಕೆಗಳು ಅಡಿಗೆ ಮಾಡಲು, ದವಸಧಾನ್ಯಗಳನ್ನು ತುಂಬಿಡಲು, ಹಾಲು ಕಾಯಿಸಲು, ಮೊಸರು ಹೆಪ್ಪುಹಾಕಲು, ಮಜ್ಜಿಗೆಮಾಡಲು, ಉಪ್ಪಿನಕಾಯಿ ಹಾಕಲು ಮೊದಲಾದವುಗಳಿಗೆ ಮಡಕೆಗಳನ್ನೇ ಉಪಯೋಗಿಸುತ್ತಿದ್ದರು. ಹಿಂದೆ ಐದು ಸಾಲುಳ್ಳ ಅಡಕಿಲ ಮನೆಯಲ್ಲಿ ಏರಿಸುತ್ತಿದ್ದರು. ಒಂದು ಸಾಲಿನಲ್ಲಿ ಕನಿಷ್ಠವೆಂದರೆ ಐದು ಮಡಿಕೆ(ಗಡಿಗೆ)ಗಳಾದರೂ ಇರುತ್ತಿದ್ದವು. ಇದರಲ್ಲಿ ಕಡಿಮೆ ಇದ್ದ ಪದಾರ್ಥಗಳನ್ನು ತುಂಬಿಡುತ್ತಿದ್ದರು. ಈ ಪದ್ಧತಿ ಇಂದಿಗೂ ಸಹ ಹಳ್ಳಿಯಲ್ಲಿ ಕಾಣಬರುತ್ತದೆ. ಆದರೆ ನಗರಗಳಲ್ಲಿ, ನಗರದ ಸಮೀಪದ ಹಳ್ಳಿಗಳಲ್ಲಿ ಅಡಿಕಿಲದ ಬದಲಾಗಿ ಜರ್ಮನ್ ಡಬ್ಬಿಗಳು ಅಕ್ಕಿ, ಜೋಳ, ಗೋಧಿ ಇತ್ಯಾದಿ ಪದಾರ್ಥಗಳ ಶೇಖರಣೆಗಾಗಿ ಬಳಕೆಯಾಗುತ್ತಿವೆ.

ಹಿಂದೆ ಬಾವಿಯಿಂದ ನೀರು ತರಲು ಮಣ್ಣಿನ ಕೊಡ ಅಥವಾ ಬಿಂದಿಗೆ ಬಳಸುತ್ತಿದ್ದರು. ನೀರು ಶೇಖರಿಸಿಟ್ಟುಕೊಳ್ಳಲು ರಂಜಣಗೆ (ಹರವಿ) ಇರುತ್ತಿದ್ದವು. ಇದರ ಬದಲಾಗಿ ಟೋಕ್ರೆಕೋಳಿಯವರು ಸಿಮೆಂಟ್ ಹೌದು, ಹಿತ್ತಾಳೆ, ಸ್ಟಿಲ್ ಪಾತ್ರೆಗಳನ್ನು ಬಳಸುತ್ತಿರುವರು. ದೇವರಿಗೆ ದೀಪ ಹಚ್ಚಲು ಮಣ್ಣಿನ ಪಣತೆ ಬದಲಾಗಿ ಪಂಚಾರತಿ, ಹಿತ್ತಾಳೆ ಪಣತೆ ಬಳಸುತ್ತಾರೆ. ಇಂದು ಸಹ ದೀಪಾವಳಿಯ ಹಬ್ಬದ ಸಂದರ್ಭದಲ್ಲಿ ಸಾಲು ದೀಪ ಹಚ್ಚಿಡಲು ಮಣ್ಣಿನ ಪಣತೆ ಬಳಸುತ್ತಾರೆ. ಮದುವೆಯ ಸಂದರ್ಭದಲ್ಲಿ ಸುರುಗಿ ಸುತ್ತಲು ಮಗಿಗಳು (ಕುಳ್ಳಿ) ಮತ್ತು ಹಾಲಗುಂಜಿಗೆ ದೀಪ ಹಚ್ಚಿಡಲು ಮಣ್ಣಿನ ಪಣತೆ ಬಳಸುತ್ತಾರೆ.

ಪ್ರಸ್ತುತದಲ್ಲಿಯೂ ಸಹ ಹಳ್ಳಿಯಲ್ಲಿ ಮಜ್ಜಿಗೆ ಮಾಡಲು, ಸ್ನಾನಕ್ಕೆ ನೀರು ಕಾಯಿಸಲು, ನುಚ್ಚು ಮಾಡಲು ಮಡಕೆಗಳ ಉಪಯೋಗವಿದೆ. ದೊಡ್ಡ ಹಬ್ಬವಾದ ಎಳಮಾಸ್ಯೆ, ಕಾರಹುಣ್ಣಿಮೆಗಳಂತ ಹಬ್ಬದ ಸಂದರ್ಭದಲ್ಲಿ ಭಜ್ಜಿ (ಪಲ್ಯ) ಮಾಡಲು, ಜೋಳದ ಬಾನ (ಜೋಳದ ಅನ್ನ), ಗೋಧಿ ಹುಗ್ಗಿ (ಪಾಯಸ), ಅಂಬಲಿ ಮಾಡಲು ದೊಡ್ಡ ಹರವಿಗಳನ್ನು ಉಪಯೋಗಿಸುತ್ತಾರೆ. ಆದರೆ ದಿನನಿತ್ಯದ ಬಳಕೆಯ ಪಾತ್ರೆಗಳು ಹೆಚ್ಚಾಗಿ ಸ್ಟೀಲ್ ಮತ್ತು ಅಲ್ಯುಮಿನಿಯಂ ಧಾತುವುನವು ಕಂಡುಬರುತ್ತವೆ. ಯಾಕೆಂದರೆ ಮಡಕೆಗಳಿಗಿಂತಲೂ ಕಡಿಮೆ ದರದಲ್ಲಿ ದೊರೆಯುವವು. ಹಾಗಾಗಿ ಜನರ ಒಲವು ಸ್ಟೀಲ್ ಪಾತ್ರೆ ಕಡೆಗಿದೆ ಹಾಗೂ ಮಣ್ಣಿನ ಪಾತ್ರೆಗಳು

ಕೈಯಿಂದ ಬಿದ್ದರೆ ಒಡೆದ್ಹೋಗುವ ಸಂಭವವಿರುವುದು. ಆದರೆ ಅಲ್ಯುಮಿನಿಯಂ ಸ್ಟೀಲ್ ಪಾತ್ರೆಗಳು ಒಡೆಯಲಾರವು.

ಬೇಸಿಗೆಯ ಕಾಲದಲ್ಲಿ ಕುಡಿಯುವ ತಣ್ಣನೆಯ ನೀರಿಗಾಗಿ ನಗರ ಮತ್ತು ಹಳ್ಳಿಗಳಲ್ಲಿ ಮಣ್ಣಿನ ಮಡಿಕೆ(ಗಡಿಗೆ)ಗಳನ್ನು ಬಳಸುತ್ತಾರೆ. ಬಹಳ ಹಿಂದೆ ರೊಟ್ಟಿ ಮಾಡುವ ಹಂಚು, ನೀರು ಕುಡಿಯುವ ಲೋಟ, ಊಟ ಮಾಡುವ ತಟ್ಟೆ ಪ್ರತಿಯೊಂದು ಮಣ್ಣಿನದಾಗಿರುತ್ತಿದ್ದವು ಎಂದರೆ ಸೋಜಿಗ ಎನ್ನಿಸಬಹುದು. ಯಾಕೆಂದರೆ ಆ ವಸ್ತುಗಳು ಅವರು ಎಷ್ಟು ಜಾಗರೂಕತೆಯಿಂದ ಬಳಸುತ್ತಿದ್ದರು ಎಂಬುದು ಇದರಿಂದ ತಿಳಿದುಬರುತ್ತದೆ.

ಪ್ರಸ್ತುತದಲ್ಲಿ ರೊಟ್ಟಿಯನ್ನು ಮಾಡವ ತಗಾರಿಯನ್ನು ಕಟ್ಟಿಗೆ, ಕಬ್ಬಿಣ ಮತ್ತು ಕಲ್ಲಿನಿಂದ ತಯಾರಿಸುವರು. ಚಪಾತಿ ಮಾಡಲು ಮಣೆ ಮತ್ತು ಲಾಟಣಿಗೆ, ಬೇಳೆ ಒರಿಸಲು ಘೋಟನಿ, ಹುಟ್ಟು, ಬೇಳೆ ನೀಡಲು ಸೌಟು, ಮಜ್ಜಿಗೆ ಮಾಡಲು ರೇವಿಗೆ ಇವೆಲ್ಲ ಕಟ್ಟಿಗೆಯಿಂದ ಮಾಡಿದಾಗಿರುತ್ತಿದ್ದವು. ಆದರೆ ಇತ್ತೀಚಿಗೆ ಸ್ಟೀಲ್, ಜರ್ಮನ್ ಲೋಹದಿಂದ ಮಾಡಿದ ಸಾಧನಗಳನ್ನು ಬಳಸುತ್ತಿದ್ದಾರೆ. ಊಟ ಮಾಡುವ ತಟ್ಟೆಗಳು ಹೆಚ್ಚಾಗಿ ಜರ್ಮನ, ಹಿತ್ತಾಳೆ, ಕಂಚಿನದವಾಗಿದ್ದವು. ಇಂದು ಅದರ ಸ್ಥಳದಲ್ಲಿ ಸ್ಟೀಲ್ ಪರಾತಗಳೆ ಬಂದಿವೆ.

**ಕೋಷ್ಟಕ : ೪.೧೦ ಟೋಕ್ರೆ ಕೋಳಿ ಬುಡಕಟ್ಟಿನ ಅಡಿಗೆ ಸಾಮಾನುಗಳ ಪಟ್ಟಿ**

| ಕ್ರ.ಸಂ. | ಅಡಿಗೆ ಸಾಮಾನು | ಮೂಲವಸ್ತು | ಸಾಮಾನುಗಳ ಉಪಯೋಗ |
|---|---|---|---|
| ೧ | ೨ | ೩ | ೪ |
| ೧ | ಗಡಿಗೆ | ಮಣ್ಣು | ಅಡಿಗೆ ಮಾಡಲು, ಪದಾರ್ಥ ತುಂಬಿಡಲು |
| ೨ | ಹರಿ | " | ನೀರು ತುಂಬಿಡಲು, ಹಬ್ಬದ ಅಡಿಗೆಮಾಡಲು |
| ೩ | ರಂಜಣಗಿ | " | ನೀರು ಶೇಖರಿಸಲು |
| ೪ | ಬೆಲ್ಲಣಗಿ | ಕಟ್ಟಿಗೆ | ಚಪಾತಿ, ಹೋಳಿಗೆ ಮಾಡಲು |
| ೫ | ಹೋಳಗಿ ಮಣಿ | " | ಚಪಾತಿ, ಹೋಳಿಗೆ ಮಾಡಲು |
| ೬ | ತಗಾರಿ | " | ರೊಟ್ಟಿ ಮಾಡಲು |
| ೭ | ರೊಟ್ಟಿ ಹಂಚು | ಕಬ್ಬಿಣ | ರೊಟ್ಟಿ ಬೇಯಿಸಲು |
| ೮ | ಹೊಳಿಗೆ ಹಂಚು | " | ಹೋಳಿಗೆ ಬೇಯಿಸಲು |
| ೯ | ರೊಟ್ಟಿ ಬುಟ್ಟಿ | ಬಿದಿರು | ರೊಟ್ಟಿ ಹಾಕಲು |
| ೧೦ | ಹೋಳಿಗೆ ಬುಟ್ಟಿ | " | ಹೋಳಿಗೆ ಹಾಕಲು |
| ೧೧ | ಜಿಬಲಕಿ | " | ಅನ್ನ, ಸಾವಿಗೆ ಜಾನಲು ಅಥವಾ ಬೆಸಿಯಲು |
| ೧೨ | ಘೋಟನಿ | ಕಟ್ಟಿಗೆ | ಬೇಳೆ ಒರೆಸಲು |
| ೧೩ | ಹುಟ್ಟು | " | ಜೋಳದ ಅನ್ನ ಒರೆಸಲು |

| ೧ | ೨ | ೩ | ೪ |
|---|---|---|---|
| ೧೪ | ಕೊಡ | ಕಬ್ಬಿಣ,ತಾಮ್ರ,ಹಿತ್ತಾಳೆ, ಮಣ್ಣಿನ,ಪ್ಲಾಸ್ಟಿಕ್,ಸ್ಟೀಲ್ | ನೀರು ತರಲು |
| ೧೫ | ಥಂಬಿಗೆ | ತಾಮ್ರ,ಹಿತ್ತಾಳೆ,ಸ್ಟೀಲ್ | ನೀರು ಕುಡಿಯಲು |
| ೧೬ | ಲೋಟ | ಹಿತ್ತಾಳೆ,ಗಿಲಾಟು,ಸ್ಟೀಲ್ | ನೀರು ಕುಡಿಯಲು |
| ೧೭ | ಬಟ್ಟಲು | ಹಿತ್ತಾಳೆ,ಗಿಲಾಟು,ಸ್ಟೀಲ್ | ಊಟಕ್ಕೆ ಸಾರು ನೀಡಲು |
| ೧೮ | ತಟ್ಟೆ | ಗಿಲಾಟು, ಸ್ಟೀಲ್ | ಊಟ ಬಡಿಸಲು |
| ೧೯ | ಹಾಂಡೆ | ತಾಮ್ರ,ತಗಡು,ಸ್ಟೀಲ್ | ನೀರು ತುಂಬಿಡಲು |
| ೨೦ | ಚರ್ಗಿ | ತಾಮ್ರ,ತಗಡು,ಸ್ಟೀಲ್ | ನೀರು ತುಂಬಿಡಲು |
| ೨೧ | ಬೋಗಣಿ | ತಗಡು,ಸ್ಟೀಲ್ | ಅಡಿಗೆ ಮಾಡಲು |
| ೨೧ | ಸೌಟು | ತಗಡು,ಸ್ಟೀಲ್ | ಸಾರು,ಪಲ್ಲೆ ನೀಡಲು |
| ೨೨ | ಝಾರಿ | ತಗಡು,ಸ್ಟೀಲ್ | ಕರಿದಿದ್ದನ್ನು ತೆಗೆಯಲು |
| ೨೩ | ಖಲಬತ್ತು | ಕಲ್ಲು | ಪದಾರ್ಥ ಕುಟ್ಟಲು |
| ೨೪ | ಒಳ್ಳು | ಕಲ್ಲು | ಪದಾರ್ಥ ಕುಟ್ಟಲು ಮತ್ತು ಅರಿಯಲು |
| ೨೫ | ಒನಕೆ | ಕಟ್ಟಿಗೆ | ಜೋಳ, ಗೋಧಿ, ಜೋಳ ಥಳಿಸಲು |
| ೨೬ | ಬಿಸಕಲ್ಲು | ಕಲ್ಲು | ಜೋಳ, ಗೋಧಿ ಇತ್ಯಾದಿ ಬಿಸಲು |
| ೨೭ | ಕಡಾಯಿ | ಕಬ್ಬಿಣ,ಅಲುಮಿನಿಯಂ | ಕರಿಯಲು, ಹುರಿಯಲು ಇತ್ಯಾದಿ |
| ೨೮ | ಮರ | ಬಿದಿರು | ಪದಾರ್ಥಗಳನ್ನು ಸ್ವಚ್ಛಮಾಡಲು |
| ೨೯ | ಕಡಚಿ | ಕಬ್ಬಿಣ | ರೊಟ್ಟಿಯನ್ನು ತೆಗೆಯಲು |
| ೩೦ | ರವಗಿ | ಕಟ್ಟಿಗೆ | ಮೊಸರು ಕಡಿಯಲು ಮಜ್ಜಿಗೆ ಮಾಡಲು |
| ೩೧ | ಘುಸಿ (ಹಾರೆ) | ಕಬ್ಬಿಣ | ಕಾರ ಕುಟ್ಟಲು |

## ಸಾಮಾಜಿಕ ನಂಬಿಕೆಗಳು

ಟೋಕ್ರೆ ಕೋಳಿಗಳು ಹಲವಾರು ಅಂಶಗಳನ್ನು ನಂಬುವರು. ಪ್ರಮುಖವಾದುವುಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

೧ ಶುಭ ಕಾರ್ಯಗಳಿಗೆ ಹೊರಟಾಗ ಖಾಲಿಕೊಡ, ಹೊಲೆಯ, ನಾಯಿದ, ಸಲಿಕೆ, ಗುದ್ದಲಿಗಳು ಎದುರಾಗಬಾರದು, ಮನೆ ಸಾರಿಸುವುದು, ಗುಡಿಸುವುದು ಮಾಡಬಾರದು.

೨ ಸಂಜೆ ಹೊತ್ತಿನಲ್ಲಿ ಸಾಲ ಕೊಡುವುದು, ಬೇರೆಯವರಿಗೆ ಹಣ ಕೊಡಬಾರದು, ಕೊಟ್ಟರೆ ಲಕ್ಷ್ಮಿ ಹೋಗುತ್ತಾಳೆ ಎನ್ನುವರು.

೩ ದೀಪ ಹಚ್ಚಿದ ಮೇಲೆ ಕಸ ಗುಡಿಸಬಾರದು, ಪ್ರಯಾಣ ಮಾಡಬಾರದು.

೪ ಸಂಜೆ ದೀಪ ಹಚ್ಚುವ ವೇಳೆಗೆ ಬಾಗಿಲು ಮುಚ್ಚಬಾರದು.

೫ ಎಡಗಣ್ಣು ಗಂಡಿನದು, ಬಲಗಣ್ಣು ಹೆಣ್ಣಿನದು ಹಾರಬಾರದು.

೬ ಮಂಗಳವಾರ, ಶುಕ್ರವಾರ ಕ್ಷೌರ ಮಾಡಿಸಿಕೊಳ್ಳಬಾರದು, ಶನಿವಾರ ಹೊಸ ಬಟ್ಟೆ ಧರಿಸಬಾರದು, ಬುದುವಾರ ಹೊಸಬಟ್ಟೆ ಒಗೆಯಬಾರದು.

೭ ಬುಧವಾರ ದಿವಸ ಹೆಣ್ಣು ದೊಡ್ಡವಳಾದರೆ ಬುದ್ಧಿವಂತೆ.

೮ ಶುಕ್ರವಾರ ಮಗಳು ಹುಟ್ಟಿದ್ದರೆ ಶ್ರೀಮಂತರಾಗುವರು.

೯ ಅಮವಾಸ್ಯೆ ದಿನ ಹುಟ್ಟಿದ ಮಗ ಕಳ್ಳ, ಹುಣ್ಣಿಮೆಯ ದಿನ ಹುಟ್ಟಿದ ಮಗ ಅರಸನಾಗುವನು.

೧೦ ಕಟ್ಟಿದ ಹರಗೋಲು ಹರಕೊಂಡು ಹೋದರೆ ಕೇಡು.

೧೧ ಗ್ರಹಣ ಹಿಡಿದಾಗ ಗರ್ಭಿಣಿಯರು ಕೆಲಸ ಮಾಡಬಾರದು. ಇದರಿಂದ ಮಕ್ಕಳು ಅಂಗವಿಕಲ, ಊನವಾಗಿ ಹುಟ್ಟುತ್ತವೆ.

೧೨ ಕನಸಿನಲ್ಲಿ ಸತ್ತರೆ ಶುಭ, ನಕ್ಕರೆ ಅಶುಭ.

೧೩ ಸತ್ತ ಅಜ್ಜ,ಅಜ್ಜಿ, ಮೊಮ್ಮಗ,ಮೊಮ್ಮಗಳಾಗಿ ಹುಟ್ಟಿ ಬರುವರು.

೧೪ ನೆಂಟಸ್ಥನಕ್ಕೆ ಬಂದಾಗ ಹೆಣ್ಣು ಮುಟ್ಟಾಗಿದ್ದರೆ ಅಶುಭ.

೧೫ ಕಾಗೆ ಮನೆಯೊಳಗೆ ನುಗ್ಗಿದರೆ ಅಶುಭ, ಕಾಗೆ ಮನೆಯ ಮೇಲೆ ಕುಳಿತು ಕೂಗಿದರೆ ನೆಂಟರು ಸಂಬಂಧಿಕರು ಬರುತ್ತಾರೆ.

೧೬ ನೆಂಟಸ್ಥನಕ್ಕೆ ಬಂದಾಗ ನೀರು ತರುತ್ತಿದ್ದರೆ ಶುಭ.

## ೨. ಧಾರ್ಮಿಕ ನೆಲೆ

**ಹಬ್ಬ ಹರಿದಿನಗಳು :** ಭೂಮಿಯೊಡನೆ, ನೀರಿನೊಡನೆ ಹೋರಾಡುವ ಟೋಕ್ರೆ ಕೋಳಿಯವರಿಗೆ ಹಬ್ಬ ಹರಿದಿನಗಳಲ್ಲಿ, ಶುಭಕಾರ್ಯಗಳಲ್ಲಿ ಒಂದಿಷ್ಟು ಬಿಡುವು ದೊರೆಯುತ್ತದೆ. ಅದರ ನಿಮಿತ್ತ್ಯದಿಂದ ಮನೆಯಲ್ಲಿದ್ದು ಎಲ್ಲರೊಡಗೂಡಿ ಸಂತೋಷದಿಂದ ಕಾಲ ಕಳೆಯುತ್ತಾರೆ. ಹಬ್ಬದ ಸಂದರ್ಭದಲ್ಲಿ ಅವರು ಭಕ್ತಿಯಿಂದ, ಉತ್ಸಾಹದಿಂದ ಹಬ್ಬ ಆಚರಣೆ ಮಾಡುವರು. ಎಲ್ಲಾ ಹಬ್ಬಗಳ ಶುಭಕಾರ್ಯಗಳ ಸಂದರ್ಭದಲ್ಲಿ ಮನೆಯನ್ನು (ನೆಲವನ್ನು) ಸಗಣಿಯಿಂದ ಸಾರಿಸಿ ಅರ್ಧ ಗೋಡೆಯವರೆಗೆ ಕೆಂಪು ಮಣ್ಣಿನ ಜಾಜಾದ ಸಾರಣೆ (ಸಾರಿಸುವುದು) ಹಾಕಿ ಸ್ವಚ್ಛಗೊಳಿಸುತ್ತಾರೆ. ಇವರು ಮಾಂಸಾಹಾರಿಯಾದರೂ ಕೂಡ ಹಬ್ಬದ ಸಂದರ್ಭದಲ್ಲಿ ಸಿಹಿ ಅಡಿಗೆ ಮಾಡುತ್ತಾರೆ. ಹಬ್ಬದ ದಿವಸ ಯಾವುದೇ ಕೂಲಿ ಕೆಲಸಕ್ಕಾಗಲಿ, ಕಸುಬಿಗಾಗಲಿ ಹೋಗದೆ ಮನೆಯವರೊಡನೆ ಕೂಡಿಕೊಂಡು ಸಂತೋಷಪಡುವರು. ಟೋಕ್ರಕೋಳಿಯವರು ಯುಗಾದಿ, ಹೋಳಿಹುಣ್ಣಿಮೆ, ದೀಪಾವಳಿ, ಶಿವರಾತ್ರಿ, ದಸರಾ, ಕಾರಹುಣ್ಣಿಮೆ ಮೊದಲಾದ ಹಬ್ಬಗಳನ್ನು ಆಚರಿಸಿದರೂ ಜೋಕುಮಾರಹುಣ್ಣಿಮೆ ವಿಶೇಷವಾಗಿ ಈ ಸಮುದಾಯದವರೇ ಆಚರಿಸುವರು.

**ಜೋಕುಮಾರ ಹಬ್ಬ :** ಜೋಕುಮಾರ ಹಬ್ಬದ ಆಚರಣೆಗೆ ಒಂದು ಚಾರಿತ್ರಿಕ ಹಿನ್ನಲೆಯಿದೆ. ಭಾದ್ರಪದ ಶುದ್ಧ ಅಷ್ಟಮಿಯ ದಿನದಂದು ಜೋಕುಮಾರನ ಜನನ. ಅದಕ್ಕೆ ಅನಂತಹುಣ್ಣಿಮೆ, ಜೋಕುಮಾರ ಹುಣ್ಣಿಮೆ, ಜೋಕ್ಯಾನ ಹುಣ್ಣಿಮೆ ಎಂದು ಕರೆಯುತ್ತಾರೆ. ಬಾರಕೇರ, ಕಬ್ಬಲಿಗರು, ಅಂಬಿಗರು, ಸುಣಗಾರರು, ತಳವಾರರು, ಬೆಸ್ತರು, ಗಂಗಾಮತದವರೆಲ್ಲ ಇವನನ್ನು ಆರಾಧಿಸುವರು. ಬೀದರ ಜಿಲ್ಲೆಯಲ್ಲಿ ಟೋಕ್ರಿಕೋಲಿ ಸಮುದಾಯದವರು ಜೋಕುಮಾರನ ಆರಾಧಕರು. "ಅತ್ಯಂತ ಪ್ರಾಚೀನತೆಯುಳ್ಳ ಜೋಕುಮಾರನು ಮಾರಿ ದೇವತೆಯ ಮಗನು". ಜೋಕುಮಾರನು ದಿಟ್ಟಾದೇವಿಯ ಮಗ. ಹುಟ್ಟಿದ ಏಳು ದಿನಗಳಲ್ಲಿ ಊರೆಲ್ಲ ಹಾಳು ಮಾಡಿ ಅಗಸರ ಹುಡುಗಿಯ ಬೆನ್ನು ಹತ್ತಿದ ಎಂಬುದನ್ನು ಡಾ. ಬಿ.ಎಸ್.ಗದ್ದಗಿಮಠ ಅವರು ಸಂಗ್ರಹಿಸಿದದ ಹಾಡುಗಳಲ್ಲಿ ಉಲ್ಲೇಖಿತವಾಗಿರುವುದನ್ನು ಕಾಣಬಹುದು.

ಗಣಪತಿ ಮತ್ತು ಲಕ್ಷ್ಮೀಯರ ಹಬ್ಬಗಳನ್ನು ಭಾರತೀಯ ಮುಂದುವರಿದ ಸಮುದಾಯಗಳು ಬಹಳ ಅರ್ಥಪೂರ್ಣವಾಗಿ ಆಚರಿಸುತ್ತವೆ. ಅನಂತರದ ಹಬ್ಬವೇ ದೀನದಲಿತರ ಜೋಕುಮಾರ ಹಬ್ಬ. ಇದನ್ನು ವಿಶೇಷವಾಗಿ ಟೋಕ್ರಿಕೋಳಿಗಳು ತಮ್ಮ ಹಬ್ಬವೆಂದು ಭಯಭಕ್ತಿಯಿಂದ ಆಚರಿಸುತ್ತಾರೆ. ಲಕ್ಷ್ಮೀ ಎದ್ದ ದಿವಸವೇ ಜೋಕುಮಾರನು ಕೂಡುವನು. ಇದಕ್ಕಾಗಿ ಹುತ್ತದ ಅಥವಾ ಕೆಂಪು ಮಣ್ಣು ತಂದು ಚೆನ್ನಾಗಿ ಕಲಸಿ ಅದರಿಂದ ಮೂರ್ತಿಯನ್ನು ಮಾಡಿ ಹೆಂಡಿಯಿಂದ ಸಾರಿಸಿದ ಬುಟ್ಟಿಯಲ್ಲಿ ಜೋಕುಮಾರನ ಮೂರ್ತಿ ಇಡುವರು. ಅದನ್ನು ಜಗಲಿಯ ಹತ್ತಿರವಿಟ್ಟು ಹಣೆಗೆ ಅರಿಷಿಣ ಕುಂಕುಮ, ಕಣ್ಣಿಗೆ ಕವಡೆ, ಬಾಯಿಗೆ ಬೆಣ್ಣೆ ಹಚ್ಚುವರು, ತಲೆಗೆ ಕುಂಚಿಕುಲಾಯಿ ಕಟ್ಟುವರು. ಬುಟ್ಟಿಯಲ್ಲಿ ಬೇವಿನ ತಪ್ಪಲು ಜೋಳ, ಮೇಣಸಿನಕಾಯಿ, ಉಪ್ಪು, ಉಳ್ಳಾಗಡ್ಡೆ, ಎಣ್ಣೆ ಹಾಕುವರು. ಆ ಬುಟ್ಟಿಯಲ್ಲಿ ಕೂಡಿಸಿದ ಜೋಕುಮಾರನನ್ನು ತಲೆಯ ಮೇಲೆ ಹೊತ್ತಿಕೊಂಡು ಏಳು ದಿವಸಗಳವರೆಗೆ ಮನೆ ಮನೆಗೆ ತಿರುಗಿ ಮೇರೆಸುವರು.

ಮೊದಲನೆಯ ದಿನ ಜೋಕುಮಾರ ಮಠದವರ (ಸ್ವಾಮಿ) ಮನೆಗೆ ಹೋಗುತ್ತಾನೆ. ಆ ಮೇಲೆ ಗೌಡರ ಮನೆಗೆ ಹೋಗುತ್ತಾನೆ. ಮನೆಮನೆಗೆ ಹೋದ ಜೋಕುಮಾರನನ್ನು ಅವರು ಪೂಜಿಸಿ ಆತನಿಗೆ ಹೊತ್ತಿಕೊಂಡು ಬಂದ ಹೆಂಗಸರಿಗೆ ಜ್ವಾಳ, ಗೋಧಿ, ಕಡ್ಲಿ, ತೋಗರಿ, ರೊಟ್ಟಿ, ಉಪ್ಪು ಮೊದಲಾದವುಗಳಲ್ಲಿ ಯಾವುದಾದರೂ ದಿನಿಸುಗಳನ್ನು ನೀಡುವರು. ದೊಡ್ಡ ಊರಿದ್ದರೆ ಒಂದೊಂದು ಓಣಿಗೆ ಒಂದೊಂದು ದಿವಸ ತಿರುಗುವರು. ಒಂದೊಂದು ಊರಲ್ಲಿ ಕೋಲಿ ಸಮುದಾಯದವರು ಇರದಿದ್ದರೆ ಇದ್ದ ಊರವರು ಆ ಊರಿಗೆ ಹೋಗಿ ಜೋಕುಮಾರನನ್ನು ಮೆರೆಸಿಕೊಂಡು ಬರುವರು. ಹೀಗೆ ಜೋಕುಮಾರನನ್ನು ಹೊತ್ಕೊಯಿದು ಹೆಣ್ಣುಮಕ್ಕಳು ಆತನನ್ನು ಕುರಿತು ಹಾಡು ಹೇಳುವರು. ಆ ಹಾಡು ಮುಗಿದ ಮೇಲೆ ಮನೆಯವರು ಧಾನ್ಯಗಳನ್ನು ನೀಡುವರು. ಅದಕ್ಕೆ ನಾಲ್ಕು ಕಾಳು ಮತ್ತು ಬುಟ್ಟಿಯಲ್ಲಿರುವ ಬೇವಿನೆಲೆಯನ್ನು ಕೊಡುವರು. ಅವನ್ನು ತೆಗೆದುಕೊಂಡ ಜನರು ತಮ್ಮ ಧಾನ್ಯದಲ್ಲಿ ಬೆರಿಸಿದರೆ ಕಾಳುಗಳಿಗೆ ಹುಳು ಹತ್ತುವುದಿಲ್ಲವೆಂಬುದು ಜನರ ನಂಬಿಕೆ.

ಆರು ದಿನಗಳವರೆಗೆ ಊರೆಲ್ಲ ಸುತ್ತಾಡಿಸಿದ ಜೋಕುಮಾರನಿಗೆ ಏಳನೆಯ ದಿನ ಹೊಲಗೇರಿಯಲ್ಲಿ ಇಟ್ಟು ಬರುತ್ತಾರೆ. ಅನಂತರ ಹೊಲೆಯರು ಜೋಕುಮಾರನನ್ನು ಪೂಜೆ ಮಾಡಿ ವರ್ಷದ ಬೆಳೆ ಮಳೆ ಕೇಳುತ್ತಾರೆ. ಆ ಮೇಲೆ ಒನಕೆಯಿಂದ ಜೋಕುಮಾರನ ತಲೆ ಒಡೆಯುತ್ತಾರೆ. ಸಿಡಿದ ತಲೆಯ ಮುಖ ಮೇಲೆ ಮಾಡಿಬಿದ್ದರೆ

ಕೆಡಗಾಲವೆಂದು ಮತ್ತು ಕೆಳಗೆ ಮುಖಮಾಡಿ ಬಿದ್ದರೆ ಒಳ್ಳೆಯಕಾಲವೆಂದು ತಿಳಿಯುತ್ತಾರೆ. ಇದೆಲ್ಲ ಮುಗಿದ ನಂತರ ಜೋಕುಮಾರನನ್ನು ತಂದು ಹಳ್ಳದಲ್ಲಿ ಒಗೆಯುತ್ತಾರೆ. ಇಲ್ಲವೇ ಅಗಸರ ಬಂಡೆಯ ಕೆಳಗೆ ಹುಗಿಯುತ್ತಾರೆ. ಮೂರು ದಿನಗಳವರೆಗೆ ಅಗಸರು ಹಳ್ಳಕ್ಕೆ ಅರಬಿ ಒಗೆಯಲು ಬರುವುದಿಲ್ಲ ಕಾರಣವೆನೆಂದರೆ ಜೋಕುಮಾರ ಇನ್ನೂ ನರಳುತ್ತಿರುತ್ತಾನೆಂದು ಹೇಳುತ್ತಾರೆ. ಅಗಸರ ಹುಡುಗಿಯ ಮೇಲೆ ಕಾಮುಖ ದೃಷ್ಟಿ ಬೀರಿದುದೇ ಈ ಹೆಂಗಸರ ಭಯಕ್ಕೆ ಮೂಲ ಕಾರಣವಾಗಿದೆ ಎಂದು ಹೇಳಲಾಗುವುದು.

ಸಮೃದ್ಧಿಯ ಸಂಕೇತವಾದ ಜೋಕುಮಾರ ಕನ್ನಡ ಜನಪದ ಅದರಲೂ ಉತ್ತರ ಕರ್ನಾಟಕದ ರೈತರ ವಿಶಿಷ್ಟ ದೇವತೆ. ಭೂಲೋಕದಲ್ಲಿ ಸುಖವಾಗಿ ಉಂಡುಟ್ಟು ಹೋದ ಗಣಪತಿ ಶಿವನಿಗೆ ಭೂಲೋಕದಲ್ಲಿ ಎಲ್ಲರೂ ಸುಖವಾಗಿದ್ದಾರೆ ಎಂದು ಹೇಳಲು, ಗಣಪತಿಯ ಬೆನ್ನಲೇ ಬಂದ ಜೋಕುಮಾರ ಭೂಲೋಕದಲ್ಲಿ ಏಳು ದಿನವಿದ್ದು ರೈತರು ಮಳೆಯಿಲ್ಲದೆ, ಬೆಳೆಯಿಲ್ಲದೆ ರೋದಿಸುತ್ತಿರುವುದನ್ನು ಕಂಡು ನೇರವಾಗಿ ಹೋಗಿ ಶಿವನಿಗೆ ತಿಳಿಸುತ್ತಾನೆ. ಶಿವನು ಬೆಟ್ಟ-ಗುಡ್ಡಗಳೆಲ್ಲ ಹೈನಾಗು(ಮಳೆ ಬಿದ್ದು ಸಮೃದ್ಧಿಯಾಗು)ವಂತೆ ಶಿವನು ಮಳೆಯನ್ನು ಸುರಿಸುತ್ತಾನೆ. ಮಳೆಯನ್ನು ತಂದು ಕೊಟ್ಟ ಜೋಕುಮಾರನನ್ನು ಹಳ್ಳಿಗರು ಅದರಲ್ಲೂ ಟೋಕ್ರೆಕೋಳಿಯವರು ಜೋಕುಮಾರನನ್ನು ನೆನೆಯುವರು. ಇವರ ಹೆಣ್ಣುಮಕ್ಕಳು ಜೋಕುಮಾರನನ್ನು ಬುಟ್ಟಿಯಲ್ಲಿ ಇಟ್ಟುಕೊಂಡು ತಲೆಯ ಮೇಲೆ ಹೊತ್ತುಕೊಂಡು ತಿರುಗುತ್ತ ಹಾಡುತ್ತಾರೆ (ಜೋಕುಮಾರನ ಹಾಡು ನೋಡಿ).

ದೇವರು : ಟೋಕ್ರೆ ಕೋಳಿಗಳು ಸೂರ್ಯ ಚಂದ್ರರನ್ನು ದೇವರೆಂದು ದೈವ ಭಾವನೆಯಿಂದ ಕಂಡವರು. ಗುಡುಗು, ಸಿಡಿಲು, ಮಿಂಚುಗಳಿಗೆ ಹೆದರಿ ಭಯಪಟ್ಟು ತಮ್ಮ ರಕ್ಷಣೆಗೊಸ್ಕರ ಅವುಗಳನ್ನು ಭಕ್ತಿಯಿಂದ ಪೂಜಿಸಿದವರು. ಹೀಗೆ ಪ್ರಕೃತಿಯ ಶಕ್ತಿಯ ಆರಾಧನೆ ಹಲವು ರೀತಿಯಲ್ಲಿ ನಡೆದು ಬಂತು. ಹಾಡೂ ಕುಣಿತ, ಪೂಜಿಸುವ ಮೂಲಕ ಪ್ರಕೃತಿಯ ಆರಾಧನೆ ಪ್ರಾರಂಭಿಸಿದರು. ದುಷ್ಟಶಕ್ತಿಗಳನ್ನು ವಶಪಡಿಸಿಕೊಳ್ಳುವುದು. ಅಸದೃಶ ಶಕ್ತಿಗಳನ್ನು ಸಂತೋಷಗೊಳಿಸುವುದ ಇವನ ಪ್ರಮುಖ ಕ್ರಿಯಾಚರಣೆಗಳಾದವು.

ಆದಿಮಾನವನ ಬದುಕಿನ ರೀತಿ ನೀತಿಯೇ ತುಂಬಾ ವಿಚಿತ್ರವಾಗಿವೆ. ಸಾಮಾನ್ಯವಾಗಿ ಅವರು ಪ್ರಕೃತಿಯ ಮಡಿಲಲ್ಲಿ ನೆಲೆಸುವ ವೈಚಿತ್ರ್ಯಕ್ಕೆ ಭಯಪಟ್ಟುಕೊಂಡು ಸೃಷ್ಟಿಯ ಪ್ರತಿಯೊಂದು ವಸ್ತುಗಳಿಗೆ ದೈವಿ ಶಕ್ತಿಯೇ ಮೂಲ ಕಾರಣವೆಂದು ಅರಿತುಕೊಂಡವರು. ಆ ಪ್ರಬಲ ಶಕ್ತಿಯನ್ನು ಆರಾಧಿಸಲು ಪ್ರಾರಂಭಿಸಿದವರು ಇವರ ಪಾಲಿಗೆ ಪ್ರಕೃತಿಯ ಶಕ್ತಿಗಳೆಲ್ಲಾ ದೈವಗಳಾದವು(ಖಂಡೋಬಾ, ಪಿ.ಕೆ:೧೯೯೩:೯೨).

ಟೋಕ್ರೆ ಕೋಳಿಯವರ ಧಾರ್ಮಿಕ ಬದುಕು ಅಂಕುರಿಸಿದ್ದು ಒಂಟಿಯಾಗಿದ್ದಾಗಲ್ಲ. ಸಂಘ ಜೀವನ ಪ್ರಾರಂಭಿಸಿದಾಗ. ದೇವರ ಕಲ್ಪನೆ ಆದಿ ಮಾನವನಲ್ಲಿತ್ತು. ಅಂದಿನಿಂದ ಇವರು ನದಿ ದಂಡೆಯ ಮೇಲೆ ಒಂಟಿತನದಿಂದ ಬಾಳುತ್ತಿದ್ದಾಗ ತಾವು ನಂಬಿದ ದೇವರನ್ನು ಪೂಜಿಸುತ್ತಾ ತಮ್ಮ ಟೋಕ್ರೆ ನಡೆಸುವ ಕಾಯಕ ಮಾಡುತ್ತಿದ್ದರು. ಗಳಿಕೆ ಸರಿಯಾಗಿ ಆಗದಿದ್ದರೆ ದೇವರಿಗೆ ತಪ್ಪು ಮಾಡಿದ್ದೇವೆ ಎಂಬ ಭಾವನೆ ಅವರಿಗೆ ಆಗುತ್ತಿತ್ತು. ಬರುಬರುತ್ತಾ ತಮ್ಮ ಒಂದು ಕುಟುಂಬ ಬೆಳೆದು ಹತ್ತಾರು ಕುಟುಂಬಗಳಾದಂತೆ ಕಾಲಾನುಕ್ರಮದಲ್ಲಿ ಹಟ್ಟಿ, ಕೇರಿ, ಊರು ಈ ರೀತಿ ಬೆಳೆಯುತ್ತಾ ಹೋಯಿತು. ಕೊಡುಕೊಳ್ಳುವ ವ್ಯವಹಾರದೊಂದಿಗೆ ರಕ್ತ ಸಂಬಂಧ ಬೆಳೆಯುತ್ತಾ ನಡೆಯಿತು. ಊರು ತುಂಬ ದೇವ ದೇವತೆಗಳು ತಲೆ ಎತ್ತಿದಂತೆ ಧಾರ್ಮಿಕ ಆಚರಣೆಗಳು ನಡೆಯ ತೊಡಗಿದವು(ವಾಲೀಕಾರ,ಚೆನ್ನಣ್ಣ:೨೦೦೦:೩೫೧-೨).

ಟೋಕ್ರೆ ಕೋಳಿ ಬುಡಕಟ್ಟಿನವರು ಧರ್ಮ, ದೇವರು-ದೈವಗಳ ಮೇಲೆ ಗಾಢವಾದ ಭಯ-ಭಕ್ತಿ ನಂಬಿಗೆ ಹೊಂದಿದ್ದಾರೆ. ತಮ್ಮ ನಿತ್ಯ ಜೀವನಕ್ಕೆ ಬೇಕಾಗುವ ಎಲ್ಲಾ ವಸ್ತುಗಳಲ್ಲಿ ದೇವರ ಸ್ವರೂಪವನ್ನು ಕಾಣುವರು. ಧರ್ಮ ಇವರ ಸಂಸ್ಕೃತಿಯ ಬೆನ್ನೆಲುಬು. ಅಡಿಗೆ ಮಾಡುವ ಒಲೆ, ಧಾನ್ಯಗಳನ್ನು ತುಂಬಿಡುವ ಮಡಿಕೆಗಳು, ಮನೆಯ ಬಾಗಿಲು, ನಡುಮನೆಯಲ್ಲಿರುವ ಕಂಬ, ಒರಳು, ಬೀಸುಕಲ್ಲು, ಕೊಡ ಮುಂತಾದವುಗಳಿಗೆ ಅರಿಷಿಣ ಕುಂಕುಮ ಹಚ್ಚಿ ಪೂಜಿಸುವುದನ್ನು ನೋಡಿದಾಗ ಇವರ ಅಣುರೇಣು ತೃಣಕಾಷ್ಠ, ಸರ್ವವ್ಯಾಪ್ತಿ ದೈವತ್ವದ ಅರಿವು ನಮಗಾಗುತ್ತದೆ. ಪ್ರತಿಯೊಂದು ವಸ್ತುವು ಕೂಡ ಜೀವನ ನಿರ್ವಹಿಸಲು ಸಹಕರಿಸಿ ಬಂದ ದೇವರ ರೂಪಗಳಾಗಿವೆ. ಅವುಗಳಿಗೆ ತಪ್ಪಿಯೂ ಕಾಲೂ ತಾಗಿದರೆ ಕೈಮುಟ್ಟಿ ನಮಸ್ಕಾರಿಸುವ ಮನೋಧರ್ಮ ಅವರಲ್ಲಿ ಕಂಡು ಬರುತ್ತದೆ.

ಹೀಗೆ ನಿಸರ್ಗಪೂಜೆ, ಮೂರ್ತಿ ಪೂಜೆಗೆ ತಿರುಗಿ ಅದಕ್ಕೊಂದು ದೇವಾಲಯ ಕಟ್ಟಿಸಿ, ಮೂರ್ತಿ ಇಟ್ಟು ಪೂಜಿಸಿದರೂ ಇವರಿಗೆ ಸಮಾಧಾನವಿಲ್ಲ. ಆದುದರಿಂದ ಮನೆಯೊಳಗೆ ಜಗಲಿಯ ಮೇಲೆ ದೇವರಿಟ್ಟು ಪೂಜಿಸುವ ಸಂಪ್ರದಾಯ ರೂಢಿಗೆ ತಂದರು. ಮುಂದೆ ಗ್ರಾಮ ದೇವತೆಗಳನ್ನು ಸೃಷ್ಟಿಸಿದರು. ಈ ದೇವರುಗಳನ್ನು ಸಾಮೂಹಿಕವಾಗಿ ಜನ ಪೂಜಿಸುತ್ತಾರೆ. ವ್ಯಕ್ತಿಗತ ಸೃಷ್ಟಿಯಾದ ದೇವರ ಪೂಜೆಯು ಸಮಷ್ಟಿಯಾಗಿ ಬೆಳೆದು ಮುಂದುವರೆದಿದನ್ನು ಕಂಡುಬರುತ್ತದೆ.

ಗಂಡು ದೇವರ ಜೊತೆಗೆ ಶಕ್ತಿಯ ಅವತಾರವೆಂದು ಹೆಣ್ಣು ದೇವತೆಗಳನ್ನು ಪೂಜಿಸಿಕೊಂಡು ಬಂದಿದ್ದಾರೆ. ಲಕ್ಷ್ಮಿ, ಸರಸ್ವತಿ ಮುಂತಾದವರು ಸೌಮ್ಯ ಸ್ವರೂಪದ ದೇವತೆಗಳಾದರೆ ಕಾಳಿ, ದುರ್ಗಿ, ಮರಗಮ್ಮ, ಲಕ್ಕಮ್ಮರು ರೌದ್ರರೂ, ಉಗ್ರರೂಪಿಗಳೂ ಆಗಿದ್ದಾರೆ. ರೌದ್ರ ವೇಷಭೂಷಣ, ಮಂತ್ರ ತಂತ್ರ ಕುಣಿತ-ವಾದ್ಯಗಳ ಹಿನ್ನೆಲೆಯಲ್ಲಿ ಭೀಕರತೆಯನ್ನು ಹುಟ್ಟಿಸಿ ಜನಮನದಲ್ಲಿ ಭಯ-ಭಕ್ತಿ ಉಂಟಾಗುವಂತೆ ಮಾಡುವುದು ಉಗ್ರರೂಪಿ ದೇವತೆಗಳ ಸ್ವಭಾವವಾಗಿದೆ. ಜನ ನೀಡಿದ ನೈವೇದ್ಯಕ್ಕೆ ತೃಪ್ತರಾಗದ ಇವರು ನರಬಲಿ, ಪಶುಬಲಿ, ಹರಿಮರಿಗಳನ್ನು ಬಯಸುತ್ತಾರೆಂದು ತಿಳಿದು ಮುಗ್ಧತನದಿಂದ ಪ್ರಾಣಿಗಳ ವಧೆ ಮಾಡಿ, ದೇವಿ ದಯತೋರುವ ದಾರಿ ಕಾಯುತ್ತಾರೆ. ಒಂದೊಂದು ರೋಗಕ್ಕೆ ಒಬ್ಬೊಬ್ಬಳು ಅಧಿದೇವತೆಯೆಂದು ಜನ ಗುರುತಿಸಿಕೊಂಡಿದ್ದಾರೆ. ದುರ್ಗವ್ವ ದುರ್ಗಿಬೇನೆ (ಕಾಲರಾ), ದ್ಯಾಮವ್ವ ಗಣಜಲಿ, ಗೊಬ್ಬರ, ಮೈಲಿಬೇನೆ ತರುವ ದೇವತೆಗಳೆಂದು ಮೂಢವಾಗಿ ನಂಬಿಕೊಂಡಿದ್ದಾರೆ(ಗದಗಿಮಠ,ಬಿ.ಎಸ್:೧೯೬೯:೨೩). ಮರಗಮ್ಮ, ದುರ್ಗಮ್ಮ, ಪೋಚಮ್ಮ ಮುಂತಾದ ರೌದ್ರ ದೇವತೆಗಳನ್ನು ಊರ ಹೊರಗೆ ಸ್ಥಾಪಿಸಿದ್ದಾರೆ. ಯಾಕೆಂದರೆ ಬರುವ ರೋಗಗಳು ಊರ ಒಳಗೆ ಬರದೆ, ಊರ ಹೊರಗಿರಲಿ ಎಂಬ ಉದ್ದೇಶ ಈ ಜನರದಿದ್ದಿರಬಹುದು. ದೈವ ಶಕ್ತಿಯ ಸಂಕೇತವಾಗಿ ಹಿರೋಡ್ಯಾ, ಶಟವಿ ದೇವರುಗಳನ್ನು ಸೃಷ್ಟಿಸಿಕೊಂಡಿದ್ದಾರೆ.

ಹಿಂದಿನ ಕಾಲದಲ್ಲಿ ನ್ಯಾಯ ನಿರ್ಣಯಗಳು ದೇವಾಲಯಗಳಲ್ಲಿ ನಡೆಯುತ್ತಿದ್ದವು. ದೇವರಿಗೆ ಹೆದರುವ ಮನುಷ್ಯ ತಪ್ಪು ಮಾಡಲಾರದೆ, ಮಾಡಿದ ತಪ್ಪನ್ನು ಒಪ್ಪಿಕೊಂಡು ಮುಂದುವರಿಯುತ್ತಿದ್ದ. ಹಿಂದಿನ ದೇವಲಯಗಳು ನ್ಯಾಯಲಯಗಳಾಗಿದ್ದವು. ಅಂದು ರೂಢಿಯಲ್ಲಿದ್ದು ಇಂದು ಸಹ ಬಳಕೆಯಲ್ಲಿರುವ ಪದ್ಧತಿಗಳೆಂದರೆ ಒದ್ದೆ ಮೈಯಿಂದ ಗುಡಿ ಹೋಗುವ, ದೇವರನ್ನು ಮುಟ್ಟಿ ಹೇಳುವ, ಆಣೆ ಮಾಡುವ ಪದ್ಧತಿ

ಮುಂತಾದವುಗಳು. ಮೇಲಿನವುಗಳಿಂದ ವ್ಯಕ್ತಿಯ ಪರಿಶುದ್ಧತೆ ಪರೀಕ್ಷಿಸುತ್ತವೆ. ಸತ್ಯ ಸಂಗತಿ ಹೊರಗೆಡುತ್ತವೆ. ಎರಡು ವ್ಯಕ್ತಿಗಳ ನಡುವೆ ನಡೆದ ವಾದವಿವಾದಗಳು ಒಂದು ನಿರ್ಧಾರಕ್ಕೆ ಬರದಿದ್ದಾಗ ಯಾವ ಸಾಕ್ಷಿಗಳು ದೊರೆಯದಿದ್ದಾಗ ಮೇಲಿನ ನಿಯಮಗಳನ್ನು ಹಿಂದಿನ ಜನ ಅನುಸರಿಸುತ್ತಿದ್ದರು. ಆದರೆ ಪ್ರಸ್ತುತದಲ್ಲಿ ನ್ಯಾಯಲಯಕ್ಕೆ ಹೋಗಿ ನ್ಯಾಯ ಪಡೆಯುತ್ತಿದ್ದಾರೆ. ಇದರಲ್ಲಿ ಒಬ್ಬ ವ್ಯಕ್ತಿಗೆ ಸ್ವಲ್ಪ ಮಟ್ಟಿನ ಅನ್ಯಾಯವಾದರೂ ಆಗಬಹುದು. ಆದರೆ ಹಿಂದೆ ನ್ಯಾಯ ತೀವ್ರವಾಗಿ ಸಿಗುತ್ತಿತ್ತು. ಈಗಿನಷ್ಟು ವಿಳಂಬವಾಗುತ್ತಿರಲಿಲ್ಲ. ಮೇಲಿನ ನ್ಯಾಯ ಪದ್ಧತಿ ನೋಡಿದಾಗ ವ್ಯಕ್ತಿ ವ್ಯಕ್ತಿಗೆ ವಂಚನೆ ಮಾಡಿದರೂ ಮನಸ್ಸಿಗೆ ವಂಚನೆ ಮಾಡಲಾರನು ಎಂದು ಇದರಿಂದ ತಿಳಿದುಬರುತ್ತದೆ.

ಪ್ರಾಚೀನ ಕಾಲದಲ್ಲಿ ಹಳ್ಳಿಗಳು ಸೃಷ್ಟಿಯಾದುದು ನದಿ ಮತ್ತು ದೇವಾಲಯಗಳನ್ನು ಆಶ್ರಯಿಸಿಕೊಂಡೆ. ಅವುಗಳ ಸುತ್ತಲೂ ಊರುಗಳು ಬೆಳೆದುಕೊಂಡು ಬಂದಿವೆ. ಇದರಿಂದ ಬುಡಕಟ್ಟು ಸಂಸ್ಕೃತಿಗಳು ಹೆಚ್ಚಾಗಿ ನದಿ ಮತ್ತು ದೇವಾಲಯಗಳ ಹಿನ್ನೆಲೆಯಲ್ಲಿಯೇ ಬೆಳೆದುಕೊಂಡು ಬಂದಿವೆ. ಜನರ ನಂಬಿಕೆಯ ಪರಿಣಾಮವಾಗಿ ಉದಯವಾದ ದೇವಾಲಯಗಳು ಅವರ ಬದುಕನ್ನೇ ಹಸನಾಗಿ ಮಾಡಿ, ಅವರಲ್ಲಿ ಧಾರ್ಮಿಕ ಶ್ರದ್ಧೆ ಹುಟ್ಟಿಸಿವೆ.

ಟೋಕ್ರೆ ಕೋಳಿಯವರಿಗೆ ದೇವರು ಧರ್ಮದ ವಿಷಯದಲ್ಲಿ ಭಯ, ಭಕ್ತಿಯಿದೆ. ಸಾಮಾನ್ಯವಾಗಿ ಅವರು ಶಕ್ತಿ ದೇವತೆಗಳ ಉಪಾಸಕರಾಗಿದ್ದು ಪೋಚಮ್ಮ, ಭವಾನಿ, ಎಲ್ಲಮ್ಮ, ಲಕ್ಷ್ಮಿ ಮುಂತಾದ ಶಕ್ತಿ ದೇವತೆಗಳೊಂದಿಗೆ ಮೈಲಾರಲಿಂಗ, ಪಾಪನಾಶ, ನರಸಿಂಹ ಮೊದಲಾದ ದೇವರನ್ನು ಪೂಜಿಸುತ್ತಾರೆ. ದೇವರಲ್ಲಿ ಭಯಭಕ್ತಿಯುಳ್ಳ ಇವರು ಕುರಿ, ಕೋಳಿಗಳನ್ನು ಬಲಿಕೊಡುವರು. ತಮ್ಮ ಇಷ್ಟ ದೈವಗಳ ಹಾಗೂ ಭೂತ ಪಿಶಾಚಿಗಳ ಸಂತೃಪ್ತಿಗಾಗಿ ಬಲಿಕೊಡುವ ಸಂಪ್ರದಾಯ ಇನ್ನೂ ಇವರಲ್ಲಿ ಜೀವಂತವಾಗಿ ಉಳಿದುಕೊಂಡಿದೆ.

ಮನುಷ್ಯ ಎರಡು ಕಾರಣಕ್ಕಾಗಿ ದೇವರನ್ನು ಕಲ್ಪಿಸಿಕೊಂಡ ಎಂಬ ವಾದಗಳಿವೆ. ಪ್ರಕೃತಿಯ ಎಲ್ಲ ವೈಚಿತ್ರ್ಯಗಳನ್ನು, ಬಿಡಿಸಲಾರದ ನಿಗೂಢಗಳನ್ನು ಗಮನಿಸಿದ ಆದಿಮ ಮನುಷ್ಯ ತನ್ನನ್ನು ಮೀರಿದ ಅಗೋಚರ ಶಕ್ತಿಯೊಂದಿದೆ ಎಂದು ನಂಬಿದ. ಆ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನ್ನ ಒಳ್ಳೆಯದನ್ನು ಸಾಧಿಸಿಕೊಳ್ಳಬೇಕು ಎಂಬುದು ಅವನ ಉದ್ದೇಶವಾಯಿತು. ಯಾಕೆಂದರೆ ನಿಸರ್ಗದ ಒಡಲಲ್ಲಿ ಬಾಳುತ್ತಿದ್ದ ಅವನಿಗೆ ಸಹಜವಾಗಿಯೇ ನೂರೆಂಟು ಕಂಠಕಗಳು ಎದುರಾಗುತ್ತಿದ್ದವು. ಆದ್ದರಿಂದ ಅಗೋಚರ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನಗೆ ಒದಗುವ ಕಂಠಕಗಳಿಂದ ಪಾರಾಗಬೇಕು ಎಂಬುದು ಅವನ ತರ್ಕವಾಗಿತ್ತು(ಬೋರಲಿಂಗಯ್ಯ,ಹಿ.ಚಿ:೨೦೦೦:೧೦).

ಬೋರಲಿಂಗಯ್ಯ ಅವರ ಹೇಳಿಕೆಯ ಪ್ರಕಾರ ಪಂಗಡದ ವ್ಯಕ್ತಿಗಳೆಲ್ಲಾ ಸಮಾನರಾಗಿ ಎಲ್ಲಿಯವರೆಗೆ ಎಣಿಸಲ್ಪಡುತ್ತಿದ್ದರೋ, ಅಲ್ಲಿಯವರೆಗೆ ಮನುಷ್ಯ ಪೂಜೆ ಮಾಡುವುದನ್ನು ಕಲಿಯಲಿಲ್ಲ, ಪ್ರಾರ್ಥನೆ ಸಲ್ಲಿಸುತ್ತಿರಲಿಲ್ಲ, ದೇವತೆಗಳ ಪಾದಗಳಲ್ಲಿ ತಲೆ ಬಗ್ಗಿಸುವುದು, ಹರಕೆ ಕಟ್ಟುವುದು, ಇವೆಲ್ಲ ಅವನಿಗೆ ಗೊತ್ತಿರಲಿಲ್ಲ. ಅಂದರೆ ಅಲ್ಲಿಯವರೆಗೆ ಧರ್ಮವೆಂಬ ಹೆಸರಿನ ಯಾವುದೂ ಮನುಷ್ಯನ ಮಿದುಳಿನಲ್ಲಿ ಮನೆ ಮಾಡಿಕೊಂಡಿರಲಿಲ್ಲ. ದೇವತೆಗಳ ಜನ್ಮವೇ ಇನ್ನೂ ಆಗದಿದ್ದಾಗ ಧರ್ಮವೆಂಬುದರಲ್ಲಿ ನಂಬಿಕೆ ಹೇಗೆ ತಾನೇ ಬಂದಿತು? ಎಂದು ಪ್ರಶ್ನಿಸಿದ್ದಾರೆ. ಆದರೆ ಕೆಲವರು ಧರ್ಮಕ್ಕೆ ಬಹಳ ಒತ್ತು ಕೊಟ್ಟಿದ್ದಾರೆ. ಧಾರ್ಮಿಕ ವಿಧಿಗಳನ್ನು ಎರಡು ರೀತಿಯಲ್ಲಿ ಹೇಳಲಾಗಿದೆ.

೧ ಕೌಟುಂಬಿಕ ಧಾರ್ಮಿಕ ವಿಧಿ

೨ ಸಾಮೂಹಿಕ ಧಾರ್ಮಿಕ ವಿಧಿ

## ೧. ಕೌಟುಂಬಿಕ ಧಾರ್ಮಿಕ ವಿಧಿಗಳು

ಒಂದು ಕುಟುಂಬದ ಜನ ಸೇರಿಕೊಂಡು ಮಾಡುವ ಧಾರ್ಮಿಕ ವಿಧಿಗಳಿಗೆ ಕೌಟುಂಬಿಕ ಧಾರ್ಮಿಕ ವಿಧಿಗಳೆನ್ನುವರು. ಇದರಲ್ಲಿ ಅ) ಮನೆ ದೇವತಾ ಆ) ಕುಲದೇವತಾ ಧಾರ್ಮಿಕ ವಿಧಿಗಳೆಂದು ಎರಡು ರೀತಿಯವು. ಆಯಾ ಮನೆಗಳ ದೇವತೆಗಳನ್ನು ಕುಟುಂಬ ದೇವತೆಗಳೆಂದು ಒಂದು ಕುಲದ ಎಲ್ಲಾ ಜನರನ್ನು ಆಚರಿಸುವ ದೇವತೆಗಳಿಗೆ ಕುಲದೇವತೆಗಳೆಂದು ಹೇಳಬಹುದು.

ಮನೆ ದೇವತಾ ಧಾರ್ಮಿಕ ವಿಧಿಗಳು : ಎಲ್ಲಮ್ಮ ಹಾಗೂ ಗಂಗಮ್ಮಳನ್ನು ಮನೆದೇವತೆಗಳೆಂದು ಒಪ್ಪಿಕೊಂಡು ಪೂಜಿಸುತ್ತಾರೆ. ಮಂಗಳವಾರ ಹಾಗೂ ಶುಕ್ರವಾರ ದೇವಿಯ ಪೂಜೆ ಮಾಡಿದರೆ, ರವಿವಾರ ಗಂಗಮ್ಮ ದೇವರ ಪೂಜೆ ಮಾಡುವರು. ಹೊಳೆಗೆ ನೈವಿಧ್ಯ ಎಣ್ಣೆ ಬತ್ತಿ ತೆಗೆದು ಕೊಂಡು ಹೋಗಿ ಪೂಜಿಸಿ, ದೀಪ ಹಚ್ಚಿ ಬರುವರು. ಇದರಿಂದ ಗಂಗಮ್ಮ ಸಂತೃಪ್ತಳಾಗಿ ನಾವೆ ಹಾಕುವಾಗ ಯಾವ ತೊಂದರೆ ಮಾಡುವುದಿಲ್ಲವೆಂಬುದು ಟೋಕ್ರೆ ಕೋಳಿಯವರ ನಂಬಿಕೆ.

ಟೋಕ್ರೆಕೋಳಿಯವರಿಗೆ ಎಲ್ಲಮ್ಮ, ತುಳಜಾಪುರ ಭವಾನಿ ಎರಡನೆಯ ದೇವತೆಯಾಗಿರುವಳು. ಗಂಗಮ್ಮನನ್ನು ವೃತ್ತಿಯ ರಕ್ಷಣೆಗಾಗಿ ಪೂಜಿಸಿದರೆ, ಎಲ್ಲಮ್ಮ, ಭವಾನಿ ಫಲೋತ್ಪತ್ತಿಗಾಗಿ ಆರೋಗ್ಯ ಭಾಗ್ಯಕ್ಕಾಗಿ, ಸುಖ ಸಂಪತ್ತಿಗಾಗಿ ಪೂಜಿಸುವರು.

ಕುಲದೇವತಾ ಧಾರ್ಮಿಕ ವಿಧಿಗಳು : ಟೋಕ್ರೆ ಕೋಳಿಯವರು ಸಾಮಾನ್ಯವಾಗಿ ಎಲ್ಲಮ್ಮನಿಗೆ ನಡೆದುಕೊಂಡರೂ ವಿಶೇಷವಾಗಿ ಜಗಲಿಯ ಮೇಲೆ ವೀರನ ಮೂರ್ತಿಗೆ ಪೂಜಿಸುವುದು ಕಂಡುಬರುತ್ತದೆ. ಈ ವೀರನು ಪ್ರಾಚೀನ ಕಾಲದಲ್ಲಿ ದೋಣಿಗಳನ್ನು ಕಳವು ಮಾಡಿಕೊಂಡು ಹೋಗುವಂಥ ಸಂದರ್ಭದಲ್ಲಿ ಕಳ್ಳರಿಂದ ದೋಣಿಗಳು ವಾಪಸ ತರಲು ಯುದ್ಧ ಮಾಡುವಾಗ ಸತ್ತಿದರ ನೆನಪಿಗಾಗಿ ಆ ವೀರನನ್ನು ಪ್ರತಿ ಮೂರು ವರ್ಷಕ್ಕೊಮ್ಮೆ ಆರಾಧಿಸುವುದು. ಸಂಪ್ರದಾಯವಿದೆ. ಈತನನ್ನು ತಮ್ಮ ಕುಲವನ್ನು ಕಾಪಾಡಿದ ವೀರನೆಂದು ಪೂಜಿಸುವರು. ಅದೇ ರೀತಿ ಮಲ್ಲಯ್ಯನನ್ನು ಕೂಡ ಕುಲದೇವರೆಂದು ಪೂಜಿಸುವರು(ವಾಲೀಕಾರ,ಚೆನ್ನಣ್ಣ:೨೦೦೦:೩೫೨).

## ೨. ಸಾಮೂಹಿಕ ಧಾರ್ಮಿಕ ವಿಧಿಗಳು

ಊರ ಜನರನ್ನು ಕೂಡಿಕೊಂಡು ಮಾಡುವಂಥ ಧಾರ್ಮಿಕ ಆಚರಣೆಗಳಿಗೆ ಸಾಮೂಹಿಕ ಧಾರ್ಮಿಕ ವಿಧಿಗಳೆಂದು ಕರೆಯುವರು. ಕೌಟುಂಬಿಕ ದೇವತೆಗಳಿಗೆ ಕಟ್ಟುನಿಟ್ಟನಿಂದ ಪೂಜಿಸುವಂತೆ ಸಾಮೂಹಿಕ ದೇವತೆಗಳಿಗೆ ಪೂಜಿಸುವುದಿಲ್ಲ. ತಮಗೆ ಬಿಡುವಿದ್ದಾಗ, ಅನುಕೂಲವಿದ್ದಾಗ ಮಾತ್ರ ಆ ದೇವರಿಗೆ ಪೂಜಿಸುವರು. ದುರಗಮ್ಮ ಮರಗಮ್ಮ, ಚೌಡಮ್ಮ, ದ್ಯಾಮಮ್ಮ ಮೊದಲಾದ ಶಕ್ತಿ ದೇವತೆಗಳನ್ನು ಸಾಮೂಹಿಕವಾಗಿ ಆರಾಧಿಸುತ್ತಾರೆ.

ಬಲಿ : ಡಾ.ಚೆನ್ನಣ್ಣ ವಾಲೀಕಾರರು ಬಲಿಕೊಡುವುದೆಂದರೆ ಫಲೋತ್ಪತ್ತಿಯಾಗಲು, ಆರೋಗ್ಯಭಾಗ್ಯವಾಗಲು, ಸುಖ ಶಾಂತಿ, ಆರ್ಥಿಕ ಸವೃದ್ಧಿ ಮನೆಗೆ ಲಭಿಸಲು, ದನಕರು ಕುರಿಮರಿಗಳು ಬೆಳೆಯಲು, ಯಾವ ಕಷ್ಟ

ಕಾರ್ಪಣ್ಯ, ನೋವು, ಸಾವು, ಹಿಂಸೆ, ಪೀಡೆಗಳು ಬರದಿರಲು ಬಲಿಕೊಡುವರು ಎಂದಿದ್ದಾರೆ. ಒಂದು ಪ್ರಾಣಿಯ ಜೀವವನ್ನು ಅರ್ಪಿಸುವುದಕ್ಕೆ ಬಲಿ ಎಂದು ಹೇಳಬಹುದು. ಒಂದು ಪ್ರಾಣಿಯನ್ನು ಬಲಿಕೊಟ್ಟು ಭೂಮಿಗೆ ರಕ್ತ ಚೆಲ್ಲುವುದರಿಂದ ಭೂದೇವತೆ ಸಂತೃಪ್ತಗಳಾಗುವಳೆಂದು ಎಲ್ಲಾ ಜನಾಂಗದವರ ನಂಬಿಕೆ. ಆದುದರಿಂದ ಬಲಿ ನೀಡಿ ರೌದ್ರ ದೇವತೆಗಳನ್ನು ಶಾಂತನಾಗಿ ಮಾಡುವರು.

Sacrifice is the ritual destruction of an object or more commonly the slaughter of a victim by effusion of blood, suffocation fire or other..(Encyclopaedia Britannica, Vol.19, 1964.P.802) ಈ ಮಾತುಗಳಿಂದ ನಾಲ್ಕು ಮುಖ್ಯವಾದ ಅಂಶಗಳು ತಿಳಿದು ಬರುತ್ತದೆ.

**ಬಲಿ ಕುರಿತು ನಾಲ್ಕು ಮುಖ್ಯವಾದ ಅಂಶಗಳು**

೧) ಬಲಿ ಎಂದರೆ ವಿಧಿ ಪೂರ್ವಕವಾಗಿ ನಾಶಮಾಡುವುದು.

೨) ಈ ರೀತಿ ನಾಶ ಮಾಡುವುದು ಒಂದು ವಸ್ತು, ಒಂದು ಪ್ರಾಣಿ ಅಥವಾ ಒಬ್ಬ ಮನುಷ್ಯನಾಗಿರಬಹುದು.

೩) ಪ್ರಾಣಿಯನ್ನು ಬಲಿಕೊಡುವಾಗ ಅದರ ರಕ್ತ ಹೀರುವುದು, ಅದು ಉಸಿರು ಕಟ್ಟಿ ಸಾಯುವಂತೆ ಮಾಡುವುದು, ಬೆಂಕಿಗೆ ಹಾಕಿ ಸುಡುವುದು ಈ ಕ್ರಮಗಳನ್ನು ಅನುಸರಿಸುತ್ತಾರೆ.

೪) ದೇವರೊಡನೆ ಸಂಪರ್ಕ ಕಲ್ಪಿಸಿಕೊಳ್ಳುವುದು, ದೇವರನ್ನು ತೃಪ್ತಿಗೊಳಿಸುವುದು. ದೇವರನ್ನು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಕೊಡುವುದು. ಇವು ಬಲಿ ಕೊಡುವುದರ ಉದ್ದೇಶಗಳು.

**ಹರಕೆಗಳು :** ಯಾರದಾದರೂ ಒಬ್ಬ ವ್ಯಕ್ತಿಯ ಆರೋಗ್ಯ ಸರಿಯಾಗಿ ಇರದಿದ್ದರೆ ಅವರು ದೇವರಿಗೆ ಹರಕೆ ಹೊತ್ತುತ್ತಾರೆ. ಸವ್ವಾ ರೂಪಾಯಿಗೆ ಅರಷಿಣ ಕುಂಕುಮದಿಂದ ಪೂಜೆ ಮಾಡಿ ಮುಡಿ ಕಟ್ಟಿಟುತ್ತಾರೆ. ಅವರ ಹರಕೆ ನೆರವೇರಿದರೆ ದೇವರಿಗೆ ಬೇಡಿಕೊಂಡ ರೀತಿಯಲ್ಲಿ ಹರಕೆ ಮುಟ್ಟಿಸುತ್ತಾರೆ. ಒಂದು ವೇಳೆ ಹರಕೆ ತೀರಿಸದಿದ್ದರೆ ದೇವರು ಪುನಃ ಕಾಡುತ್ತಾನೆಂಬ ನಂಬಿಕೆ ಇವರಲ್ಲಿದೆ. ಆದರಿಂದ ಹರಕೆಯನ್ನು ಬೇಡಿಕೊಂಡ ರೀತಿಯಲ್ಲಿ ಚಾಚುತಪ್ಪದೆ ಮುಟ್ಟಿಸುವರು.

ಅದೇ ರೀತಿ ಕಣ್ಣು ಬೇನೆಯಾದಾಗ ದೇವಿಗೆ ಬೆಳ್ಳಿಯ ಕಣ್ಣು ಬಟ್ಟಲು ಏರಿಸುವುದು, ಗಂಡು ಮಗು ಹುಟ್ಟಿದರೆ ಜವಳ ತೆಗೆಯುವುದು, ಇನ್ನಾವುದೊ ಕಾರಣಕ್ಕಾಗಿ ಗೊಂದಲ ಹಾಕುವುದು ಇತ್ಯಾದಿಯಾಗಿ ಹರಕೆಗಳನ್ನು ದೇವರಿಗೆ ಸಮರ್ಪಿಸುತ್ತಾರೆ. ಇದರಲ್ಲಿ ಕೋಳಿ, ಕುರಿ, ಮೇಕೆ ಬಲಿಗೊಳ್ಳುವ ಹರಕೆಗಳಾಗಿರುತ್ತವೆ.

**ಜಾತ್ರೆ ಉತ್ಸವಗಳು :** ಜಾತ್ರೆಗಳು ಪೌರಾಣಿಕ, ಐತಿಹಾಸಿಕ ಮಹಾಪುರುಷರ ಪ್ರತೀಕವಾಗಿ ನಡೆಯುತ್ತದೆ. ಸಾಮಾನ್ಯ ವ್ಯಕ್ತಿ ತನ್ನ ಜೀವನದಲ್ಲಿ ಒಳ್ಳೆಯ ಆದರ್ಶ ಪಾಲಿಸಿ, ಬದುಕಿ ತೀರಿ ಹೋದಾಗ ಆತನನ್ನು ದೇವರೆಂದು ಭಾವಿಸುವರು. ಅವರ ಹೆಸರಿನಲ್ಲಿ ಜಾತ್ರೆ ಏರ್ಪಡಿಸಿ ಎಲ್ಲಾ ಸಮುದಾಯದ ಜನರು ಕೂಡಿ ಸಂತೋಷ ಪಡುವರು. ಅದಕ್ಕೆ ಜಾತ್ರೆ ಎಂದು ಕರೆಯುತ್ತಾರೆ.

"ಗಂಗಮ್ಮನ ಜಾತ್ರೆ ಮಳೆಗಾಲ ಆರಂಭವಾಗುತ್ತಲೇ, ಹೊಳೆಯಲ್ಲಿ ಹೊಸ ನೀರು ಬರುತ್ತಲೇ ಆರಂಭಿಸುವರು. ಇದೇ ಹೊತ್ತಿಗೆ ದೋಣಿ ನಡೆಸಲು ಆರಂಭಿಸುವರು. ಬೇಸಿಗೆ ಕಾಲದಲ್ಲಿ ವೀರನ ಉತ್ಸವ ನಡೆಸುವರು. ಗಂಗಮ್ಮನ ಉತ್ಸವ ವರ್ಷದ ಆರಂಭದಲ್ಲಾದರೆ ವೀರನ ಉತ್ಸವ ವರ್ಷದ ಕೊನೆಯಲ್ಲಾಗುವುದು. ಇವೆರಡು ಉತ್ಸವಗಳ ಮಧ್ಯದಲ್ಲಿ ಬರುವ ಪ್ರಮುಖ ಹಬ್ಬ ಹುಣ್ಣಿಮೆಗಳನ್ನು ಟೋಕ್ರೆ ಕೋಳಿಯವರು ಇತರ ಜನರೊಡನೆ ಆಚರಿಸುವರು"(ವಾಲೀಕಾರ,ಚೆನ್ನಣ್ಣ:೨೦೦೦:೩೫೬). ಗಂಗಮ್ಮನ ಜಾತ್ರೆಯಾಗಲಿ, ವೀರನ ಉತ್ಸವವಾಗಲಿ ಬೀದರ ಜಿಲ್ಲೆಯಲ್ಲಿ ಕಂಡು ಬರುವುದಿಲ್ಲ. ಗಂಗಮ್ಮನ ಜಾತ್ರೆಯ ಬದಲು ಸರಳವಾಗಿ ಹೊಳೆಗೆ ಹೋಗಿ ಟೋಕ್ರೆ ಹಾಗೂ ಹೊಳಗೆ ಪೂಜೆಮಾಡಿ ಅಂದಿನಿಂದ ಟೋಕ್ರೆ ಹೊಳೆಗೆ ಹಾಕಲು ಪ್ರಾರಂಭಿಸುತ್ತಾರೆ. ಜಾತ್ರೆಯಂತೆ ಜನ ಅಲ್ಲಿ ನಿಬಿಢವಾಗಿರುವುದಿಲ್ಲ.

**ಯನಾಗುಂದಿ ಮಾಣಿಕಮ್ಮ:** ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಯಾನಗುಂದಿಯ ಒಂದು ಬೆಟ್ಟದ ಮೇಲೆ ಮಾಣಿಕಮ್ಮ ವಾಸವಾಗಿದ್ದಾಳೆ. ಸುಮಾರು ೫೦ ವರ್ಷಗಳಿಂದ ಇಲ್ಲಿ ತಪಸ್ಸುಗೈದು ಸಾಧನೆ ಮಾಡಿದ್ದಾಳೆ. ಇವಳು ಅನ್ನವನ್ನು ಸೇವಿಸದೆ ಗಾಳಿ, ನೀರು, ಹಾಲಿನ ಮೇಲೆ ಬದುಕಿದ್ದಾಳೆ.

ಆಕೆ ಯನಗುಂದಿ ಬೆಟ್ಟದ ಮೇಲೆ ವಾಸವಾಗಿದ್ದರಿಂದ ಅಲ್ಲಿ ಮುಸಲ್ಮಾನ ದೇವರಿಗೆ ಭಕ್ತಾದಿಗಳು, ಕುರಿ ಬಲಿ ಕೊಡುತ್ತಿದ್ದರು. ಮಾತೆ ಮಾಣಿಕಮ್ಮ ಈಗ ಅದನ್ನು ನಿಲ್ಲಿಸಿದ್ದಾಳೆ. ಇವಳು ಟೋಕ್ರೆ ಕೋಳಿ ಸಮುದಾಯದವಳಾದರೂ ಸಹ ಎಲ್ಲಾ ಜಾತಿ, ಮತ, ಪಂಥಗಳಿಗೆ ಆಶ್ರಯ ನೀಡಿರುವಳು. ಯಾನಾಗುಂದಿಗೆ ಬರುವ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶದ ಬಕ್ತರಿಗೆ ಸಮಾನತೆ, ಸ್ವತಂತ್ರ್ಯ, ಪ್ರೀತಿ, ಸಹನಶೀಲತೆ, ನ್ಯಾಯ, ನೀತಿ ಹಾಗೂ ಸತ್ಯದಿಂದ ಬದುಕಲು ಹೇಳುವುದು ಮಾಣಿಕಮ್ಮಳ ತತ್ವವಾಗಿದೆ. ನುಡಿದಂತೆ ನಡೆಯುವುದನ್ನು ಅವರ ಜೀವನದಲ್ಲಿ ಅಳವಡಿಸಿಕೊಂಡಿದ್ದಾರೆ.

**ಗುಡಿಸಲಯೋಗಿ ಲಾಲ್‌ಚಂದ್ ಹಣಮಂತಪ್ಪ (೧೮೯೩-೨೦೦೦) :** "ಜಾತಿ ಜ್ಯೋತಿ ತೋರಲಿಲ್ಲ, ಭಾವದ ಭಾಗ್ಯ ದೊರಕಲಿಲ್ಲ. ಸಿದ್ರೂಪಿಶಾಸ್ತ್ರ ಅಲ್ಲ. ಪುರಾಣಶಾಸ್ತ್ರ ತಿಳಿದುಕೋ ಎಲ್ಲಾ". ಹೀಗೆ ಹತ್ತಾರು ಅಭಂಗಗಳನ್ನು ಹೇಳುತ್ತ ಜನರಲ್ಲಿರುವ ಅಜ್ಞಾನ ತೊಡೆದು ಸುಜ್ಞಾನ ಬಿತ್ತುತ್ತ, ಜಾತಿಯನ್ನು ನಂಬಿ ನಡೆದವರ ಗತಿಯೇನು? ಜಾತಿಯೊಂದೇ ಜ್ಯೋತಿಯಲ್ಲ ಎಂಬ ಸತ್ಯವನ್ನು ಜನರಿಗೆ ಮನವರಿಕೆ ಮಾಡಿಕೊಡಲು ಬರಿಗಾಲಿನಿಂದಲೇ ಹಳ್ಳಿ ಹಳ್ಳಿಗಳನ್ನು ಸುತ್ತುತ್ತಿರುವ ಲಾಲ್‌ಚಂದ್ ಹಣಮಂತಪ್ಪ ಗೂರುಜಿಯವರು ನೂರಾ ಏಳು (೧೦೭) ವರ್ಷ ಬದುಕಿದ್ದರು. ಇವರು ಜೀವನದೂದ್ದಕ್ಕೂ ಮಹರ್ಷಿ ವಾಲ್ಮೀಕಿ ಅವರ ತತ್ವಗಳ ಪ್ರಸಾರಕ್ಕಾಗಿಯೇ ದುಡಿದರು.

ಹಳ್ಳಿಖೇಡ (ಕೆ) ವಾಡಿ ಗ್ರಾಮದ ಸಮೀಪದ ಗುಡ್ಡದ ಮೇಲೆ ಗುಡಿಸಲೊಂದರಲ್ಲಿ ವಾಸವಾಗಿದ್ದ ಇವರು 'ಗುಡಿಸಲ ಯೋಗಿ' ಎಂದೇ ಖ್ಯಾತಿ ಹೊಂದಿದ್ದರು. ನೇಪಾಳದಿಂದ ಕಲ್ಬುರ್ಗಿಗೆ ತತ್ವೋಪದೇಶಕ್ಕಾಗಿ ಆಗಮಿಸಿದ ರಾಮದೇವರ ಬಳಿ ಶಿಷ್ಯತ್ವ ಪಡೆದು ನಂತರ ದೀಕ್ಷೆ ಪಡೆದು ಮಹರ್ಷಿ ವಾಲ್ಮೀಕಿಯ ತತ್ವ ಪ್ರಸಾರಕ್ಕಾಗಿ ತಮ್ಮ ಇಡೀ ಜೀವನವನ್ನೇ ಮುಡಿಪಾಗಿಟ್ಟರು. ಇವರು ಹಳ್ಳಿ ಹಳ್ಳಿಗೆ ಬರಿಗಾಲಿನಿಂದ ನಡೆದು ಹೋಗಿ ಬಡವರು, ದೀನ ದಲಿತರಲ್ಲಿಯ ಮೂಢನಂಬಿಕೆಗಳನ್ನು ತೊಡೆದು ಹಾಕಲು ಶ್ರಮಿಸಿದರು. ಗೂರುಜಿ ಅವರು

ತಾವು ವಾಸಿಸುತ್ತಿರುವ ಗುಡಿಸಲ ಬಳಿಯಲ್ಲಿಯೇ ಮಹರ್ಷಿ ವಾಲ್ಮೀಕಿ ಮಂದಿರ ವೇದವ್ಯಾಸ ಮಂದಿರ, ಅಗಸ್ತ್ಯಋಷಿಗಳ ಮಂದಿರ, ಕಲ್ಯಾಣಮಂಟಪ, ಬಡಮಕ್ಕಳ ಶಿಕ್ಷಣಕ್ಕಾಗಿ ಆಶ್ರಮ ಶಾಲೆ ಮುಂತಾದ ಜನೋಪಕಾರಿ ಕಾರ್ಯಕ್ರಮ ಹಾಕಿ ಕೊಂಡಿದ್ದರು. ದೀನ ದಲಿತರ ಬಾಳಿಗೆ ಬೆಳಕು ನೀಡುವ ಅವರ ಕಾಯಕ ಶ್ಲಾಘನೀಯ ಇಂಥ 'ಗುಡಿಸಲ ಯೋಗಿ' ಸನ್ಯಾಸಿಯ ಶತಮಾನೋತ್ಸವ ಕೂಡ ಜನವರಿ ೩೧.೧.೧೯೯೯ ರಂದು ಆಚರಿಸಲಾಯಿತು. ಇಂದು ಇಂಥ ಮಹಾನ್ ಪುರಷರು ನಮ್ಮಿಂದ ಅಗಲಿದರೂ ಹೆಸರು ಅಮರವಾಗಿದೆ(ಪ್ರಜಾವಾಣಿ:೩೦.೧.೧೯೯೯:೨).

೩. ಆರ್ಥಿಕ ನೆಲೆ

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳು ಪುರುಷಾರ್ಥಗಳು. ಧರ್ಮದ ನಂತರ ಅರ್ಥದ ವ್ಯಾಖ್ಯೆ. ಧರ್ಮ ಮತ್ತು ಅರ್ಥ ಒಂದು ನಾಣ್ಯದ ಎರಡು ಮುಖಗಳು. ಧರ್ಮವನ್ನು ಕಾಪಾಡಬೇಕಾದರೆ ಅರ್ಥಬೇಕು. ಅರ್ಥವಿಲ್ಲದ ಜೀವ ವ್ಯರ್ಥ. ಇಂದಿನ ಕಾಲದಲ್ಲಿ ಒಂದು ಸ್ಥಾನ ಸಿಗಬೇಕಾದರೆ ಅರ್ಥ ಪ್ರಮುಖವಾಗಿದೆ.

ಟೋಕ್ರೆ ಕೋಳಿಯವರು ಶ್ರಮಜೀವಿಗಳಾಗಿದ್ದಾರೆ. ಧೃಢಕಾಯರಾದ ಇವರು ರಟ್ಟೆ ಮುರಿದು ಕೆಲಸ ಮಾಡಿ ರೊಟ್ಟಿ ತಿನ್ನಬೇಕು ಎಂಬುದು ಇವರ ಉದ್ದೇಶವಿದೆ. ಹೀಗಾಗಿ ಎಂಥ ಕಠಿಣ ಪ್ರಸಂಗ ಬಂದೊದಗಿದರೂ ಭಿಕ್ಷೆ ಬೇಡುವುದಿಲ್ಲ. ಕಷ್ಟಪಟ್ಟು ದುಡಿದು, ಬೇವರು ಸುರಿಸಿಯೇ ಯಾವಾಗಲೂ ಹೊಟ್ಟೆ ತುಂಬಿಸಿಕೊಳ್ಳುತ್ತಾರೆ. ತಮ್ಮ ಮೂಲ ಉದ್ಯೋಗಕ್ಕೆ ಕೊಡಲೇಟು ಬಿದ್ದಾಗಿನಿಂದ ಇವರು ಹೆಚ್ಚಾಗಿ ಕೃಷಿಯನ್ನೆ ತಮ್ಮ ಮುಖ್ಯ ಕಸುಬನ್ನಾಗಿ ಮಾಡಿಕೊಂಡು ಜೀವಿಸುತ್ತಿದ್ದಾರೆ. ವ್ಯವಸಾಯದಲ್ಲಿ ಒಣ ಬೇಸಾಯವೇ ಜೊತೆಗೆ ಕೂಲಿ, ಕೃಷಿಕೂಲಿ ಅವಲಂಬಿಸಿ ಜೀವಿಸುತ್ತಿರುವವರೆ ಹೆಚ್ಚು ಜನರಿದ್ದಾರೆ.

ಬೋರ್ಗರೆವ ಕಡಲು ಸರ್ಪದ ಹೆಡೆಯಂತೆ ದಡಕ್ಕೆ ಅಪ್ಪಳಿಸುತ್ತಿರುವ ತೆರೆಗಳು, ಆಳ ಅಗಲ ಅರಿಯದ ನೀರ ಪ್ರವಾಹ, ಅನಿರೀಕ್ಷಿತ ಬಿರುಗಾಳಿಯ ಭಯ. ಇಂಥ ಕಡಲನ್ನು ದುಡಿಮೆಯ ಅಂಗಳವಾಗಿ ಮಾಡಿಕೊಂಡ ಬೆಸ್ತರ ಬದುಕು. ನಿಜಕ್ಕೂ ಸಾಹಸಮಯ. ಇತಿಹಾಸದುದ್ದಕ್ಕೂ ಬೆಸ್ತರ ಬದುಕಿನ ಪರಂಪರೆ ದೊರೆಯುತ್ತದೆ. ಬೇರೆ ಜನಾಂಗದವರು ಭೂಮಿಯನ್ನು ಜೀವನಕ್ಕೆ ಆಸರೆಯಾಗಿ ಮಾಡಿಕೊಂಡರೆ, ಬೆಸ್ತರು ನೀರನ್ನೆ ಒಂದು ಆಸರೆಯಾಗಿ ಮಾಡಿಕೊಂಡವರು. ನೀರಿನ ಅಪಾರ ಉತ್ಪನ್ನಗಳು ನಮ್ಮ ದೇಶವನ್ನು ಸಮೃದ್ಧವನ್ನಾಗಿ ಮಾಡಿವೆ. ದೇಶದ ಜನಸಂಖ್ಯೆಯಲ್ಲಿ ೨/೫ ರಷ್ಟು ಜನರು ಮೀನುಗಾರಿಕೆಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿದ್ದಾರೆ. ವಿಶ್ವದ ಮೂರು ಭಾಗವೂ ನೀರಿನಿಂದ ಅವೃತ್ತವಾಗಿದ್ದು ಒಂದು ಭಾಗ ಮಾತ್ರ ಭೂಮಿಯಿರುವುದು. ಭಾರತದಲ್ಲಿ ಮೀನುಗಾರಿಕೆಗೆ ಸಾಕಷ್ಟು ಅವಕಾಶವಿದೆ. ಬಯಲು ಸೀಮೆಯ ಮೀನುಗಾರಿಕೆಗೆ ಕೊಡಲೇಟ್ಟು ಬೀಳುತ್ತಿದೆ. ಯಾಕೆಂದರೆ ಮಳೆಯ ಅಭಾವ, ನೀರಿನ ಅಭಾವ ಮತ್ತು ಕಾರ್ಖಾನೆಯ ರಸಾಯನಿಕ ಪದಾರ್ಥವನ್ನು ನೀರಿಗೆ ಬಿಡುತ್ತಿದ್ದರಿಂದ ಮೀನುಗಳೆಲ್ಲ ಸಾಯುತ್ತಲಿವೆ. ಇದರಿಂದ ಮೀನುಗಾರಿಕೆಗೆ ಹಾನಿಯಾಗುತ್ತಲಿದೆ (ವೆಂಕಟರಾಜ, ಪುಣಿಂಚತ್ತಾಯ:೧೯೯೩:೧).

ಟೋಕ್ರೆ ಕೋಳಿಯವರು ತಮ್ಮ ಮಕ್ಕಳನ್ನು ಆಲಸಿಗಳಾಗಲು ಬಿಡುವುದಿಲ್ಲ. ಯಾವುದಾದರೂ ಕೆಲಸದಲ್ಲಿ ತೊಡಗಿಸಿ ಬೇವರಿನ ಬೆಲೆ ಕಷ್ಟ ಏನೆಂಬುದನ್ನು ಮನವರಿಕೆ ಮಾಡಿಕೊಡುತ್ತಾರೆ. ಕೆಲಸವಿಲ್ಲದೆ ವ್ಯರ್ಥವಾಗಿ ಅಲೆಯುತ್ತಿದ್ದರೆ ಮೀನು ಹಿಡಿಯುವುದಕ್ಕೆ, ಟೋಕ್ರೆ ಒಡಿಸುವುದಕ್ಕೆ, ಹೊಲದಲ್ಲಿ ಕೂಲಿ ಕೆಲಸಕ್ಕೆ ಅವರನ್ನು

ಭೂಮಿಯನ್ನು ಪರಭಾರೆ ಮಾಡಿಕೊಡದಂತೆ ಶಾಸನ ತಂದರೆ ಮಾತ್ರ ಸರ್ಕಾರ ಇವರಿಗೆ ನೀಡಿರುವ ಭೂಮಿ ಇವರ ಹೆಸರಿನಲ್ಲಿಯೇ ಉಳಿಯುವುದು ಸಾಧ್ಯ(ಅವರೇ:೧೯೯೪:೯೨-೯೩).

ಪ್ರಾಯಶಃ ಬುಡಕಟ್ಟುಗಳಿಗಿರುವ ಅತಿದೊಡ್ಡ ಅಪಾಯ ಸಂಸ್ಕೃತಿ ವಿನಾಶವಲ್ಲ, ಆರ್ಥಿಕ ಶೋಷಣೆ ಎಂದು ಮಹಾತ್ಮಗಾಂಧಿ ಅವರು ಹೇಳಿರುವರು. ಎಲ್ಲಿಯವರೆಗೆ ಪ್ರತಿಯೊಬ್ಬ ವ್ಯಕ್ತಿಗೆ ಸಮಾನ ಗೌರವ, ಪ್ರೀತಿ ಹಾಗೂ ಮನುಷ್ಯ ಸಂಬಂಧಗಳು ದೊರೆಯುದಿಲ್ಲವೋ ಅಲ್ಲಿಯವರೆಗೆ ಅಂಕಿಅಂಶಗಳಲ್ಲಿ ಎಷ್ಟೆ ಎತ್ತರದಲ್ಲಿ ಬೆಳೆದರು ಅದು ಅಭಿವೃದ್ಧಿಯ ಮಾತಲ್ಲ. ನಮ್ಮ ಸರಕಾರ ತಾಂತ್ರಿಕತೆ, ವೈಜ್ಞಾನಿಕತೆಯಲ್ಲಿ ಮುಂದುವರೆದಿವೆ ಎಂದರೆ ಅದು ಬುಡಕಟ್ಟುಗಳ ಫಾಲಿಗೆ ಸುಳ್ಳಾಗುತ್ತದೆ.

ವ್ಯವಸಾಯ : ಭಾರತ ಕೃಷಿ ಪ್ರಧಾನ ದೇಶ. ದೇಶದ ಶೇಕಡ ೭೦ರಷ್ಟು ಜನ ಕೃಷಿಯಲ್ಲಿ ತಮ್ಮ ಬಾಳನ್ನು ಕಂಡುಕೊಂಡಿರುವರು. ಗ್ರಾಮೀಣ ಭಾರತವೇ ನೈಜ ಭಾರತವೆಂದು ಮಹಾತ್ಮ ಗಾಂಧೀಜಿ ಹೇಳಿರುವರು. ಅವರ ಹೇಳಿಕೆಯಂತೆ ಕೃಷಿಯೇ ಪ್ರಸ್ತುತದಲ್ಲಿ ಜೀವನ ಸಾಗಿಸಲು ಟೋಕ್ರೆ ಕೋಳಿಯವರಿಗೆ ಆಧಾರ ಸ್ಥಂಬವಾಗಿದೆ. ಕೃಷಿ ಕ್ಷೇತ್ರದಲ್ಲಿಯೇ ಈ ಸಮುದಾಯದವರು ಹೆಚ್ಚಾಗಿ ದುಡಿಯುತ್ತಿದ್ದಾರೆ.(ವೃತ್ತಚಿತ್ರ:೪.೪ ನೋಡಿ)

**ವೃತ್ತಚಿತ್ರ : ೪.೩ ಬೀದರ ಜಿಲ್ಲೆಯ ಟೋಕ್ರೆ ಕೋಳಿಗಳ ಬುಡಕಟ್ಟಿನ ವೃತ್ತಿ ವೈವಿಧ್ಯ**




ಶೇಕಡ ೮೩ರಷ್ಟು ಜನ ಕೃಷಿ ಕೂಲಿಕಾರರು, ವ್ಯಾಪಾರಸ್ಥರು,ಟ್ರ್ಯಾಕ್ಟರ,ಲಾರಿ ಚಾಲಕರು,ಸರಕಾರಿ ನೌಕರಿ ಮತ್ತು ಇನ್ನಿತರ ಕೆಲಸದಲ್ಲಿ ತೊಡಗಿದ್ದಾರೆ. ಅದರಲ್ಲಿ ಶೇಕಡ ೧೩ರಷ್ಟು ಮಾತ್ರ ಕೃಷಿಕರಾಗಿದ್ದಾರೆ. ಇವರ ಹೊಲದ ಗಾತ್ರ ಚಿಕ್ಕದಾಗಿರು ವುದರಿಂದ ಇವರಲ್ಲಿ ಸಾಕಷ್ಟು ಜನ ಸಣ್ಣ ಮತ್ತು ಅತಿ ಸಣ್ಣ ರೈತರಾಗಿದ್ದಾರೆ. ಇವರು ತಮ್ಮ ಹೊಲದಲ್ಲಿನ ಕೆಲಸ ಮುಗಿಸಿಕೊಂಡು ಬೇರೆಯವರ ಹೊಲಕ್ಕೆ ಕೃಷಿಕೂಲಿ ಕೆಲಸಕ್ಕೆ ಹೋಗುವರು. ಅದುದರಿಂದ್ದ ಶೇಕಡ ೪೫ರಷ್ಟು ಭೂರಹಿತ ಟೋಕ್ರೆ ಕೋಳಿಯವರು ಕೃಷಿಯೇತರ ಕಾರ್ಮಿಕರಾಗಿ ನೌಕರಿ, ಅಂಗಡಿ, ಹಾಲು ಮಾರಾಟ ಇನ್ನಿತರ ಸಣ್ಣ ವ್ಯಾಪಾರದಲ್ಲಿ ತೊಡಗಿದ್ದಾರೆ. ಕೆಲವರು ಶಿಕ್ಷಕರಾಗಿಯೂ ಇದ್ದಾರೆ. ಮೂರನೆ ದರ್ಜೆಯ ಸರಕಾರಿ ನೌಕರಿಯಲ್ಲಿ ತೊಡಗಿದವರ ಸಂಖ್ಯೆ ಅತ್ಯಂತ ಕಡಿಮೆ ಪ್ರಮಾಣದಲ್ಲಿದೆ.

ಭಾರತದಲ್ಲಿ ಸುಮಾರು ೭೫ರಷ್ಟು ಬೇಸಾಯವು ಒಣಬೇಸಾಯವಾಗಿದೆ. ಇದು ಮಳೆಯ ಮೇಲೆ ನಿರ್ಭರಿತ ವಾದುದರಿಂದ ಸರಿಯಾದ ಸಮಯಕ್ಕೆ ಮಳೆಯಾದರೆ ರೈತ ಸ್ವಲ್ಪ ಬೇಳೆ ಕಾಣಬಹುದು. ಅದು ಇಲ್ಲದಿದ್ದರೆ

ಬೆಳೆ ಕಾಣಲು ಸಾಧ್ಯವಿಲ್ಲ. ಅದರಲ್ಲೂ ಬೀದರ ಜಿಲ್ಲೆಯು ಬರಗಾಲಕ್ಕೆ ಪ್ರಸಿದ್ಧವಾಗಿದೆ. ಜಿಲ್ಲೆಯಲ್ಲಿ ಟೋಕ್ರೆ ಕೋಳಿಯವರು ಹೆಚ್ಚಾಗಿ ಒಣ ಬೇಸಾಯವನ್ನೇ ಅವಲಂಬಿಸಿದ್ದಾರೆ. ಇವರಲ್ಲಿಯ ಒಟ್ಟು ಕೃಷಿಕರಲ್ಲಿ ಶೇಕಡ ೧೨ರಷ್ಟು ಕುಟುಂಬಗಳು ಮಾತ್ರ ನೀರಾವರಿ ಸೌಲಭ್ಯ ಪಡೆದಿದ್ದಾರೆ. ಅರೆ ಮಾಧ್ಯಮ ಗಾತ್ರದ ಭೂಹಿಡುವಳಿಗಳನ್ನುಳ ರೈತರು ನೀರಾವಾರಿ ಸೌಲಭ್ಯ ಹೊಂದಿರುವರು. ನೀರಾವಾರಿ ಸೌಲಭ್ಯವಿಲ್ಲದೆ ಬೇಸಾಯ ಮಾಡುವುದು ಕಷ್ಟಕರವಾಗಿದೆ. ಇನ್ನಿತರ ಉನ್ನತ ವರ್ಗದವರ ಭೂಮಿಯ ಫಲವತತ್ತೆಗೆ ಹೋಲಿಸಿದಾಗ ಈ ಸಮುದಾಯದವರ ವ್ಯವಸಾಯದ ಭೂಮಿಯ ಫಲವತ್ತತೆ ಬಹಳ ಕಡಿಮೆ ಪ್ರಮಾಣದಲ್ಲಿರುತ್ತದೆ. (ಕೋಷ್ಟಕ ೪.೧೧ ನೋಡಿ)

ಕೋಷ್ಟಕ : ೪.೧೧ ಬೀದರ ಜಿಲ್ಲೆಯ ಟೋಕ್ರೆ ಕೋಳಿಯವರ ಒಣ ಮತ್ತು ನೀರಾವರಿ ಭೂ ಹಿಡುವಳಿ (ಎಕರೆಗಳಲ್ಲಿ)

| ಕ್ರ.ಸಂ. | ತಾಲೂಕುಗಳು | ಕುಟುಂಬ | ಒಣ | ನೀರಾವರಿ | ಒಟ್ಟು |
|---|---|---|---|---|---|
| ೧. | ಔರಾದ | ೩೬೯ | ೧೩೮೯ | ೪೭ | ೧೪೩೬ |
| ೨. | ಬಸವಕಲ್ಯಾಣ | ೫೦೮ | ೧೧೮೫ | ೧೫೨ | ೧೩೩೭ |
| ೩. | ಭಾಲ್ಕಿ | ೨೮೮ | ೪೮೯ | ೨೯ | ೫೧೮ |
| ೪. | ಬೀದರ | ೫೧೬ | ೮೦೩ | ೧೪೭ | ೯೫೦ |
| ೫. | ಹುಮನಾಬಾದ | ೮೩೩ | ೧೭೧೪ | ೩೮೮ | ೨೧೦೨ |
| | ಒಟ್ಟು | ೨೪೮೧ | ೫೫೭೯ | ೭೬೩ | ೬೩೪೨ |

ಭಾರತ ದೇಶದ ಶೇಕಡ ೩೫ರಷ್ಟು ಊಳುವ ಭೂಮಿಗೆ ನೀರು ದೊರೆತ್ತಿದೆ. ಕರ್ನಾಟಕ ರಾಜ್ಯದಲ್ಲಿ ಇದರ ಪ್ರಮಾಣ ಶೇಕಡ ೨೨ರಷ್ಟು ಇದೆ. ಬೀದರ ಜಿಲ್ಲೆಯಲ್ಲಿ ನೀರಾವಾರಿಯ ಪ್ರಮಾಣ ಶೇಕಡ ೯.೪೬ರಷ್ಟು ಇದೆ. ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನವರು ತಮ್ಮ ಊಳುವ ಭೂಮಿಯಲ್ಲಿ ಶೇಕಡ ೧೨ರಷ್ಟು ಪ್ರಮಾಣದ ನೀರಾವಾರಿಯನ್ನು ಪಡೆದಿದ್ದಾರೆ. ಸರಾಸರಿ ಒಂದು ಕುಟುಂಬಕ್ಕೆ ೨ವರೆ ಎಕರೆ ಭೂಮಿಯನ್ನು ಹೊಂದಿರುವರು. ಪ್ರತಿಯೊಬ್ಬ ವ್ಯಕ್ತಿಗೆ ಸರಾಸರಿ ಅರ್ಧ ಎಕರೆ ಭೂಮಿಯು ಬರುವುದಿಲ್ಲ.

ಬೀದರ ಜಿಲ್ಲೆಯ ಟೋಕ್ರೆ ಕೋಳಿಯ ಒಟ್ಟು ಕುಟುಂಬಗಳಲ್ಲಿ ದೊಡ್ಡ ಗಾತ್ರದ ಕುಟುಂಬಗಳು ಹೇಳಿಕೊಳ್ಳುವಂತಿಲ್ಲ. ಅಂದರೆ ಈ ಗುಂಪಿನಲ್ಲಿ ಬರುವ ಕುಟುಂಬಗಳು ೨೫ ಎಕರೆಕ್ಕಿಂತಲೂ ಹೆಚ್ಚಿನ ಭೂಮಿಯನ್ನು ಹೊಂದಿರುತ್ತವೆ. ೧೦ರಿಂದ ೨೫ ಎಕರೆ ಭೂಮಿ ಇರುವಂಥ ಮಧ್ಯಮ ಗಾತ್ರದ ರೈತರ ಕುಟುಂಬಗಳು ಶೇಕಡ ೪ರಷ್ಟು ಇರುವವು. ೫ರಿಂದ ೧೦ ಎಕರೆ ಭೂಮಿ ಇರುವಂಥ ಅರೆ ಮಧ್ಯಮ ಗಾತ್ರದ ರೈತರ ಕುಟುಂಬಗಳು ಶೇಕಡ ೯ರಷ್ಟು ಇರುವವು. ೨ವರೆ ಎಕರೆ ಯಿಂದ ೫ ಎಕರೆ ಭೂಮಿ ಹೊಂದಿರುವ ಸಣ್ಣ ಗಾತ್ರದ ರೈತರ ಕುಟುಂಬಗಳು ಶೇಕಡ ೨೧ ರಷ್ಟಿರುವವು. ಮತ್ತು ಅತಿ ಸಣ್ಣ ಗಾತ್ರದ ರೈತರ ಕುಟುಂಬಗಳೂ ಶೇಕಡ ೨೧ರಷ್ಟಿರುವವು. ಶೇಕಡ ೪೫ರಷ್ಟು ಕುಟುಂಬಗಳಿಗೆ ಭೂಮಿ ಇಲ್ಲದೆ ಕೂಲಿ ಕೆಲಸದ ಮೇಲೆ ಜೀವನ ಸಾಗಿಸುತ್ತಿದ್ದಾರೆ. ಹೆಚ್ಚು ಕಾಲ ದುಡಿಸಿಕೊಂಡು ಕಡಿಮೆ ಕೂಲಿ ಕೊಡುವುದರಿಂದ ಜೀವನ ನಿರ್ವಹಣೆಗೆ ಕಷ್ಟವಾಗುತ್ತದೆ(ಕೋಷ್ಟಕ:೪.೧೨ ಮತ್ತು ವೃತ್ತಚಿತ್ರ:೪.೩ ನೋಡಿ).

**ಕೋಷ್ಟಕ : ೪.೧೨ ಬೀದರ ಜಿಲ್ಲೆಯ ಟೋಕ್ರೆ ಕೋಳಿಯವರ ಶ್ರೇಣೀಕೃತ ಭೂ ಹಿಡುವಳಿ**

| ತಾಲೂಕುಗಳು | ಕುಟುಂಬ | ಭೂಶ್ರೇಣಿಗಳು | | | | | |
|---|---|---|---|---|---|---|---|
| | | *ಎ | *ಬಿ | *ಸಿ | *ಡಿ | *ಇ | *ಒ |
| ೧. ಔರಾದ | ೩೬೯ | ೧ | ೨೯ | ೫೧ | ೧೦೨ | ೬೮ | ೧೧೮ |
| ೨. ಬಸವಕಲ್ಯಾಣ | ೫೦೮ | ೧ | ೨೩ | ೫೩ | ೯೪ | ೮೧ | ೨೫೬ |
| ೩. ಭಾಲ್ಕಿ | ೨೮೮ | | ೫ | ೧೨ | ೫೩ | ೮೯ | ೧೨೯ |
| ೪. ಬೀದರ | ೫೧೬ | | ೯ | ೪೩ | ೮೦ | ೧೨೫ | ೨೫೯ |
| ೫. ಹುಮನಾಬಾದ | ೮೩೩ | ೬ | ೨೪ | ೬೩ | ೨೧೨ | ೧೫೬ | ೩೭೨ |
| ಒಟ್ಟು | ೨೪೮೧ | ೮ | ೯೦ | ೨೨೨ | ೫೪೦ | ೫೧೯ | ೧೧೩೪ |

**ವೃತ್ತಚಿತ್ರ : ೪.೪ ಟೋಕ್ರೆ ಕೋಳಿಗಳ ಭೂ ಹಿಡುವಳಿಗಳ ಪ್ರಮಾಣ**




ವಿವರ

*ಎ = ದೊಡ್ಡ ಭೂ ಹಿಡುವಳಿದಾರರು ೨೫.೧ ಎಕರೆಯಿಂದ ಮೇಲ್ಪಟ್ಟ ಕುಟುಂಬಗಳು

*ಬಿ = ಮಾಧ್ಯಮ ಭೂ ಹಿಡುವಳಿದಾರರು ೧೦.೦೧ ಎಕರೆಯಿಂದ ೨೫ ಎಕರೆಯ ಭೂ ಹಿಡುವಳಿಯ ಕುಟುಂಬಗಳು

*ಸಿ = ಅರೆ ಮಾಧ್ಯಮ ಭೂ ಹಿಡುವಳಿದಾರರು ೫.೦೧ ಎಕರೆಯಿಂದ ೧೦ ಎಕರೆಯ ಭೂ ಹಿಡುವಳಿಯ ಕುಟುಂಬಗಳು

*ಡಿ = ಸಣ್ಣ ಭೂ ಹಿಡುವಳಿದಾರರು ೨.೫೧ ಎಕರೆಯಿಂದ ೫ ಎಕರೆಯ ಭೂ ಹಿಡುವಳಿಯ ಕುಟುಂಬಗಳು

*ಇ = ಅತಿ ಸಣ್ಣ ಭೂ ಹಿಡುವಳಿದಾರರು ೨.೫೦ ಎಕರೆವರೆಗಿನ ಭೂ ಹಿಡುವಳಿಯ ಕುಟುಂಬಗಳು

*ಒ = ಭೂ ರಹಿತ ಕುಟುಂಬಗಳು

**ಬೀಜ ಹಾಗೂ ಆಹಾರ ಪದಾರ್ಥಗಳ ಸಂರಕ್ಷಣೆ :** ಟೋಕ್ರೆ ಕೋಳಿಯವರು ವ್ಯವಸಾಯಗಾರರಾದ ಮೇಲೆ ಬೀಜ ಮತ್ತು ಆಹಾರ ಪದಾರ್ಥಗಳ ರಕ್ಷಣೆ ಮಾಡಲು ಕಲಿತರು. ಇವರು ಹೊಲದಲ್ಲಿ ಬೆಳೆದ ಧಾನ್ಯಗಳು, ಆಹಾರಕ್ಕೆ ಬೇಕಾದಷ್ಟು ಇಟ್ಟುಕೊಂಡು ಉಳಿದುದನ್ನು ತಮಗೆ ಬೇಕಾದ ಪದಾರ್ಥಗಳನ್ನು ಪಡೆಯಲು ವಿನಿಮಯಮಾಡಿಕೊಳ್ಳುತ್ತಿದ್ದರು. ಬೇಳೆ ಕಾಳುಗಳು, ಜೋಳ ಮೊದಲಾದವನ್ನು ಕರ್ಸಿ (ದೊಡ್ಡ ಆಹಾರ ಸಂಗ್ರಹಣೆಯ ಸಾಧನ) ಮತ್ತು ಗುಮ್ಮಿಯಲ್ಲಿ (ಚಿಕ್ಕ ಆಹಾರ ಸಂಗ್ರಹಣೆಯ ಸಾಧನ) ಹಾಕಿ ಅದರ ಮೇಲೆ

ಭತ್ತದ ಹುಲ್ಲು ಹಾಕಿ ಕೆಸರಿನಿಂದ ಮುಚ್ಚಿ ಸಗಣಿಯಿಂದ ಸಾರಿಸುತ್ತಿದ್ದರು. ಹೀಗೆ ಮಾಡಿದರೆ ಎರಡು ಮೂರು ವರ್ಷ ಇಟ್ಟರೂ ಹುಳಹತ್ತುತ್ತಿರಲಿಲ್ಲ. ಅವರು ಆಹಾರ ಧಾನ್ಯ ಸಂರಕ್ಷಿಸುವ ರೀತಿ ಇದಾಗಿತ್ತು.

ಇತ್ತೀಚಿನ ದಿನಗಳಲ್ಲಿ ಗೋಣಿ ಚೀಲಗಳಲ್ಲಿ ಬೀಜ ಇಡುತ್ತಿರುವರು ಕಂಡುಬರುತ್ತದೆ. ಬೀಜ ಇಡುವಂಥ ಸಂದರ್ಭದಲ್ಲಿ ಅದರಲ್ಲಿ ಬೇವಿನ ಸೋಪ್ಪು, ಉಪ್ಪು ಮಿಶ್ರಮಾಡಿ ಇಡುವರು. ಇದರಿಂದ ನುಸಿ, ಹುಳು ಹತ್ತುವುದನ್ನು ತಪ್ಪಿಸಬಹುದಾಗಿದೆ. ಇಂದಿಗೂ ಕರಬನ್‌ಗಳಲ್ಲಿ ಇವರು ದವಸ ಧಾನ್ಯಗಳನ್ನು ಶೇಖರಿಸಿಡುವರು. ಹಳ್ಳಿಗಳಲ್ಲಿ ದೊಡ್ಡ ದೊಡ್ಡ ಮಡಕೆಗಳನ್ನು ಒಂದರ ಮೇಲೆ ಒಂದಿಡುವುದಕ್ಕೆ ಕರಬನ್ ಅಥವಾ ಅಡಕಿಲ್ ಎಂದು ಕರೆಯುವರು. ಅದರಲ್ಲಿ ಆಹಾರ ಪದಾರ್ಥಗಳನ್ನು, ಬೀಜಗಳನ್ನೂ ಸಂರಕ್ಷಿಸುವರು.

ಸುಗ್ಗಿಯ ಕಾಲದಲ್ಲಿ ಮೊದಲು ಬೀಜಕ್ಕಾಗಿ ಬೇಕಾಗುವಷ್ಟು ಬೀಜಗಳನ್ನು ತೆಗೆದಿಟ್ಟು ಉಳಿದಿದನ್ನು ದಿನ ಬಳಕೆಗಾಗಿ ಬಳಸುವರು. ತಮಗೆ ಬೇಕಾದ ಪದಾರ್ಥಗಳನ್ನು ಹಾಳಾಗದಂತೆ, ಹುಳು ಹತ್ತದಂತೆ ಬಹಳ ಜಾಗರೂಕತೆಯನ್ನು ವಹಿಸುತ್ತಾರೆ. ಕೆಲವರು ಹೆಚ್ಚು ಧಾನ್ಯವನ್ನು ಬೀಜಕ್ಕೆ ಇಟ್ಟು ಬೇಕಾದವರಿಗೆ ಮಾರಿಕೊಳ್ಳುವರು. ಇದರಲ್ಲಿ ಇವರಿಗೆ ಅಲ್ಪ ಲಾಭ ದೊರಕುವುದು. ಅಂದರೆ ಒಂದರಷ್ಟು ಕೊಟ್ಟು ಒಂದುವರೆ ತೆಗೆದುಕೊಳ್ಳುವರು. ಎಣ್ಣೆ ಕಾಳು ಹಾಗೂ ಜೋಳದ ಬೀಜವನ್ನು ಎರಡುಪಟ್ಟು ತೆಗೆದು ಕೊಳ್ಳುವರು.

**ವ್ಯಾಪಾರ ಮತ್ತು ಅಳತೆಯ ಸಾಧನಗಳು :** ಹಿಂದಿನ ಕಾಲದಲ್ಲಿ ಟೋಕ್ರೆಕೋಳಿಯವರಿಗೆ ಹಣದ ಬಗ್ಗೆ ಅಷ್ಟಾಗಿ ಅಭಿರುಚಿ ಇರಲಿಲ್ಲ. ತಮ್ಮ ಹೊಲದಲ್ಲಿ ಬೆಳೆದ ಧಾನ್ಯಗಳು ಇನ್ನಿತರ ಧಾನ್ಯದ ಬದಲಾಗಿ ಕೊಡು ಕೊಳ್ಳುವಿಕೆ ಮಾಡಿಕೊಳ್ಳುತ್ತಿದ್ದರು. ಆದರೆ ಹೊಲದಲ್ಲಿ ಬೆಳೆದ ಧಾನ್ಯಗಳು ವ್ಯಾಪಾರ ಮಾಡುತ್ತಿರಲಿಲ್ಲ. ಅವರು ಬೆಳೆದ ತರಕಾರಿ, ಧಾನ್ಯ ಮತ್ತು ಹಣ್ಣು ಹಂಪಲುಗಳನ್ನು ತಮಗೆ ಅಗತ್ಯವಿದಷ್ಟು ಇಟ್ಟುಕೊಂಡು ಉಳಿದವು ಕೆಲವು ಸಲ ಉಚಿತವಾಗಿ ಬೇರೆಯವರಿಗೆ ಕೊಡುತ್ತಿದ್ದರು. ಆದರೆ ಇತ್ತೀಚೆಗೆ ಆಧುನಿಕರಣಕ್ಕೆ ಒಳಗಾದ ಇವರಲ್ಲಿ ಸಹ ವ್ಯಾಪಾರ ಮನೋಭಾವ ಬೆಳೆದಿದೆ.

ಇವರು ಅಳತೆಗಾಗಿ ಪಾವ (೧/೪), ನಿಟ್ಟುಗ (೧/೨), ಸೇರು (೪ಪಾವ), ಆರಣ (೨ಸೇರು), ಅಡ್ಡಿ(೨ಆರಣ), ಮಣ (೧೬ ಅಡ್ಡಿ), ಖಂಡಗ (೨೦ ಮಣ) ಇವುಗಳನ್ನು ಅಳತೆಯ ಸಾಧನಗಳಾಗಿ ಬಳಸುತ್ತಾರೆ. ಈ ಅಳತೆಯ ಸಾಧನಗಳ ಮೂಲಕ ತಮ್ಮ ವ್ಯಾಪಾರವನ್ನು ಮಾಡುತ್ತಾರೆ.

ಕ್ಷೇತ್ರಕಾರ್ಯ ಹಾಗೂ ಸಂದರ್ಶನಕ್ಕೆ ಹೋದಾಗ ಕಂಡ ಸತ್ಯಸಂಗತಿಯೆಂದರೆ. ಸಮಾಜದಲ್ಲಿ ಟೋಕ್ರೆ ಕೋಳಿಯವರು ಬಹಳ ಕೆಳಮಟ್ಟದ ಜೀವನ ನಡೆಸುತ್ತಿರುವುದು. ಇವರ ಜೀವನ ವಿಧಾನ, ಬದುಕುವ ರೀತಿನೀತಿಗಳು ತುಂಬಾ ಸರಳವಾಗಿದೆ. ಹಳ್ಳಿಗಳಲ್ಲಿ ಆಹಾರ ಪದಾರ್ಥಗಳನ್ನು ಮಣ್ಣಿನ ಮಡಕೆಗಳಲ್ಲಿ ಸ್ವಲ್ಪವಿದ್ದ ಪದಾರ್ಥಗಳನ್ನು ತುಂಬಿ ಒಂದರ ಮೇಲೆ ಒಂದರಂತೆ ಇಟ್ಟಿರುತ್ತಾರೆ. ಇದಕ್ಕೆ 'ಅಡಕಿಲ' (ಮಡಕೆಗಳು ಒಂದರ ಮೇಲೆ ಒಂದು ಏರಿಸುವುದು) ಕರೆಯುತ್ತಾರೆ. ಅಡಿಗೆ, ಹಾಲು ಹೈನಗಳು ಅಡಿಗೆ ಮಾಡುವ ಸ್ಥಳದಲ್ಲಿ ನೇತು ಹಾಕಿರುವ ನೆಲುಗಳಲ್ಲಿ ಇಟ್ಟಿರುತ್ತಾರೆ. ಅಡಿಗೆ ಮಾಡಲು ಹೆಚ್ಚಾಗಿ ಮಡಿಕೆಗಳು ಬಳಸುತ್ತಾರೆ. ಮಲಗಲು ಚಾಪೆ, ಕೌದಿ, ಕಂಬಳಿ, ಚೀಲ ಇತ್ಯಾದಿಗಳು ಮತ್ತು ಹೊದೆಯಲು ಕೌದಿ, ರಗ್ಗು, ಶಾಲುಗಳನ್ನು ಉಪಯೋಗಿಸುತ್ತಾರೆ.

ಟೋಕ್ರೆ ಕೋಳಿ ಜನರು ಮೂಲತಃ ಬೇಟೆಗಾರರಾದುದರಿಂದ ಮಾಂಸಾಹಾರವೇ ಇವರು ಹೆಚ್ಚಾಗಿ

ಇಚ್ಛಿಸುವರು. ಆದರೆ ಆರ್ಥಿಕ ಪರಿಸ್ಥಿತಿ ಕೆಳಮಟ್ಟದಾಗಿರುವುದರಿಂದ ಇವರು ಮಾಂಸ ಆಹಾರಕ್ಕಿಂತಲು ಹೆಚ್ಚಾಗಿ ಸಸ್ಯಾಹಾರದ ಸೇವನೆಯನ್ನೇ ಅವಲಂಬಿಸಿದ್ದಾರೆ. ಮೀನು, ಕುರಿ, ಕೋಳಿ, ಆಡು, ಮೊಲ ಮೊದಲಾದವುಗಳ ಮಾಂಸ ಸೇವಿಸುವವರಾದರೂ ಸಹ ಆಡಿನ ಮಾಂಸ ಇಷ್ಟವೆಂದು ಹೇಳುತ್ತಾರೆ. ಇವರು ಹಳ್ಳಿಗಳಲ್ಲಿ ಆಡುವ ಆಟಗಳೆಲ್ಲ ಆಡಿದರೂ 'ನಾವು' ಓಡಿಸುವುದು ಇವರಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಇವರು ತಮ್ಮ ಉದ್ಯೋಗವಾದ ಟೋಕ್ರೆ ನಡೆಸುವಾಗ ಮೈಲಿಗೆಯನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

**ಟೋಕ್ರೆ(ನಾವೆ)ಯ ಉದ್ಯೋಗ :** ಟೋಕ್ರೆ ಕೋಳಿಯರ ಮುಖ್ಯ ಕಸುಬು ಜನರನ್ನು, ಧಾನ್ಯಗಳನ್ನು ಒಂದು ದಡದಿಂದ ಇನ್ನೊಂದು ದಡಕ್ಕೆ ತಲುಪಿಸುವದಾಗಿತ್ತು. ಇಂದಿನ ದಿನಗಳಲ್ಲಿಯೂ ಕೂಡ ಸಾರಿಗೆ ಸಂಪರ್ಕಗಳಿಲ್ಲದ, ನದಿಗಳಿದ್ದ ಕಡೆಗಳಲೆಲ್ಲ ಈ ವೃತ್ತಿ ಚಾಲನೆಯಲ್ಲಿದೆ. ಬೀದರ ಜಿಲ್ಲೆಯಲ್ಲಿ ಹರಿಯುವ ಮಾಂಜರಾ ನದಿಯ ದಡದ ಗ್ರಾಮಗಳಾದ ಶ್ರೀಮಂಡಲ, ಕಂದಗೂಳ, ಚಿಲ್ಲರಗಿ, ವಾಂಜರಖೇಡ ಮುಂತಾದ ಕಡೆಗಳಲೆಲ್ಲ ಟೋಕ್ರೆಯನ್ನು ನದಿಯಲ್ಲಿ ಹಾಕಿ ಜನರನ್ನು ದಡದಿಂದ ದಡಕ್ಕೆ ತಲುಪಿಸುತ್ತಾರೆ."ಇದು ಒಳನಾಡುಗಳಲ್ಲಿ ಟೋಕ್ರೆಕೋಳಿ ಜನ ಪ್ರತಿ ವರ್ಷಕ್ಕೊಮ್ಮೆ ಹೊಸ ನಾವೆ ತರುವರು. ಮುಂಗಾರು ಮಳೆ ಆರಂಭವಾಗುತ್ತಲೇ ಕಾರಹುಣ್ಣಿಮೆಯ ದಿವಸ ನಾವೆಗೆ ಪೂಜಿಸುವರು. ಹೊಳೆ ತುಂಬಿ ಹರಿಯಲಾರಂಭಿಸಿದ ಒಂದು ಸೋಮವಾರ ಹೊಳೆಗೆ ಒಯ್ದು ಪೂಜಿಸಿ ಟೆಂಗು ಒಡೆದು ಊದಿನಕಡ್ಡಿ ಹಚ್ಚಿ, ಲೋಭಾನ ಸುಟ್ಟು ಸುತ್ತಿನ ಜನಗಳಿಗೆ ಟೆಂಗು ಹಂಚಿ ನಾವೆಯ ಉದ್ಯೋಗ ಆರಂಭಿಸುವರು. ಕೆಲವು ಕಡೆಗೆ ಊಟ ಹಾಕುವರು"(ವಾಲೀಕಾರ,ಚೆನ್ನಣ್ಣ:೨೦೦೦:೩೫೮).

ಹರಿಗೋಲ (ನಾವೆ) ಚಿಕ್ಕದಾಗಿದ್ದರೆ ಒಬ್ಬ ನಾವಿಕನೇ ಹೊಳೆ ದಾಟಿಸಲು ಸಾಕು. ಒಂದು ವೇಳೆ ದೊಡ್ಡದಾಗಿದ್ದರೆ ಇಬ್ಬರು ನಾವಿಕ(ಅಂಬಿಗಾರ)ರು ಬೇಕಾಗುತ್ತದೆ. ಸೂರ್ಯನ ಉದಯದೊಡನೆ ತಮ್ಮ ಕೆಲಸ ಆರಂಭಿಸಿ ಸೂರ್ಯಸ್ತದೊಂದಿಗೆ ತಮ್ಮ ಕೆಲಸಕ್ಕೆ ಮುಕ್ತಾಯ ಹೇಳುವರು. ಒಂದು ನಾವೆ(ಟೋಕ್ರೆ)ಯಲ್ಲಿ ೧೨ ಕ್ವಿಂಟಲ್ ಭಾರವನ್ನು ಸಾಗಿಸಲು ಸಾಧ್ಯ. ಒಬ್ಬ ವ್ಯಕ್ತಿಗೆ ಒಂದು ದಡದಿಂದ ಇನ್ನೊಂದು ದಡಕ್ಕೆ ತಲುಪಿಸಲು ತಲಾ ಮೂರು ೩ರೂಪಾಯಿ ತೆಗೆದುಕೊಳ್ಳುತ್ತಾರೆ. ನಾವಿಕರು ತಮ್ಮ ಊರಿನ ಜನರಿಗೆ ಹಣ ತೆಗೆದುಕೊಳ್ಳಲಾರದೆ ಕರೆದುಕೊಂಡು ಬರುವರು. ಏಕೆಂದರೆ ರಾಶಿಯ ಸಂದರ್ಭದಲ್ಲಿ ಹೊಲದಲ್ಲಿ ಬೆಳೆದ ಧಾನ್ಯಗಳನ್ನು ರಾಶಿಯ ರೂಪದಲ್ಲಿ ತೆಗೆದುಕೊಳ್ಳುತ್ತಾರೆ. ಆದ್ದರಿಂದ ಹಣವಿಲ್ಲದೆ ದಡಕ್ಕೆ ತಲುಪಿಸುವರು. ಮುಟ್ಟಾದವರಿಗೆ, ಶವಸಂಸ್ಕಾರ ಮಾಡಿ ಬಂದವರ ಮೈಮೇಲೆ ನಾವಿಕರು ಕೋಲಿ(ಹುಟ್ಟಿ)ನಿಂದ ನೀರು ಹಾಕಿ ಟೋಕ್ರೆಯೊಳಗೆ ಕೂಡಿಸಿಕೊಳ್ಳುತ್ತಾನೆ.

**ಮೀನುಗಾರಿಕೆ :** ಟೋಕ್ರೆ ಕೋಳಿಯವರ ಎರಡನೆಯ ಉದ್ಯೋಗ ಮೀನುಗಾರಿಕೆ. ಇವರು ಹಲವಾರು ಬಗೆಯ ಮೀನುಗಳನ್ನು ಬಲೆಯ ಸಹಾಯದಿಂದ ಹಿಡಿದು ನಗರಕ್ಕೆ ತಂದು ವ್ಯಾಪಾರ ಮಾಡುತ್ತಾರೆ. ಇದರಿಂದ ಬಂದ ಹಣದಿಂದ ಜೀವನ ಸಾಗಿಸುತ್ತಾರೆ. ಬೀದರ ಜಿಲ್ಲೆಯಲ್ಲಿ ಮೀನಿನ ಉದ್ಯೋಗ ಉನ್ನತ ಮಟ್ಟದಲಿಲ್ಲ. ಆದರೆ ಭಾರತ ಅಥವಾ ಕರ್ನಾಟಕದ ಇತರೆಡೆಗಳಲ್ಲಿ ಈ ವೃತ್ತಿ ಶ್ರೇಷ್ಠ ಸ್ಥಾನದಲ್ಲಿದ್ದು ಕಂಡು ಬರುತ್ತದೆ. ಬೀದರ ನಗರದ ಬಸವೇಶ್ವರ ಚೌಕ ಹತ್ತಿರ, ತರಕಾರಿ ಮಾರ್ಕೆಟ್‌ನಲ್ಲಿ ಮೀನಿನ ಅಂಗಡಿಗಳಿವೆ. ಮೀನಿನ ವ್ಯಾಪಾರದಿಂದ ಕೆಲವರು ಮಾತ್ರ ವ್ಯಾಪಾರ ಮಾಡಿ ಜೀವನ ಸಾಗಿಸಲು ಸಾಧ್ಯ. ಇವರು ಮೀನು ಹಿಡಿಯಲು ಬಲೆಗಳನ್ನು ತಯಾರಿಸುವರು.

**ಬೇಟೆಯಾಡುವುದು :** ಬೇಟೆಯಾಡುವುದು ಟೋಕ್ರೆ ಕೋಳಿಗಳ ವೃತ್ತಿಯಾಗಿತ್ತು. ಕಾಡಿನಿಂದ ನಾಡಿಗೆ ಬಂದ ಮೇಲೆ ಅದು ಕೆಲವು ಸಂದರ್ಭದಲ್ಲಿ ಮಾತ್ರ ಬೇಟೆಯಾಡಿ ತಂದ ಪ್ರಾಣಿಯನ್ನ ತಮ್ಮೆಲ್ಲ ಜನರು ಹರಿದು ಹಂಚಿ ತಿನ್ನುತ್ತಿದ್ದರು. ಇನ್ನಿತರರಿಗೆ ಕೊಟ್ಟು ಅವರಿಂದ ಜೋಳ ಬೇಳೆಕಾಳುಗಳನ್ನು ಪಡೆಯುತ್ತಿದ್ದರು.

**ತಟ್ಟು ನೇಯುವಿಕೆ :** ತಟ್ಟು ನೇಯುವುದು ಟೋಕ್ರೆ ಕೋಳಿಯವರ ಇನ್ನೊಂದು ವೃತ್ತಿ. ಬೀದರ ಜಿಲ್ಲೆಯಲ್ಲಿ ಇದು ಗೌಣವಾಗಿ ಕಂಡುಬರುತ್ತದೆ. ಸೆಣಬನ್ನು ತಂದು ಅದನ್ನು ಕದರಿನಿಂದ ದಾರವನ್ನು ತೆಗೆದು ಕಂಬಳಿ ನೇಯುವ ರೀತಿಯಲ್ಲಿ ನೇಯುವರು. ಇದರಿಂದ ತಯಾರಿಸಲ್ಪಟ್ಟ ನೇಯ್ಗೆಗಳು ಗಟ್ಟಿಮುಟ್ಟಾಗಿದ್ದು, ಹಾಸಿಕೊಳ್ಳಲು ಮಾತ್ರ ಉಪಯೋಗಿಸಬಹುದು. ಇವರು ನೇಯ್ದ ತಟ್ಟುಗಳು ಬೇರೆ ಜನರಿಗೆ ಮಾರಾಟ ಮಾಡಿ ಅದರಿಂದ ಬಂದ ಹಣದಿಂದ ಹೊಟ್ಟೆ ಹೊರೆದು ಕೊಳ್ಳುವರು. ಈ ವೃತ್ತಿಯು ಪ್ರಸ್ತುತದಲ್ಲಿ ಭಾಲ್ಕಿ ತಾಲೂಕಿನ ಸಿದ್ಧೇಶ್ವರ ಹಾಗೂ ಹಲಸಿ ಗ್ರಾಮಗಳಲ್ಲಿದೆ(ಛಾಯಾಚಿತ್ರ ನೋಡಿ).

**ಪಶುಸಂಪತ್ತು :** ಪ್ರಸ್ತುತದಲ್ಲಿ ಟೋಕ್ರೆ ಕೋಳಿಯವರ ಮುಖ್ಯ ಕಸುಬು ಬೇಸಾಯ ಸಂಬಂಧಿಯಾದರೂ, ಬೇಸಾಯದೊಡನೆ ಇನ್ನಿತರ ಉಪಕಸುಬುಗಳನ್ನು ಹೊಂದಿದ್ದಾರೆ. ಇವರು ಉಪಕಸುಬಾಗಿ ಪ್ರಾಣಿಗಳನ್ನು ಸಾಕುತ್ತಾರೆ. ಬೇಸಾಯದಿಂದ ಬಂದ ಹಣವನ್ನು ದೊಡ್ಡ ಪ್ರಮಾಣ ಸಮಸ್ಯೆಗಳ ಪರಿಹಾರಕ್ಕೆ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ಬಳಸಿಕೊಂಡರೆ, ಚಿಕ್ಕ ಚಿಕ್ಕ ಸಮಸ್ಯೆಗಳಾದ ಬೇನೆ, ಬೆಸರಿಕೆ, ಹಬ್ಬಹರಿದಿನಗಳ ಆಚರಣೆ, ಶುಭಕಾರ್ಯ ಮೊದಲಾದವುಗಳ ಖರ್ಚಿಗಾಗಿ ಪಶುಗಳನ್ನು ಮಾರಾಟ ಮಾಡಿ ಹಣವನ್ನು ಪಡೆಯುತ್ತಾರೆ. ಸಣ್ಣಪುಟ್ಟ ಕಷ್ಟಗಳ ನಿವಾರಣೆಗೆ ಹಾಗೂ ಅಭಿವೃದ್ಧಿಪರ ಕಾರ್ಯಗಳಿಗೆ ಇವು ಸಹಾಯಕವಾಗುತ್ತವೆ.

**ಕೋಷ್ಟಕ : ೪.೧೩ ಟೋಕ್ರೆ ಕೋಳಿ ಬುಡಕಟ್ಟಿನ ತಾಲೂಕುವಾರು ಪಶುಸಂಪತ್ತು**

| ಕ್ರ.ಸಂ. | ತಾಲೂಕುಗಳು | ಎತ್ತು | ಎಮ್ಮೆ | ಆಕಳು | ಕುರಿ | ಮೇಕೆ | ಕೋಳಿ |
|---|---|---|---|---|---|---|---|
| ೧ | ಔರಾದ ಬಿ | ೧೯೦ | ೨೪೫ | ೧೮೮ | ೧೦೫ | ೩೫೩ | ೨೮೧ |
| ೨ | ಬಸವಕಲ್ಯಾಣ | ೨೬೯ | ೨೩೦ | ೨೬೫ | ೨೪೮ | ೯೯ | ೪೪೬ |
| ೩ | ಭಾಲ್ಕಿ | ೯೧ | ೧೧೯ | ೯೮ | ೧೩೧ | ೯೭ | ೧೦೬ |
| ೪ | ಬೀದರ | ೧೪೫ | ೨೨೧ | ೧೧೪ | ೨೫ | ೨೨೨ | ೨೬೪ |
| ೫ | ಹುಮನಾಬಾದ | ೩೫೦ | ೨೭೨ | ೨೯೨ | ೧೫೪ | ೩೦೦ | ೨೩೯ |
| | ಒಟ್ಟು | ೧೦೪೫ | ೧೦೮೭ | ೯೫೭ | ೬೬೩ | ೧೦೭ | |

ಬೀದರ ಜಿಲ್ಲೆಯ ಟೋಕ್ರೆ ಕೋಳಿಯವರಲ್ಲಿಯ ಪಶುಸಂಪತ್ತುಗಳೆಂದರೆ ಎತ್ತು,ಎಮ್ಮೆ,ಆಕಳು, ಕುರಿ,ಮೇಕೆ ಮತ್ತು ಕೋಳಿ. ಇವರ ಒಟ್ಟು ಪಶುಸಂಪತ್ತಿನಲ್ಲಿ ಶೇಕಡ ೧೭ಎತ್ತು, ೧೮ಎಮ್ಮೆ, ೧೬ಆಕಳು, ೧೧ಕುರಿ, ೧೭ಮೇಕೆ ಮತ್ತು ೨೧ರಷ್ಟು ಕೋಳಿಗಳಿವೆ. ಕೋಳಿ ಸಾಕಲು ಯಾವ ಖರ್ಚುವೆಚ್ಚಗಳಿಲ್ಲ. ಕಡಿಮೆ ಬೆಲೆಯ ಕೋಳಿಯನ್ನು ಹಲವಾರು ಜನ ಖರ್ದಿಸಲು ಸಿದ್ಧರಿರುವರು. ಇದರಿಂದ ಇವರ ಆಗಾಗಿನ ಕಷ್ಟನಷ್ಟಗಳನ್ನು ನಿವಾರಿಸಿಕೊಳ್ಳಲು ಸಾಧ್ಯ. ಇದರ ಮೊಟ್ಟೆಗಳನ್ನು ಮಾರಿ ಬಿಸುವುದಕ್ಕೆ, ಉಪ್ಪು, ಜಿರಿಗೆ ಮೊದಲಾದ ದಿನನಿತದ ಅವಶ್ಯಕತೆಗಳನ್ನು ನೀಗಿಸಿಕೊಳ್ಳಲು ಸಹಕಾರಿಯಾಗುವುದು.

ವೃತ್ತಚಿತ್ರ : ೪.೫ ಬೀದರ ಜಿಲ್ಲೆಯ ಟೋಕ್ರೆ ಕೋಳಿಗಳ ಬುಡಕಟ್ಟಿನ ಪಶು ಸಂಪತ್ತು




ಎಮ್ಮೆ ಸಾಕಣೆ ಇವರಿಗೆ ಸಹಕಾರಿಯಾಗಿದೆ. ಇದು ಒಂದು ಸಲಕ್ಕೆ ೨ ರಿಂದ ೩ ಲೀಟರ ಹಾಲನ್ನು ಕೊಡುತ್ತವೆ. ಅದರಿಂದ ಬಂದ ಹಣದಿಂದ ದೈನಂದಿನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವರು. ಹಾಲಿನ ಜೊತೆಗೆ ತುಪ್ಪವನ್ನು ಕೂಡ ಮಾರಾಟ ಮಾಡುವರು. ಇವರಲ್ಲಿ ಆರ್ಥಿಕ ಕೊರತೆಯ ಕಾರಣದಿಂದ ವ್ಯಾಪಾರ ಮನೋಭಾವ ಬೆಳೆದದ್ದು ಕಂಡು ಬರುತ್ತದೆ.

ಎತ್ತುಗಳನ್ನು ಹೊಲವನ್ನು ಊಳಲು ಬಿತ್ತಲು ಉಪಯೋಗಿಸುತ್ತಾರೆ. ಸಾಮಾನ್ಯವಾಗಿ ಒಂದು ಜೋಡಿ ಎತ್ತುಗಳಿಗೆ ೧೨ ರಿಂದ ೧೫ ಸಾವಿರವರೆಗೆ ಬೆಲೆ ಇರುವುದರಿಂದ ಸಣ್ಣ ರೈತರಿಗೆ ಖರಿದಿಸಲು ಕಷ್ಟಸಾಧ್ಯ. ಅಂಥವರು ಎತ್ತು ಉಳ್ಳವರ ಕಡೆಯಿಂದ ಎಕರೆಗೆ ೩೦೦ ರೂಪಾಯಿ ಕೊಟ್ಟು ಹೊಲ (ಭೂಮಿ) ಹೊಡೆಯಲು ಬಿತ್ತಲು ಹಚ್ಚುವರು.ಇವರಲ್ಲಿ ಹಲವಾರು ಕುಟುಂಬಗಳು ಬೇರೆಯವರ ಹೊಲಗಳನ್ನು ಗೇಣಿಗೆ ಪಡೆದು ಕೃಷಿ ಮಾಡುತ್ತಾರೆ. ಅದಕ್ಕಾಗಿ ಇವರು ಎತ್ತುಗಳನ್ನು ಬಳಸುವರು.

ಮೇಕೆಗಳು ಇವರ ಬದುಕಿಗೆ ಆಶ್ರಯ ನೀಡುವಂತಹವು. ಇವರು ದಿನಗೂಲಿಗಾಗಿ ಅನ್ಯರ ಹೊಲಗಳಿಗೆ ಹೋದಾಗ ಒಂದೆರೆಡು ಮೇಕೆಗಳಿದ್ದವರು ಜೊತೆಗೆ ತೆಗೆದುಕೊಂಡು ಹೋಗುವರು. ಹೊಲದ ಕಟ್ಟಿಗೆ ಕಟ್ಟಿದರೆ ಅವು ಮೇಯುತ್ತವೆ. ಸಾಯಂಕಾಲ ಮನೆಗೆ ಬರುವಾಗ ತಮ್ಮೊಂದಿಗೆ ಕರೆದುಕೊಂಡು ಬರುವರು. ಇದರ ಸಾಕುವ ವೆಚ್ಚ ಹೆಚ್ಚಾಗಿರುವುದಿಲ್ಲ, ಹೆಚ್ಚು ಮೇಕೆಗಳನ್ನು ಹೊಂದಿದ್ದವ ಕುಟುಂಬದವರು ಇದಕ್ಕಾಗಿಯೇ ಒಬ್ಬನನ್ನು ಪ್ರತ್ಯೇಕವಾಗಿ ನೇಮಕ ಮಾಡಿರುತ್ತಾರೆ. ಮೇಕೆ ಒಂದು ಸಲಕ್ಕೆ ೨ ರಿಂದ ೩ ಮರಿಗಳನ್ನು ಹಾಕುತ್ತದೆ. ಇವುಗಳನ್ನು ಚೆನ್ನಾಗಿ ಸಾಕಿದರೆ ೬ ತಿಂಗಳಿಗೆ ಮರಿ ಹಾಕುವ ಸಾಮರ್ಥ್ಯ ಪಡೆದಿರುತ್ತವೆ. ಹೀಗಾಗಿ ಒಂದು ಮೇಕೆಗೆ ಸಾಮಾನ್ಯವಾಗಿ ೧,೦೦೦ ದಿಂದ ೧,೨೦೦ ರೂಪಾಯಿವರೆಗೆ ಬೆಲೆ ಬರುವುದು.

ಆಕಳು ಪಶುಪಾಲಕರಿಗೆ ಕಲ್ಪವೃಕ್ಷ. ಇದನ್ನು ಹಾಲು ಹೈನಗಳ ಬಳಕೆಗಾಗಿ ಸಾಕಿರುತ್ತಾರೆ. ಅಲ್ಲದೆ ಇದರ ಕರುಗಳು ಮುಂದೆ ದೊಡ್ಡವಾದಾಗ ಮಾರಿ ಹಣವನ್ನು ಪಡೆಯುತ್ತಾರೆ. ಮೇಲಿನ ಎಲ್ಲ ಪಶುಸಂಪತ್ತಿನಿಂದ

ಗೊಬ್ಬರವನ್ನು ಪಡೆಯುತ್ತಾರೆ. ಇದು ರಸಾಯನಿಕ ಗೊಬ್ಬರಕ್ಕಿಂತಲೂ ಉತ್ತಮ ಫಲವಂತಿಕೆಯ ಗುಣವನ್ನು ಪಡೆದಿರುತ್ತದೆ. ಇವರಲ್ಲಿ ಹೆಚ್ಚಿನವರು ಕೂಲಿಗರೆ ಆಗಿದರಿಂದ ಹೊಲದ ಕೆಲಸಗಳಿಗೆ ಹೋದಾಗ ಮೇವನ್ನು ತಂದು ಪಶುಗಳಿಗೆ ಒದಗಿಸುತ್ತಾರೆ. ಇವುಗಳನ್ನು ಸಾಕಲು ಹೆಚ್ಚು ವೆಚ್ಚ ಇರದ ಕಾರಣ ಒಂದೊಂದು ಮನೆಯಲ್ಲಿ ಒಂದೆರೆಡು ದನಗಳಾದರೂ ಕಂಡು ಬರುತ್ತವೆ.

**ಇತರೆ ಉದ್ಯೋಗಗಳು :** ನಾವೆ ನಡೆಸುವುದು, ಮೀನು ಹಿಡಿಯುವುದರ ಜೊತೆಗೆ ಇತರ ಉದ್ಯೋಗಗಳನ್ನೂ ಇವರು ಅವಲಂಬಿಸಿದ್ದಾರೆ. ಇವರು ಹಿಂದಿನಿಂದಲೂ ಪಶುಪಾಲನೆ, ವಾಲೀಕಾರಿಕೆ, ನಾಟಿಕಾರ, ಅಂಬಿಗಾರ ವೃತ್ತಿಯನ್ನು ಮಾಡಿಕೊಂಡು ಬಂದಿದ್ದಾರೆ. ಈಗ ವೃತ್ತಿಗಳೆಲ್ಲವೂ ಕೈತಪ್ಪಿದ್ದರಿಂದ ಅವರೆಲ್ಲರೂ ಸಣ್ಣ ಪ್ರಮಾಣದ ಕೃಷಿಯನ್ನು, ಕೃಷಿ ಕೂಲಿಯನ್ನು ಅವಲಂಬಿಸಿದ್ದಾರೆ. ಬಯಲು ಭೂಮಿಯಿದ್ದರೆ ಜೋಳ, ತೊಗರಿ, ಸೇಂಗಾ, ಹತ್ತಿ, ಕುಸಬಿ, ಕಡಲೆ, ಉದ್ದು, ಹೆಸರು ಮೊದಲಾದ ಬೆಳೆಯನ್ನು ಬೆಳೆಯುತ್ತಿದ್ದಾರೆ. ಬಾವಿ, ತೊರೆಪಟ್ಟಿ ಇದ್ದರೆ ನೀರನ್ನು ಉಪಯೋಗಿಸಿಕೊಂಡು ಕಬ್ಬು, ಭತ್ತ, ಗೋಧಿ ತರಕಾರಿ ಬೆಳೆಯುತ್ತಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಈ ಸಮುದಾಯದ ಕೆಲವು ಜನರು ಶಿಕ್ಷಣವನ್ನು ಹೊಂದಿ (ಪಡೆದು) ಕೋರ್ಟು, ಕಛೇರಿಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಕೆಲವರು ಶಿಕ್ಷಕರಾಗಿದ್ದಾರೆ. ಇನ್ನೂ ಕೆಲವರು ಡಾಕ್ಟರ್ ಆಗಿದ್ದಾರೆ. ಕೆಲವು ಕಡೆ ವ್ಯಾಪಾರವನ್ನು ಮಾಡುವುದು ಕಂಡು ಬರುತ್ತದೆ. ಇತ್ತೀಚೆಗೆ ಮೀಸಲಾತಿಯ ಲಾಭವನ್ನು ಪಡೆದು ಕೆಲವರು ಗ್ರಾಮ ಪಂಚಾಯತಿ, ತಾಲೂಕು ಪಂಚಾಯಿತಿ ಸದಸ್ಯರಾಗಿರುತ್ತಾರೆ. ರೈತರಲ್ಲಿ ಆಳಾಗಿ ದುಡಿಯುತ್ತಿದ್ದಾರೆ, ಕೂಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲಿ ಸಿಕ್ಕಂತಹ ಹೋಟೆಲ, ಕಾರ್ಖಾನೆ, ಅಂಗಡಿ, ಶಾಲೆ ಮತ್ತಿತರ ಸಂಘ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವುದು ಕಂಡು ಬರುತ್ತದೆ.

## ೪. ಶೈಕ್ಷಣಿಕ ನೆಲೆ

**ಶಿಕ್ಷಣ :** ರಾಷ್ಟ್ರದ ಆಧಾರ ಸ್ಥಂಬವೆಂದರೆ ಶಿಕ್ಷಣ. ಶಿಕ್ಷಣ ಸಮಾಜದ ಬೆನ್ನೆಲುಬು. ಶಿಕ್ಷಣವೆಂದರೆ ವ್ಯಕ್ತಿಯ ಸರ್ವಾಂಗೀಣ ವಿಕಾಸ, ಶಿಕ್ಷಣ ಸಾರ್ವತ್ರಿಕರಣಕ್ಕಾಗಿ ಎಂದೆಂದೂ ಹೋರಾಟವಿದೆ. ಆದರೂ ಅಕ್ಷರ ಜ್ಞಾನ ಹೊಂದಿರುವ ವಿಷಯದಲ್ಲಿ ಬೀದರ ಜಿಲ್ಲೆ ರಾಜ್ಯದಲ್ಲಿ ಹಿಂದುಳಿದ ಜಿಲ್ಲೆಯಾಗಿದೆ. ಶಿಕ್ಷಣದಿಂದಲೇ ಒಬ್ಬ ವ್ಯಕ್ತಿ ದೇಶದ ಆರ್ಥಿಕ ಪ್ರಗತಿಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಸಾಧ್ಯವಾಗುತ್ತದೆ. ಶಿಕ್ಷಣದಿಂದಲೇ ಒಬ್ಬನ ಕಾರ್ಯ ಸಾಮರ್ಥ್ಯ ಅಧಿಕಗೊಳ್ಳುತ್ತದೆ. ಹಾಗೂ ಅಧಿಕ ಹಣ ಸಂಪಾದಿಸಲು ಸಾಧ್ಯ. ೧೯೯೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಶೇಕಡ ೩೬.೪೪ರಷ್ಟು ಜನರು ಅಕ್ಷರ ಜ್ಞಾನ ಪಡೆದಿರುತ್ತಾರೆ. ಅದರಲ್ಲಿ ಶೇಕಡ ೪೭.೬೦ ಪುರುಷರು ಮತ್ತು ೨೪.೭೬ರಷ್ಟು ಸ್ತ್ರೀಯರು ಅಕ್ಷರ ಜ್ಞಾನ ಹೊಂದಿರುವರು. ತಾಲೂಕುವಾರು ಒಟ್ಟು ಸಾಕ್ಷರತೆಯ ಪ್ರಮಾಣವನ್ನು ವೀಕ್ಷಿಸಿದಾಗ ಬೀದರ ತಾಲೂಕಿನಲ್ಲಿ ಅತೀ ಹೆಚ್ಚು ಮತ್ತು ಔರಾದ ತಾಲೂಕಿನಲ್ಲಿ ಅತಿ ಕಡಿಮೆ ಸಾಕ್ಷರತೆ ಇದೆಯೆಂಬುದು ಗೊತ್ತಾಗುತ್ತದೆ. ಜಿಲ್ಲೆಯ ಪರಿಶಿಷ್ಟ ಪಂಗಡದ ಸಾಕ್ಷರತೆ ಶೇಕಡ ಪ್ರಮಾಣ ೮.೩೧. ಜನಗಣತಿ ೨೦೦೧ರಲ್ಲಿ ಬೀದರ ಜಿಲ್ಲೆಯ ಸಾಕ್ಷರತೆ ಪ್ರಮಾಣ ೬೧.೯ಲಕ್ಕೆ ತಲುಪಿದೆ. ಅದರಲ್ಲಿ ೭೩.೨೯ ರಷ್ಟು ಪುರುಷರು ಮತ್ತು ೫೦.೦೧ರಷ್ಟು ಸ್ತ್ರೀಯರು ಸಾಕ್ಷರರಿರುವುದು ದಾಖಲಾಗಿದೆ.

ಕೋಷ್ಟಕ: ೪.೧೪ ಬೀದರ ಜಿಲ್ಲೆಯ ತಾಲೂಕುವಾರು ಸಾಕ್ಷರತೆ ಪ್ರಮಾಣ ಮತ್ತು ಜನಸಂಖ್ಯೆ

| ತಾಲೂಕು | ಸಾಕ್ಷರತೆ | | | ಸಾಕ್ಷರರ ಜನಸಂಖ್ಯೆ | | |
|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ ಔರಾದ | ೫೨.೮೮ | ೨೫.೪೮ | ೩೯.೫ | ೪೪,೮೭೩ | ೨೦,೭೬೧ | ೬೫,೬೩೪ |
| ೨ ಬಸವಕಲ್ಯಾಣ | ೫೭.೭೧ | ೨೭.೭೭ | ೪೨.೯೫ | ೫೭,೬೨೩ | ೨೬,೯೫೬ | ೮೪,೫೭೯ |
| ೩ ಭಾಲ್ಕಿ | ೬೧.೯೨ | ೩೦.೨೬ | ೪೬.೪೭ | ೫೬,೪೩೯ | ೨೬,೨೯೩ | ೮೨,೭೩೨ |
| ೪ ಬೀದರ | ೬೨.೯೧ | ೩೭.೯೨ | ೫೦.೯೬ | ೮೬,೮೮೦ | ೪೮,೦೧೩ | ೧,೩೪,೮೯೬ |
| ೫ ಹುಮನಾಬಾದ | ೫೭.೧೦ | ೨೮.೦೭ | ೪೨.೮೭ | ೫೬,೫೩೧ | ೨೬,೬೯೨ | ೮೩,೨೨೩ |
| ಬೀದರ ಜಿಲ್ಲೆ | ೫೮.೯೭ | ೩೦.೫೩ | ೪೫.೧೧ | ೩,೦೨,೩೪೬ | ೧,೪೮,೭೧೫ | ೪,೫೧,೦೬೧ |

ಮೂಲ:ಬೀದರ ಜಿಲ್ಲೆಯ ಅಂಕಿ ಅಂಶಗಳ ನೋಟ-೧೯೯೮-೯೯

'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಲೇಸು' ಎಂಬ ನಾಣ್ಣುಡಿಯಂತೆ ಟೋಕ್ರೆ ಕೋಳಿಯವರ ಒಲವು ಹೆಚ್ಚಾಗಿ ಕೃಷಿಯ ಕಡೆಗಿದ್ದುದು ಕಂಡು ಬರುತ್ತದೆ. ಇವರ ಸಾಕ್ಷರತೆಯ ಪ್ರಮಾಣ ಕಡಿವೆಯಿದೆ. ಇದನ್ನು ಹೋಗಲಾಡಿಸಬೇಕಾದರೆ ಓದಿದ ನವ ತರುಣರು ಶಿಕ್ಷಣದ ಬಗ್ಗೆ ಒಲವು ಮೂಡಿಸಬೇಕು. ಬೀದರ ಜಿಲ್ಲೆಯ ಟೋಕ್ರೆ ಕೋಳಿ ಸ್ತ್ರೀಯರ ಶಿಕ್ಷಣ ಪ್ರಮಾಣ ತೀರಾ ಕಡಿಮೆಯಿದೆ. ಕೆಲವೊಂದು ಕುಟುಂಬದಲ್ಲಿ ಮಾತ್ರ ಶಿಕ್ಷಣ ಪಡೆಯುತ್ತಿದ್ದಾರೆ. ಒಂದು ಕುಟುಂಬದಲ್ಲಿ ಒಂದು ಸ್ತ್ರೀ ಓದಿದರೆ ಇಡೀ ಕುಟುಂಬವನ್ನು ಅಕ್ಷರಸ್ಥರನಾಗಿ ಮಾಡುವ ಸಾಧ್ಯತೆಗಳಿರುತ್ತವೆ. ಇದರಿಂದ ಶಿಕ್ಷಣದಲ್ಲಿ ಕ್ರಾಂತಿಯಾಗುತ್ತದೆ. ಟೋಕ್ರೆ ಕೋಳಿ ಸಮುದಾಯದ ಕಾರ್ಯಕರ್ತರು ಶಿಕ್ಷಣದ ಬಗ್ಗೆ ಪ್ರಸಾರ ಮತ್ತು ಪ್ರಚಾರ ಮಾಡಬೇಕು. ಸಮುದಾಯದಿಂದ ಶಾಲೆಯ ಸ್ಥಾಪನೆ, ವಸತಿ ನಿಲಯಗಳು ಆರಂಭಿಸುವಂತೆ ಮಾಡಬೇಕು. ಬುಡಕಟ್ಟು ಜನರ ಮಕ್ಕಳಿಗಾಗಿ ಶಾಲೆಯನ್ನು ಹಾಗೂ ವಯೋವೃದ್ಧರ ವಸತಿ ಗೃಹವನ್ನು ಟೋಕ್ರೆ ಕೋಳಿ ಸಮುದಾಯದ ಬಿ.ನಾರಾಯಣರಾವ್ ಬೀದರ ಜಿಲ್ಲೆಯಲ್ಲಿ ಸ್ಥಾಪಿಸಿದ್ದಾರೆ.

ಕಡ್ಡಾಯ ಶಿಕ್ಷಣ ಜಾರಿಗೆ ಬಂದಾಗಿನಿಂದ ಹಲವಾರು ಹಳ್ಳಿಗಳಲ್ಲಿ ಶಾಲೆಗಳು ನಿರ್ಮಾಣವಾಗಿವೆ. ಆ ಗ್ರಾಮದಲ್ಲಿಯ ಶಾಲೆಯಲ್ಲಿ ಯಾವ ತರಗತಿಯವರೆಗೆ ಶಾಲೆಯಿದೆಯೋ ಆ ತರಗತಿಯವರೆಗೆ ಮಾತ್ರ ಹೆಣ್ಣು ಮಕ್ಕಳು ಓದುತ್ತಿದ್ದಾರೆ. ಕೆಲವೊಂದು ಸಲ ಗಂಡು ಮಕ್ಕಳಿದ್ದರೆ ಸಮೀಪದ ಬೇರೆ ಹಳ್ಳಿಗೆ ಹೋಗಿ ಶಿಕ್ಷಣ ಮುಂದುವರೆಸುತ್ತಾರೆ. ಆದರೆ ಹುಡುಗಿಯರಿಗೆ ಊರಲಿದ್ದ ಶಿಕ್ಷಣದವರೆಗೆ ಓದಿ ನಿಲ್ಲಿಸುವ ಕಾರಣದಿಂದಾಗಿ ಗಂಡು ಮಕ್ಕಳ ಸಾಕ್ಷರತೆಯ ಪ್ರಮಾಣಕ್ಕಿಂತ ಹೆಣ್ಣು ಮಕ್ಕಳದು ಕಡಿಮೆ ಪ್ರಮಾಣದಲ್ಲಿದೆ.

ಬೀದರ ಜಿಲ್ಲೆಯ ತಾಲೂಕವಾರು ಆಯ್ದ ೩೦ ಟೋಕ್ರೆ ಕೋಳಿ ಬುಡಕಟ್ಟಿನವರು ನೆಲೆಗೊಂಡ ಗ್ರಾಮಗಳಲ್ಲಿಯ ಪ್ರಸ್ತುತ ಸಾಕ್ಷರತೆಯ ಅಂಕಿಅಂಶಗಳು ಈ ಬುಡಕಟ್ಟಿನ ಶೈಕ್ಷಣಿಕ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ.

**ಕೋಷ್ಟಕ : ೪.೧೫ ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಸಾಕ್ಷರತೆ ಪ್ರಮಾಣ**

| ಕ್ರ.ಸಂ. | ತಾಲೂಕು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಔರಾದ | ೩೬.೯೪ | ೨೦.೪೦ | ೨೮.೬೭ |
| ೨ | ಬಸವಕಲ್ಯಾಣ | ೪೨.೧೬ | ೨೧.೬೪ | ೩೧.೯೦ |
| ೩ | ಭಾಲ್ಕಿ | ೫೩.೧೨ | ೩೦.೫೨ | ೪೧.೮೨ |
| ೪ | ಬೀದರ | ೪೫.೪೮ | ೧೧.೬೦ | ೨೮.೬೪ |
| ೫ | ಹುಮನಾಬಾದ | ೪೧.೦೮ | ೨೦.೦೯ | ೩೦.೫೮ |
| | ಬೀದರ ಜಿಲ್ಲೆ | ೪೨.೯೭ | ೧೮.೩೫ | ೩೦.೬೬ |

ಜಿಲ್ಲೆಯ ಸರಾಸರಿ ಸಾಕ್ಷರತೆಯ ಪ್ರಮಾಣಕ್ಕಿಂತ ಟೋಕ್ರೆ ಕೋಳಿ ಬುಡಕಟ್ಟಿನ ಸರಾಸರಿ ಸಾಕ್ಷರತೆ ಪ್ರಮಾಣ ಅತಿ ಕಡಿಮೆ ಇರುವುದು. ಇವರಲ್ಲಿಯ ಪುರುಷರ ಸಾಕ್ಷರತೆ ಪ್ರಮಾಣ ಔರಾದ ತಾಲೂಕಿನಲ್ಲಿ ಅತಿ ಕಡಿಮೆ ಅಂದರೆ ಶೇಕಡ ೩೬.೯೪ರಷ್ಟಿದ್ದರೆ ಸ್ತ್ರೀಯರಲ್ಲಿ ಶೇಕಡ ೧೧.೬೦ರಷ್ಟು ಬೀದರ ತಾಲೂಕಿನಲ್ಲಿರುವುದು ಚಿಂತನಾರ್ಹವಾದುದು(ಕೋಷ್ಟಕ ನೋಡಿ). ಇವರಲ್ಲಿಯ ಸ್ತ್ರೀಯರ ಸಾಕ್ಷರತೆಗೆ ವಿಶೇಷ ಕಾರ್ಯಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು ಅಗತ್ಯವಾಗಿದೆ.

ಮಾನವ ಬೌದ್ಧಿಕ ಮತ್ತು ನೈತಿಕ ಮಟ್ಟವನ್ನು ಅಭಿವೃದ್ಧಿಯಾಗಬೇಕಾದರೆ ಶಿಕ್ಷಣವೆಂಬ ಸಾಧನ ಬೇಕು. ಸಾಮಾನ್ಯವಾಗಿ ಬುಡಕಟ್ಟುಗಳಲ್ಲಿ ಅಕ್ಷರಸ್ಥರ ಸಂಖ್ಯೆ ಕಡಿಮೆ. ಇದು ಟೋಕ್ರೆ ಕೋಳಿ ಬುಡಕಟ್ಟಿನವರಿಗೂ ಅನ್ವಯವಾಗುತ್ತದೆ. ಆದರೆ ಬುಡಕಟ್ಟಿನ ಅಭಿವೃದ್ಧಿಯಾಗಬೇಕಾದರೆ ಶಿಕ್ಷಣದ ಪಾತ್ರ ಮಹತ್ವದು. ಔದ್ಯೋಗಿಕರಣಕ್ಕೆ ಒಳಗಾದ ನಮ್ಮ ರಾಜ್ಯದಲ್ಲಿ ಟೋಕ್ರೆ ಕೋಳಿ ಸಮುದಾಯದವರು ಹೊಸ ಹೊಸ ಔದ್ಯೋಗಿಕ ರಂಗದಲ್ಲಿ ಭಾಗವಹಿಸಿದರೆ ಅದರಲ್ಲಿರುವ ಜ್ಞಾನವನ್ನು ಪಡೆದುಕೊಂಡು ಬಡತನವನ್ನು ದೂರ ಓಡಿಸಲು ಸಾಧ್ಯ. ಇದಕ್ಕೆಲ್ಲ ಶಿಕ್ಷಣ ಬೇಕೆ ಬೇಕು.

**ಸಾಕ್ಷರತೆಯ ಮಟ್ಟ :** ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಸಾಕ್ಷರತೆಯ ಪ್ರಮಾಣವು ಪ್ರಾಥಮಿಕ ಹಂತದಲ್ಲಿ ಶೇಕಡ ೨೯.೬೩, ಮಾಧ್ಯಮಿಕ ಮಟ್ಟದಲ್ಲಿ ಶೇಕಡ ೨೭.೩೬, ಪ್ರೌಢ ಶಿಕ್ಷಣದಲ್ಲಿ ಶೇಕಡ ೨೭.೬೫, ಪದವಿಪೂರ್ವದಲ್ಲಿ ಶೇಕಡ ೮.೯೬, ಪದವಿಯಲ್ಲಿ ಶೇಕಡ ೫.೦೭, ತಾಂತ್ರಿಕ ಪದವಿಯಲ್ಲಿ ಶೇಕಡ ೦.೫೬, ಸ್ನಾತಕೋತ್ತರ ಪದವಿಯಲ್ಲಿ ಶೇಕಡ ೦.೫೦ ಮತ್ತು ಇನ್ನಿತರ ಪದವಿಗಳಲ್ಲಿ ಶೇಕಡ ೦.೨೪ ರಷ್ಟು ಪ್ರಸ್ತುತ ಸಮೀಕ್ಷೆಯ ಪ್ರಕಾರ ದಾಖಲಾಗಿದೆ. ಇದರಲ್ಲಿ ಷೇಕಡ ೮೪.೬೪ ರಷ್ಟು ಸಾಕ್ಷರರು ಪ್ರೌಢಶಾಲೆಯ ಹಂತದವರೆಗೆ ಅಭ್ಯಸಿಸಿರುವವರೇ ಇರುವರು. ಕೇವಲ ಶೇಕಡ ೬ರಷ್ಟು ಜನ ಪದವಿಧರರಿರುವರು. ಉನ್ನತ ಶಿಕ್ಷಣ ಪಡೆದವರ ಕೊರತೆ ಕಂಡುಬರುವುದು(ವೃತ್ತಚಿತ್ರ : ೪.೬ ನೋಡಿ).

ಕೋಷ್ಟಕ : ೪.೧೬ ಬೀದರ ಜಿಲ್ಲೆಯ ತಾಲೂಕುವಾರು ಟೋಕ್ರೆ ಕೋಳಿ ಬುಡಕಟ್ಟಿನ ಶೈಕ್ಷಣಿಕ ಮಟ್ಟ

| ಶೈಕ್ಷಣಿಕ ಮಟ್ಟ | ಔರಾದ | ಬಸವಕಲ್ಯಾಣ | ಭಾಲ್ಕಿ | ಬೀದರ | ಹುಮನಾಬಾದ | ಒಟ್ಟು |
|---|---|---|---|---|---|---|
| ೧ ಪ್ರಾಥಮಿಕ | ೩೧.೯೩ | ೩೭.೭೩ | ೨೫.೭೧ | ೨೫.೬೪ | ೨೮.೪೦ | ೨೯.೬೩ |
| ೨ ಮಾಧ್ಯಮಿಕ | ೨೪.೯೧ | ೨೮.೧೦ | ೨೬.೫೭ | ೩೧.೬೪ | ೨೫.೪೧ | ೨೭.೩೬ |
| ೩ ಪ್ರೌಢ | ೨೮.೦೧ | ೨೨.೮೪ | ೨೯.೦೦ | ೨೯.೧೬ | ೨೮.೮೩ | ೨೭.೬೫ |
| ೪ ಪದವಿ ಪೂರ್ವ | ೯.೪೪ | ೬.೩೮ | ೧೦.೪೨ | ೯.೨೦ | ೯.೪೯ | ೮.೯೬ |
| ೫ ಪದವಿ | ೪.೭೨ | ೪.೦೩ | ೬.೫೭ | ೩.೭೨ | ೬.೦೬ | ೫.೦೭ |
| ೬ ಪದವಿ ತಾಂತ್ರಿಕ | ೦.೮೧ | ೦.೭೮ | ೦.೪೨ | ೦.೩೧ | ೦.೫೭ | ೦.೫೬ |
| ೭ ಸ್ನಾತಕೋತ್ತರ | ೦.೬೫ | ೦.೧೧ | ೦.೭೧ | ೦.೧೦ | ೦.೮೫ | ೦.೫೦ |
| ೮ ಇತರೆ | ೦.೦೦ | ೦.೦೦ | ೦.೫೭ | ೦.೨೦ | ೦.೩೫ | ೦.೨೪ |
| ಬೀದರ ಜಿಲ್ಲೆ | ೧೦೦ | ೧೦೦ | ೧೦೦ | ೧೦೦ | ೧೦೦ | ೧೦೦ |

## ೫.ರಾಜಕೀಯ ನೆಲೆ

ರಾಷ್ಟ್ರದ ಉದಾತ್ತವಾದ ವ್ಯವಸ್ಥೆಯೇ ರಾಜಕೀಯ. ಅದು ಆಯಾ ದೇಶದ ಅಂತಸತ್ವವೂ ಆಗಿರುತ್ತದೆ. ಇದು ಸಮಸ್ತ ಜನಾಂಗದ ಮೇಲೆ ಪ್ರಭಾವ ಬೀರಿರುತ್ತದೆ. ಸ್ವಾತಂತ್ರ್ಯದ ಆರಂಭದ ವರ್ಷಗಳಲ್ಲಿ ಟೋಕ್ರೆ ಕೋಳಿ ಬುಡಕಟ್ಟಿನವರಿಗೂ ರಾಜಕೀಯಕ್ಕೂ ದೂರದ ನಂಟೂ ಇರಲಿಲ್ಲ. ಅದಕ್ಕೆ ಹಲವಾರು ಕಾರಣಗಳಿವೆ. ಮುಖ್ಯವಾಗಿ ರಾಜಕೀಯ ಪ್ರಜ್ಞೆ ಇವರಲ್ಲಿ ಇರಲಿಲ್ಲ. "ಯಾವ ಅರಸ ಬಂದರೂ ರಾಗಿ ಬೀಸೋದು ತಪ್ಪಲ್ಲ" ಎಂಬ ಗಾದೆಯಂತೆ ತಾವು ತಮ್ಮ ಪಾಡಿಗೆ ಜೀವನ ಸಾಗಿಸುತ್ತಲೇ ರಾಜಕೀಯದಿಂದ ದೂರ ಉಳಿದರು. ಅಲ್ಲದೆ ಮೂಲಭೂತವಾಗಿ ಇವರು ಮುಗ್ಧರಾಗಿದ್ದರಿಂದ ರಾಜಕೀಯ ಬದುಕಿನ ವ್ಯವಸ್ಥೆಯಿಂದ ಸಹಜವಾಗಿಯೇ ದೂರ ಉಳಿದವರು. ಆದರೆ ಯುವುದೇ ಜನಾಂಗ ಮೇಲೆ ಬರಬೇಕಾದರೂ ಆರ್ಥಿಕ, ಸಾಮಾಜಿಕ ಅಭಿವೃದ್ಧಿ ಎಷ್ಟು ಮುಖ್ಯವೋ ಪ್ರಜಾಪ್ರಭುತ್ವದಲ್ಲಿ ರಾಜಕೀಯ ಅಭಿವೃದ್ಧಿಯೂ ಅಷ್ಟೇ ಮುಖ್ಯವೆಂಬ ಅರಿವು ಅವರಲ್ಲಿ ತೀರ ತಡವಾಗಿ ಅಂದರೆ ಇತ್ತೀಚೆಗೆ ಮೂಡುತ್ತಿದೆ. ಈ ಅರಿವು ತಿಳುವಳಿಕೆ ಹಾಗೂ ಸಂವಿಧಾನ ಕೊಡ ಮಾಡಿದ ಮೀಸಲಾತಿಗಳಿಂದಾಗಿ ಇತ್ತಿಚಿನ ದಿನ(ವರ್ಷ)ಗಳಲ್ಲಿ ಮತಚಲಾಯಿಸುವುದುರೊಂದಿಗೆ ಚುನಾವಣೆಗೂ ನಿಲ್ಲುವ ಧೈರ್ಯ ಹೊಂದುತ್ತ ರಾಜಕೀಯದಲ್ಲಿ ಸಹಭಾಗಿಗಳಾಗುತ್ತಿದ್ದಾರೆ. ಗ್ರಾಮ ಪಂಚಾಯತ್, ತಾಲೂಕು ಪಂಚಾಯತ್ ಚುನಾಣೆಗೆ ನಿಂತು ಕೆಲವರು ಚುನಾಯಿತರಾಗಿದ್ದಾರೆ.

ಇಂದು ರಾಜಕೀಯದಲ್ಲಿ ಮುಂದೆ ಬರಬೇಕಾದರೆ ಹಣ ಮತ್ತು ಪ್ರಭಾವಗಳೇ ಹೆಚ್ಚು ಅನಿವಾರ್ಯವಾಗುತ್ತಿವೆ. ಇಂಥ ಸಂದರ್ಭದಲ್ಲಿ ಇವರಲ್ಲಿ ಬಹುಸಂಖ್ಯಾತರು ಚುನಾವಣೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಮತ ಚಲಾಯಿಸುತ್ತಿರುವುದು ಆರೋಗ್ಯಕರ ಬೆಳವಣಿಗೆಯಾಗಿದೆ. ಮೂಲಭೂತವಾಗಿ ಈ ಜಿಲ್ಲೆ ಹಿಂದುಳಿದ ಜಿಲ್ಲೆಯೆಂಬ ಹಣೆಪಟ್ಟಿ ಹೊಂದಿದ್ದು ಅದರಲ್ಲಿ ಬುಡಕಟ್ಟಿನ ಜನರು ರಾಜಕೀಯವಾಗಿ ಮತ್ತಷ್ಟು ಹಿಂದುಳಿದಿದ್ದಾರೆ.

ಅಬ್ರಹಾಂ ಲಿಂಕನ್‌ನ ಪ್ರಕಾರ ಪ್ರಜಾಪ್ರಭುತ್ವವೆಂದರೆ ಜನರೇ, ಜನ, ಜನರಿಗೊಸ್ಕರ ಇರುವಂಥ ಸರಕಾರವನ್ನು ಪ್ರಜಾಪ್ರಭುತ್ವ ಸರಕಾರ ಎಂದು ಹೇಳಲಾಗಿದೆ.

ಇಂದು ಹಳ್ಳಿಗಳ ಸ್ಥಿತಿ ಹಿನಾಯವಾಗಿದೆ. ರಾಜಕೀಯ ವ್ಯಕ್ತಿಗಳಿಂದ ಹಳ್ಳಿಯ ಬದುಕು ದುರ್ದೆಸೆಗೆ ಹೋಗುತ್ತಲಿದೆ. ತಮ್ಮ ಸ್ವಾರ್ಥ ಸಾಧನೆಗಾಗಿ ಎಂಥಹ ಕೆಟ್ಟಕೆಲಸ ಮಾಡಲು ಹಿಂದೆ ಮುಂದೆ ನೋಡುತ್ತಿಲ್ಲ. ಇವರು ಇಲ್ಲಿ ಹೆಗ್ಗಣಗಳಂತೆ ತೂತು ಕೊರೆಯುತ್ತಿದ್ದಾರೆ ಜಿಗಳೆಯಂತೆ ರಕ್ತ ಕುಡಿಯುತ್ತಿದ್ದಾರೆ. ಗೊಂಡಾರಣ್ಯದಲ್ಲಿಯ ಹುಲಿ, ಕರಡಿ, ಹಾವು, ಸಿಂಹ, ಚಿರತೆಗಳಿಗಿಂತ ಕನಿಷ್ಠವಾಗಿ ಬದುಕುತ್ತಿದ್ದಾರೆ (ವಾಲೀಕಾರ,ಚೆನ್ನಣ್ಣ:೧೯೯೩:೨೨೫). ಇಂದಿನ ಹಳ್ಳಿಗಳು ಯಾವ ಸ್ಥಿತಿಯಲ್ಲಿವೆ ಎಂಬುದು ಇದರಿಂದ ಗೊತ್ತಾಗುತ್ತದೆ. ಮೊದಲೇ ಅಜ್ಞಾನ, ಅನಕ್ಷರತೆ, ಬಡತನದಿಂದ ನರಳುತ್ತಿದ್ದ ಜನರಿಗೆ ರಾಜಕಾರಣಿಗಳು ಹಳ್ಳಿಗಳ ಸುಧಾರಣೆ, ಏಳಿಗೆಗಾಗಿ ಬಂದಂಥ ಸೌಲತ್ತು ಸೌಲಭ್ಯಗಳನ್ನು ಮಧ್ಯದಲ್ಲಿ ನುಂಗುತ್ತಿರುವರು. ಆದುದರಿಂದಲೇ ಬಡ ಜನತೆಯ ಬಡತನ ನಿವಾರಣೆಯಾಗದೆ ಬಡತನ ಹೆಚ್ಚುತ್ತಿರುವುದು ಅಂಕಿಅಂಶಗಳಿಂದ ತಿಳಿಯುವುದು.

"ನಮ್ಮ ಓಟಿನಿಂದಲೇ ಶಾಸಕರು ಸಚಿವರು. ನಾವು ಕೊಡುವ ತೆರಿಗೆಗಳಿಂದ ಅಧಿಕಾರಿಗಳು ನಮ್ಮ ಸೇವಕರು, ಇದುವೆ ನಿಜವಾದ ಪ್ರಜಾಪ್ರಭುತ್ವ ಎಂಬ ರಾಜಕೀಯ ಪ್ರಜ್ಞಾಪ್ರವಾಹ ಬಂದು ತಮ್ಮ ಹಕ್ಕಿಗಾಗಿ ಹಳ್ಳಿಗರು ಹೋರಾಟಕ್ಕಿಳಿದಾಗ ಮಾತ್ರ ಅವರನ್ನು ಯಾರೂ ತುಳಿಯಲು ಹೋಗುವುದಿಲ್ಲ. ಅವರ ಪ್ರೀತಿ ಗಳಿಸಲು ಎಲ್ಲರೂ ಒಡಾಡಬೇಕಾಗುವುದು"(ಅವರೇ :೧೯೯೩:೨೭೮). ಇದು ಟೋಕ್ರೆ ಕೋಳಿ ಬುಡಕಟ್ಟಿನ ಜನರಿಗೂ ಅನ್ವಯಿಸುವುದು.

"Politics is such a key by which we can open each and every lock". ಎಂದು ಡಾ.ಬಿ.ಆರ್.ಅಂಬೇಡ್ಕರ್ ಅವರು ಹೇಳಿದ ಮಾತು ಸತ್ಯಕ್ಕೆ ಸಮೀಪವಾಗಿದೆ. ನಾವು ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಂಡರೆ ನಮ್ಮ ಏಳಿಗೆಯನ್ನು ಕಾಣಲು ಸಾಧ್ಯ. ಆ ಪ್ರಜ್ಞೆಯನ್ನು ಇಲ್ಲದ ಕಾರಣವೇ ಈ ಸಮುದಾಯದವರು ಹಿಂದುಳಿಯಲು ಕಾರಣವೆಂದು ಹೇಳಬಹುದು. ಇತ್ತೀಚೆಗೆ ಶಿಕ್ಷಣದಿಂದ ಪ್ರಜ್ಞಾವಂತರಾದ ಜನ ರಾಜಕೀಯದಲ್ಲಿ ಭಾಗವಹಿಸುತ್ತಿದ್ದಾರೆ.

ರಾಜಕೀಯವೆಂದರೆ ಅಧಿಕಾರ, ಅಧಿಕಾರವೆಂದರೆ ಅರ್ಥ. ಅರ್ಥ ಮತ್ತು ಅಧಿಕಾರ ರಾಜಕೀಯದ ನಿಯಂತ್ರಣದಲ್ಲಿಟ್ಟುಕೊಳ್ಳಲು ಸಾಧ್ಯ. ಆದುದರಿಂದಲೇ ಆಧುನಿಕ ಬದುಕಿನಲ್ಲಿ ರಾಜಕೀಯಕ್ಕಾಗಿ ಹೋರಾಟ ನಡೆಯುತ್ತಲ್ಲಿದೆ. ಆದರೆ ಟೋಕ್ರೆ ಕೋಳಿ ಸಮುದಾಯದವರಿಗೆ ಇದರ ಪ್ರಜ್ಞೆ ಕಡಿಮೆ ಇರುವುದರಿಂದ ರಾಜಕೀಯದಲ್ಲಿ ಭಾಗವಹಿಸಲಿಕ್ಕೆ ಆಗುತ್ತಿಲ್ಲ.

## ಆಧಾರ ಗ್ರಂಥಗಳು

೧. ಅಂಬಳಿಕೆ ಹಿರಿಯಣ್ಣ(ಲೇ).,೧೯೯೪, 'ಜಾನಪದ ಕೆಲವು ವಿಚಾರಗಳು', ಡಾ.ಜೀ.ಶ.ಪರಮಶಿವಯ್ಯ (ಪ್ರಸಂ)., *ಜಾನಪದ ಸಮಹಾರ* (ಬೆಂಗಳೂರು:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ).

೨. ಗದಗಿಮಠ,ಬಿ.ಎಸ್.,೧೯೬೬, **ಕನ್ನಡ ಜಾನಪದ ಗೀತೆಗಳು.**

೩. ಖಂಡೋಬಾ ಪಿ.ಕೆ.,೧೯೯೩, **ಜಾನಪದ ಮುನ್ನೋಟ,** (ಗುಲಬರ್ಗಾ:ಸಂಗೀತಾ ಪಬ್ಲಿಕೆಶನ್ಸ್).

೪. ಓಪಿಕೆ(ಲೇ).,'ಗುಡಿಸಲಯೋಗಿ ಲಾಲ ಚಂದ್ ಹಣಮಂತಪ್ಪ ಗುರೂಜಿ ಶತಮಾನೋತ್ಸವ', *ಪ್ರಜಾವಾಣಿ* ಕರ್ನಾಟಕ ದರ್ಶನ ಶನಿವಾರ ೩ಂನೇ ಜನವರಿ ೧೯೯೯.

೫. ಬೋರಲಿಂಗಯ್ಯ,ಹಿ.ಚಿ., ೨೦೦೦, **ಬುಡಕಟ್ಟು ದೈವರಾಧನೆ** ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಮೈತ್ರಿ,ಕೆ.ಎಂ.,೧೯೯೪, **ಬೀದರ ಜಿಲ್ಲೆಯ ಗೊಂಡ ಆದಿವಾಸಿಗಳ ಸಮುದಾಯ ಒಂದು : ಸಮಾಜಶಾಸ್ತ್ರೀಯ ಅಧ್ಯಯನ** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೭. ನಾಯಕ,ವಿ.ಗ.,೧೯೯೩,**ಹರಿಕಾಂತರ ಸಂಸ್ಕೃತಿ** (ಬೆಂಗಳೂರು:ಕರ್ನಾಟಕ ಸಾಹಿತ್ಯ ಅಕಾಡೆಮಿ).

೮. ವಾಲೀಕಾರ,ಚನ್ನಣ್ಣ(ಲೇ).,೨೦೦೦,'ಟೋಕ್ರೆಕೋಳಿ', ಎಚ್.ಜೆ.ಲಕ್ಕಪ್ಪಗೌಡ(ಪ್ರಸಂ)., ***ಕರ್ನಾಟಕ ಬುಡಕಟ್ಟುಗಳು*** (ಬೆಂಗಳೂರು:ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ) ಸಂಪುಟ-೨:೩೨೨-೮೫

೯. ........., ***ವಾಲೀಕಾರ ಚನ್ನಣ್ಣನ ಜಾನಪದ ಲೋಕ,*** ೧೯೯೩,(ಗುಲಬರ್ಗಾ:ದಲಿತ ಬಂಡಾಯ ವಿಚಾರ ಪ್ರಚಾರ ಸಮಿತಿ ಬಡೇಪುರ ಕಾಲೋನಿ).

೧೦. ವೆಂಕಟರಾಜ ಪುಣಿಂಚತ್ತಾಯ., ೧೯೯೩, **ಮೊಗವೀರರ ಸಂಸ್ಕೃತಿ,** ಬೆಂಗಳೂರು ಕರ್ನಾಟಕ ಸಾಹಿತ್ಯ ಅಕಾಡೆಮಿ.

Encyclopedia Britanic.,1964, Vol.XIX, page-802.

11. William J. Goode., 1976, *The Family Foundation of Modern Sociology* (Delhi : Prentice Hall of India (p) Limited).

# ಅಧ್ಯಾಯ ೫
# ಸಾಹಿತ್ಯ

೧. ವೃತ್ತಿಗೆ ಸಂಬಂಧಿಸಿದ ಹಾಡುಗಳು
   ೧.೧. ಹೊಳೆದಾಟುವ ಹಾಡು
   ೧.೨. ಸಮುದ್ರದ ಹಾಡು
   ೧.೩. ವಾಲೀಕಾರನ ಹಾಡು
೨. ಭೂಲಾಯಿ ಹಾಡುಗಳು
   ೨.೧. ಬರದ ಹಾಡು
   ೨.೨. ಶಾಂವಕ್ಕ ಕುಟ್ಟಂದ್ರ
   ೨.೩. ಗಂಗೀ ಗೌರೀ ಹಾಡು
೩. ಋತುಮತಿ ಹಾಡುಗಳು
   ೩.೧. ದೀಪಾವಳಿ ಹಬ್ಬ
   ೩.೨. ತಾಯಿ ತವರೂರು
೪. ಭಜನೆ ಹಾಡುಗಳು
   ೪.೧. ತಾಯಿ ಸೇವೆ
   ೪.೨. ಊರ ಹೊರಗಿನ ಬಾವಿ
೫. ಜೋಕುಮಾರನ ಸಾಹಿತ್ಯ
   ೫.೧. ಜೋಕುಮಾರನ ಹಾಡು ೧
   ೫.೨. ಜೋಕುಮಾರನ ಹಾಡು ೨
   ೫.೩. ಜೋಕುಮಾರನ ದಂತ ಕಥೆ ೧
   ೫.೪. ಜೋಕುಮಾರನ ದಂತ ಕಥೆ ೨
   ೫.೫. ಜೋಕುಮಾರನ ದಂತ ಕಥೆ ೩
೬. ಗಾದೆಗಳು
೭. ಒಡಪುಗಳು

# ಅಧ್ಯಾಯ ೫
# ಸಾಹಿತ್ಯ

ಅನಕ್ಷರಸ್ಥ ಜನಸಮುದಾಯದ ಮೌಖಿಕ ಸಾಹಿತ್ಯವೇ ಜನಪದ ಸಾಹಿತ್ಯ. ಜನಪದಗೀತೆ, ಇದನ್ನು ಹಳ್ಳಿಯ ಹಾಡು ಎಂತಲೂ ಕರೆಯಲಾಗುತ್ತದೆ. ಈ ಹಳ್ಳಿಯ ಹಾಡಿನ ಉಗಮ ಯಾವಾಗ ಯಾರಿಂದ ಆಯಿತ್ತೆಂದು ಹೇಳಲಾಗುವುದಿಲ್ಲ. ಇವು ವ್ಯಷ್ಠಿಯಿಂದ ಸೃಷ್ಠಿಯಾದರೂ, ಸಮಷ್ಠಿಯಾಗಿ ಬೆಳೆದವು. ಇವು ಎಲ್ಲಾ ಸಮುದಾಯಗಳಲ್ಲಿ ಸಾಮಾನ್ಯವಾಗಿ ಕಂಡು ಬರುವವು. ದೇವರು, ವೃತ್ತಿಗೆ ಸಂಸ್ಕಾರಗಳಿಗೆ ಈ ಹಾಡುಗಳು, ಸಂಬಂಧಿಸಿದುವುಗಳಾಗಿರುವವು. ಅಂಬಿಗಾರಣ್ಣನ ಮೇಲೆ ಒಬ್ಬ ಗರತಿ ಕಟ್ಟಿದ ಹಾಡು ಈ ರೀತಿಯಲ್ಲಿದೆ. ಅದರಲ್ಲಿ ಅಂಬಿಗಾರ ನಂಬಿರುವ ಭಕ್ತಿಯ ವಿವರ ಹೇಳಲಾಗಿದೆ.

೧. **ವೃತ್ತಿಗೆ ಸಂಬಂಧಿಸಿದ ಹಾಡುಗಳು** ವೃತ್ತಿಗೆ ಸಂಬಂಧಿಸಿದ ಹಾಡುಗಳಲ್ಲಿ ಆಯಾ ಸಮುದಾಯದವರ ವೃತ್ತಿಯನ್ನು ಕಂಡು ಬರುತ್ತದೆ. ಹೊಳೆ ದಾಟುವ ಹಾಡು ಅಂಬಿಗಾರ ವೃತ್ತಿಯನ್ನು ವ್ಯಕ್ತವಾಗುವುದಲ್ಲದೇ ಅಂಬಿಗಾರರು ಗಂಗಮ್ಮನ ಮೇಲೆ ಇಟ್ಟಿರುವ ಭಕ್ತಿ ನಂಬಿಕೆಯನ್ನು ತಿಳಿದು ಬರುವುದು. ಸಮುದ್ರದ ಹಾಡಿನಲ್ಲಿ ನೀರಿನ ನೆಲೆಯನ್ನು ಅಂಬಿಗಾರ ಮಾತ್ರ ತಿಳಿದುಕೊಂಡಿರುವೆನೆಂದು ಹೇಳಲಾಗಿದೆ.

**೧.೧. ಹೊಳೆದಾಟುವ ಹಾಡು**

ನಮ್ಮವ್ವ ಕಳೆಸ್ಯಾಳೆ ಎಳ್ಳ ಹಚ್ಚಿದ ರೊಟ್ಟಿ ಎಣ್ಣೆ ಬದನಿಕಾಯಿ
ಇದು ಉಂಡು ಹೊಳೆಯ ದಾಟಿಸೋ ಅಂಬಿಗಾರಣ್ಣಾ
ತುಂಬಿಸೋ ಗೋಲ ಹರಿಗೋಲ |ಪಲ್ಲವಿ|

ಹೊಳೆ ದಾಟಿಸಲಾಕ ನನ್ನಿಚ್ಛಾ ನಿನ್ನಿಚ್ಛಾಯಿಲ್ಲ
ತಾಯಿ ಗಂಗಮ್ಮನ ಮನದಿಚ್ಛಾ ಮನದಿಚ್ಛಾ
ತಾಯಿಗಂಗಮ್ಮನ ಮನದಿಚ್ಛಾ ಹೊಮ್ಮಾಲದ್ಹಣ್ಣ
ನಾ ದಾಟಿಸಂಗಿಲ್ಲ ಹರಗೋಲ ||೧||

ನಮ್ಮವ್ವ ಕಟ್ಯಾಳ ಹಸರ ಲಿಂಬಿ ಹೊಳ
ಮಸರ ಅನ್ನಾ
ಇದು ಉಂಡು ಹೊಳೆಯಾ ದಾಟಿಸೊ ಅಂಬಿಗರಣ್ಣಾ
ತುಂಬಿಸೋ ಗೋಲ ಹರಿಗೋಲ ||೨||

ಹೊಳೆಯ ದಾಟಿಸಲಾಕ ನನ್ನಿಚಾ ನಿನ್ನಿಚ್ಛಾಯಿಲ್ಲ

ತಾಯಿ ಗಂಗಮ್ಮನ ಮನದಿಚ್ಛಾ ಮನದಿಚ್ಛಾ
ತಾಯಿ ಗಂಗಮ್ಮನ ಮನದಿಚ್ಛಾ ಹೊಮ್ಮಾಲದ್ಹೆಣ್ಣ
ನಾ ನಡಸಂಗಿಲ್ಲೆ ಹರಗೋಲ ||೩||

ನಮ್ಮವ್ವ ಕಟ್ಯಾಳ ಕರದ ಕರಚಿಕಾಯಿ
ಸುರಳಿಯ ಹೋಳಿಗೆ
ಇದು ಉಂಡು ಹೊಳೆಯ ದಾಟಿಸೊ ಅಂಬಿಗರಣ್ಣಾ
ತುಂಬಿಸೊ ಗೋಲ ಹರಗೋಲ ||೪||

ಹೊಳೆಯ ದಾಟಿಸಲಾಕ ನನ್ನಿಚ್ಛಾ ನಿನ್ನಿಚ್ಛಾಯಿಲ್ಲ
ತಾಯಿ ಗಂಗಮ್ಮನ ಮನಿದಿಚ್ಛಾ ಮನದಿಚ್ಛಾ
ತಾಯಿ ಗಂಗಮ್ಮನ ಮನಿದಿಚ್ಛಾ ಹೊಮ್ಮಾಲದ್ಹೆಣ್ಣ
ನಾ ದಾಟಸಂಗಿಲ್ಲ ಹರಗೋಲ ||೫||

ತೆಂಗಿನ ಬನದಾಗ ಬಾಗಿ ಬಂತೇ ಹರಗೋಲ
ಉತ್ತಮರ ಮಗಳು ನಾ ಅಂಬಿಗರಣ್ಣಾ
ಉತ್ತಮರ ಮಗಳು ನಾ ಅಂಬಿಗರಣ್ಣಾ
ದಾಟೀಸೋ ಹೊಳೆಯ ಬಲುಬೇಗ ||೬||

ಹೊಳೆಯ ದಾಟಿಸಲಾಕ ನನ್ನಿಚ್ಛಾ ನಿನ್ನಿಚ್ಛಾಯಿಲ್ಲ
ಅವ್ವ ಗಂಗವ್ವನ ಮನದಿಚ್ಛಾ ಮನದಿಚ್ಛಾ
ಅವ್ವ ಗಂಗವ್ವನ ಮನದಿಚ್ಛಾ ಮೀರಿ
ನಾ ದಾಟಿಸಂಗಿಲ್ಲೇ ಈ ಹೊಳೆಯಾ ||೭||

ಮಾಯಿನ ಬನದಾಗ ಬಾಗಿ ಬಂತೆ ಹರಗೋಲ
ಮಾನುಳ್ಳವರ ಸೊಸೆ ನಾ ಅಂಬಿಗಾರಣ್ಣಾ
ಮಾನುಳ್ಳವರ ಸೊಸೆ ನಾ ಅಂಬಿಗಾರಣ್ಣಾ
ದಾಟಿಸೋ ಹೊಳೆಯ ಅಣ್ಣಯ್ಯಾ ||೮||

ಹೊಳೆಯ ದಾಟಿಸಲಾಕೆ ನನ್ನಿಚ್ಛಾ ನಿನ್ನಿಚ್ಛಾಯಿಲ್ಲ
ತಾಯಿ ಗಂಗಮ್ಮನ ಮನದಿಚ್ಛಾ
ತಾಯಿ ಗಂಗಮ್ಮನ ಮನದಿಚ್ಛಾ ಮುರ್‍ದು
ನಾ ಹೊಳೆಯ ದಾಟಿಸಂಗಿಲ್ಲೇ ಎಲೆಹೆಣ್ಣೆ ||೯||

ಬಾಳಿಯ ಬನದಾಗ ಬಾಗಿ ಬಂತೆ ಹರಗೋಲ
ಬಾಳೆ ಉಳ್ಳವರ ಮಗಳು ನಾ ಅಂಬಿಗಾರಣ್ಣ
ಬಾಳೆ ಉಳ್ಳವರ ಮಗಳು ನಾ ಅಂಬಿಗಾರಣ್ಣ
ದಾಟಿಸೋ ಮುಂದಕ್ಕೆ ಹರಗೋಲ ||೧೦||

ಹೊಳೆಯ ದಾಟಿಸಲಾಕ ನನ್ನಿಚ್ಛಾ ನಿನ್ನಿಚ್ಛಾ
ತಾಯಿ ಗಂಗಮ್ಮನ ಮನದಿಚ್ಛಾ

ತಾಯಿ ಗಂಗಮ್ಮನ ಮನದಿಚ್ಛಾ ಬಿಟ್ಟು
ನಾ ದಾಟಿಸಂಗಿಲ್ಲ ಮುಂದಕ್ಕೆ ಹರಗೋಲ ||೧೧||

ನಿಂಬಿಯ ಬನದಾಗ ಬಾಗಿ ಬಂತು ಹರಗೋಲ
ಉತ್ತಮರ ಮಗಳು ನಾ ಅಂಬಿಗರಣ್ಣಾ
ಉತ್ತಮರ ಮಗಳು ನಾ ಅಂಬಿಗರಣ್ಣಾ
ಚಾಗಿಸೊ ಮುಂದಕ್ಕೆ ಹರಗೋಲ ||೧೨||

ಹೊಳೆಯ ದಾಟಿಸಲಾಕ ನನ್ನಿಚ್ಛಾ ನಿನ್ನಚ್ಛಾಯಿಲ್ಲ
ಅವ್ವ ಗಂಗವ್ವನ ಮನದಿಚ್ಛಾ
ಅವ್ವ ಗಂಗವ್ವನ ಮನದಿಚ್ಛಾ ಮೀರಿ
ನಾ ದಾಟಿಸಂಗಿಲ್ಲೆ ಹೊಳಿಯಾ ||೧೩||

ತವರವರು ಇಟ್ಟಾರ ಆರು ತೊಲಿ ಭಂಗಾರ
ಇದು ನೀ ತೊಗೊಂಡು ಅಂಬಿಗರಣ್ಣಾ
ಇದು ನೀ ತೊಗೊಂಡು ಅಂಬಿಗರಣ್ಣಾ
ಹೊಳೆಯನು ದಾಟಿಸೊ ಅಂಬಿಗಾರಣ್ಣಾ ||೧೪||

ಹೊಳೆಯ ದಾಟಿಸಲಾಕ ನನ್ನಿಚ್ಛಾ ನಿನ್ನಿಚ್ಛಾಯಿಲ್ಲ
ತಾಯಿ ಗಂಗಮ್ಮನ ಮನದಿಚ್ಛಾ
ತಾಯಿ ಗಂಗಮ್ಮನ ಮನದಿಚ್ಛಾ ಬಿಟ್ಟು
ನಾ ದಾಟಿಸಂಗಿಲ್ಲ ಹೊಳಿಯಾ ||೧೫||

ಅತ್ತೆ ಮಾಂವ ಇಟ್ಟಾರ ಹತ್ತು ತೊಲಿ ಭಂಗಾರ
ಇದು ನೀ ತೊಗೊಂಡು ಅಂಬಿಗಾರಣ್ಣ
ಇನ್ನಾರ ದಾಟಿಸೊ ಹೊಳೆಯ ಅಂಬಿಗಾರಣ್ಣ
ಚಾಗಿಸೊ ಮುಂದಕ್ಕೆ ಹರಗೋಲ ||೧೬||

ಹೊಳೆಯ ದಾಟಿಸಲಾಕ ನನ್ನಿಚ್ಛಾ ನಿನ್ನಿಚ್ಛಾಯಿಲ್ಲ
ತಾಯ ಗಂಗಮ್ಮನ ಮನದಿಚ್ಛಾ
ತಾಯಿ ಗಂಗಮ್ಮನ ಮನದಿಚ್ಛಾ ಮೀರಿ
ನಾ ಚಾಗಸಂಗಿಲ್ಲೆ ಹರಗೋಲ ಎಲೆ ಹೆಣ್ಣೆ ||೧೭||

ಹಸಿಯ ತೆಂಗಿನ ಕಾಯಿ ಅದಕ ಮುತ್ತಿನ ಹಾರ
ಇದ್ದಾದ್ರು ತೊಗೊಂಡು ದಾಟಿಸೋ ಅಂಬಿಗಾರಣ್ಣಾ
ಇದ್ದಾದ್ರು ತೊಗೊಂಡು ದಾಟಿಸೊ ಅಂಬಿಗಾರಣ್ಣ
ಪೂಜಿಸಿ ನಡಿಸೋ ಹರಗೋಲಾ ||೧೮||

ಹೊಳೆಯಾ ದಾಟಿಸಲಾಕ ನನ್ನಿಚ್ಛಾ ನಿನ್ನಿಚ್ಛಾ
ತಾಯಿ ಗಂಗಮನ ಮನದಿಚ್ಛಾ
ತಾಯಿ ಗಂಗಮನ ಮನದಿಚ್ಛಾ ಮೀರಿ

ನಾ ನಡಸಂಗಿಲ್ಲ ಮುಂದ
ಹರಗೋಲ ಹೊಯ್ಯಾಲದ್ದೆಣ್ಣಾ ||೧೯||

ಇಷ್ಟು ಒಡವಿಗೋಳು ಪಟ್ಟೋಳಿ ಸೆರಗಿನ್ಯಾಗ ಕಟ್ಟಿ
ಸಿಟ್ಟೀಲಿ ಹೊಳಿಯಾ ಧುಮುಕ್ಯಾಳೊ ಅಂಬಿಗಾರಣ್ಣಾ
ಸಿಟ್ಟೀಲಿ ಹೊಳಿಯ ಧುಮುಕ್ಯಾಳೊ ಅಂಬಿಗಾರಣ್ಣಾ
ತುಂಬಿಸೊ ಗೋಲ ಹರಗೋಲಾ ||೨೦||

ನಾರಿ ಮುಣಗೆದಲ್ಲಿ ನಾಕುಬಾರಿ ಮುಣಗದ್ದ
ನಾರಿ ನಿನ್ ಸೆರಗ ಸಿಗಲಿಲ್ಲ
ನಾರಿ ನಿನ್ ಸೆರಗ ಸಿಗಲಿಲ್ಲ ಅಂಬಿಗಾರಣ್ಣ
ತುಂಬಿಸೊ ಗೋಲ ಹರಗೋಲ ||೨೧||

ಮಿತ್ರಿ ಮುಣಗಿದಲ್ಲಿ ಮುವತ್ತಬಾರಿ ಮುಣಗೆದ್ದ
ಕಾಲುಂಗುರ ಬೆರಳ ಸಿಗಲಿಲ್ಲ
ಕಾಲುಂಗರ ಬೆರಳ ಸಿಗಲಿಲ್ಲೆ ಅಂಬಿಗಾರಣ್ಣ
ತುಂಬಿಸೋ ಗೋಲ ಹರಗೋಲ ||೨೨||

ಇದರಲ್ಲಿ ಹೊಳೆಯನ್ನು ದಾಟಿಸುವ ಅಂಬಿಗಾರನ ವೃತ್ತಿಯನ್ನು ಕಾಣುವುದಲ್ಲದೆ ಅಂಬಿಗಾರನು ಗಂಗಮ್ಮನ ಮೇಲೆ ಇಟ್ಟಿರುವ ಭಕ್ತಿಯನ್ನು ವ್ಯಕ್ತವಾಗುತ್ತದೆ. ಹೊಳೆಯನ್ನು ದಾಟಿಸಬೇಕಾದರೆ ನನ್ನ ನಿನ್ನ ಇಚ್ಛೆಯಿದ್ದರೆ ಸಾಲದು. ತಾಯಿ ಗಂಗಮ್ಮ ಮನಸ್ಸು ಕೂಡ ಬೇಕಾಗುತ್ತದೆ. ಆದುದರಿಂದ ಆಕೆ ಮುನಿದರೆ ಡೋಣಿ ಮುಳುಗುವ ಸಂಭವ ಇರುವುದು. ಆದ್ದರಿಂದ ನಾನು ದಾಟಿಸುವುದಿಲ್ಲವೆಂದು ಹೇಳುವನು. ಅದಕ್ಕೆ ಎಣ್ಣೆಬದನೆಕಾಯಿ, ಮೊಸರನ್ನ, ಉಪ್ಪಿನಕಾಯಿ, ಹೋಳಿಗೆ ಮೊದಲಾದ ರೀತಿಯ ಆಹಾರ ತಂದಿರುವೆ ಅದನ್ನು ಊಟ ಮಾಡಿ ಹೊಳೆಯನ್ನು ದಾಟಿಸೆಂದು ಕೇಳುವಳು. ಹೊಳೆಯನ್ನು ದಾಟಬೇಕಾದರೆ ಮಾವಿನ ಬನ, ತೆಂಗಿನ ಬನ, ನಿಂಬಿಯ ಬನ ಇವುಗಳನ್ನು ದಾಟಿ ಹೋಗುತ್ತಿದ್ದಾಗ ಆತನ ಮನಸ್ಸು ತನ್ನ ಮೇಲಾಗಿದೆಂದು ತಿಳಿದು ಆಕೆ ತನ್ನ ಒಡವೆಗಳನ್ನು ತೆಗೆದುಕೊಂಡು ಸುರಕ್ಷಿತವಾಗಿ ದಡ ತಲುಪಿಸಲು ಕೇಳಿಕೊಳ್ಳುವಳು. ಅದಕ್ಕೆ ಆತನು ಒಪ್ಪದಿದ್ದಾಗ ಆಕೆ ತನ್ನ ಒಡವೆಗಳನ್ನು ಸೆರಗಿನಲ್ಲಿ ಸುತ್ತಿಕೊಂಡು ಹೊಳೆಯಲ್ಲಿ ಧುಮಕುವಳು. ಅದನ್ನು ಕಂಡ ಅಂಬಿಗಾರ ಆಕೆಯನ್ನು ನೀರಿನಿಂದ ಹೊರ ತರಲು ನೀರಿಗೆ ಹಾರುವನು. ಆಕೆಯ ಸೆರಗು ಆತನ ಕೈಗೆ ಸಿಗುವುದಿಲ್ಲ. ಇಲ್ಲಿ ಆಕೆಯ ಪಾತಿವ್ರತೀತನ, ಮುತ್ತೈದಿತನವನ್ನು ಈ ಹಾಡಿನಲ್ಲಿ ವ್ಯಕ್ತವಾಗುವುದು.

## ೧.೨. ಸಮುದ್ರದ ಹಾಡು

೧. ಭಾಗ್ಯ ಬಂತಂತ್ಹೇಳಿ ಭಾಳ ನೀನುರಿಬೇಡ
ಈ ಭಾಗ್ಯ ನಿನಗೆ ಸ್ಥಿರವಲ್ಲ/ಸಮುದ್ರದ
ಭರತ ಬಂದಿಳತ ಇಳಿದಂಗೆ

೨. ಕಡಿಯಕ್ಕಿ ಕೊಳ್ ಚಂದ ಕಡದಾ ಮಜ್ಜಿಗೆ ಚಂದ

ಕಡೆಯೊಳಗೆ ಬರುವ ತರಿ ಚಂದ ಬಾಲಮ್ಮ
ನೀ ಚಂದಾ ನಿನ್ನ ದೊರೆ ಚಂದ

೩. ಹಾಲಂತ ಗಂಗಮನೆ ಹರಿದೋಡಿ ಬರುವಾಗ
ಹಾಲನ್ನು ಗೋರಿದರೆ ಹಲವಾರು | ಈ ಊರ
ನೀರ ಸಾಧನೆಯ ಅರಿಯರು

೪. ನಾ ತೂಗೂ ತೊಟ್ಟಿಲಿಗೆ ನಾಗಬೆತ್ತದ ನೇಣು
ನಾ ತೂಗಿ ಕಡಲ ತರೆತೂಗಿ | ಗೋಪಾಡಿ
ಅಮ್ಮ ತೂಗಿದಳು ಬನದಲ್ಲಿ

೫. ಏಳು ಸಂದ್ರದ ತುದಿಯಲ್ಲಿ ಕೀಳುಸಂದ್ರದ ಬುಡದಲ್ಲಿ
ಹ್ಯಾಗಿದ್ರ ಬಬ್ಬರ್ಯ ಹಿಮದಲ್ಲಿ | ಚಳಿಯಲ್ಲಿ
ಏಳು ಬಾಗಿಲ ಬೀಗ ಗಜಗಟ್ಟಿ

೬. ಬೊಬ್ಬರಿಯ ದೇವರಿಗೂ ಇಬ್ಬರು ಹೆಂಡರು
ಸಿಬ್ಬಲ ಮುಡಿ ಸಿರಿಮುಡಿ/ಬಬ್ಬರ ದೇವರು
ಇಬ್ಬರನಾ ಒಂದೂರಿಗೆ ಕಳುವ್ಯಾರು

೭. ಬೊಬ್ಬರಿಯ ದೇವರಿಗೆ ಇಬ್ಬರು ಹೆಂಡಿರು
ಇಬ್ಬರಿಗೂ ಹೊನ್ನ ಉಡುದಾರ | ಬಬ್ಬರ ದೇವರು
ಒಬ್ಬರನು ಒಂದೂರಿಗೆ ಕಳುವ್ಯಾರು

೮. ನೆಲಿಯ ಬಲ್ಲನೆಂದು ಬಲಿಯ ಬೀಸಲು ಬೇಡ
ನೆಲಿತಪ್ಪಿ ಬಲಿಯ ಬಳಕೊಟ್ಟ | ಅಣ್ಣಯ್ಯ
ದಿಕ್ತಪ್ಪಿ ದೇಶ ಬಿಡಬೇಡ (ವೆಂಕಟರಾಜ ಪುಣಿಂಚತ್ತಯ, ೧೯೯೩:೮೩-೮೪)

ಈ ಹಾಡಿನಲ್ಲಿ ಸಮುದ್ರವನ್ನು ಕಂಡ ರೀತಿಯೇ ಬೇರೆಯಾಗಿದೆ. ಹಣವಿದೆಯೆಂದು ವ್ಯಕ್ತಿಯಲ್ಲಿ ಅಹಂಕಾರ, ಬಿಗುವಿನಿಂದ ಇರುವುದು ಸರಿಯಲ್ಲ. ಅವರು ಸಿರಿತನವನ್ನು ಭಾಗ್ಯಕ್ಕೆ ಮತ್ತು ಬಡತನವನ್ನು ದಾರಿದ್ರ್ಯಕ್ಕೆ ಸಮುದ್ರದ ಏರಿಳಿತಗಳನ್ನು ಹೋಲಿಸಿದ್ದಾರೆ. ಕಡಿಯಕ್ಕಿ ಅನ್ನ, ಕಡೆದ ಮಜ್ಜಿಗೆ, ಕಡಲಿನ ಅಲೆಗಳು ಯಾವ ರೀತಿ ಸೋಗಸಾಗಿರುವುವೊ ಅದೇ ರೀತಿ ಬಾಲಮ್ಮ ಮತ್ತು ಆಕೆಯ ಗಂಡನಿಗೆ ಚಂದವೆಂದು ಹೇಳುತ್ತಾ ದಾಂಪತ್ಯ ಜೀವನವನ್ನು ಪ್ರಶಂಸಿಸಿದ್ದಾರೆ. ಕಡಲ ತೆರೆಯನ್ನು ಕಂಡರೆ ನಮಗೆಲ್ಲರಿಗೂ ಭಯವೆನಿಸುವುದು. ಆದರೆ ಬೆಸ್ತರಿ(ಟೋಕ್ರೆ ಕೋಳಿ)ಗೆ ಅದು ಭಯವಾಗಿ ಕಾಣುವುದಿಲ್ಲ.

ತೆರೆಗಿಂತ ಆಕರ್ಷಕವಾದುದು ನೊರೆ. ಕೆಲವರು ಹಾಲೆಂದು ಭ್ರಮಿಸಿ ಅದನ್ನು ತೆಗೆದುಕೊಳ್ಳಲು ಹೋದರೆ ಅಲ್ಲೇನಿರುವುದು ನೀರು ಗುರುಳೆ. ಬಹಳಷ್ಟು ಜನರು ನೀರಿನ ಮಹತ್ವ ಅರಿತಿರಲು ಸಾಧ್ಯವಿಲ್ಲ. ನೀರಿನೊಡನೆ ನಿಕಟ ಸಂಬಂಧ ಹೊಂದಿರುವ ಟೋಕ್ರೆಯವರಿಗೆ ಇದರ ನೆಲೆಯ ಅರಿವಿರುವುದು.

ಬೊಬ್ಬರಿಯ ಎಂಬುವನು ಕಡಲಿನ ದೇವರು. ಇವನು ಸದಾ ಕಡಲಿನಲ್ಲೇ ಇರುವವ. ಈತ ಚಳಿಯಲ್ಲಿ ಹೇಗಿರಬಹುದು? ಆತ ಹಾಗೆಯೇ ಇರಲು ಸಾಧ್ಯವಿಲ್ಲ. ಸಮುದ್ರದಲ್ಲಿಯ ಏಳು ಬಾಗಿಲು ಹಾಕಿ ಬೀಗ ಜಡಿದು ಅದರೊಳಗೆ ಅವಿತುಕೊಂಡಿರವನೆಂದು ಗರತಿಯ ಊಹೆಯಾಗಿರಬೇಕು. ಈ ದೇವರಿಗೆ ಇಬ್ಬರು ಹೆಂಡರಿರುವರು.

ಇಬ್ಬರಿಗೂ ಸೌಂದರ್ಯದಲ್ಲಿ ಭಿನ್ನತೆಯಿದೆ. ಸದಾ ಜಗಳ. ಆದ್ದರಿಂದ ಇಬ್ಬರನ್ನು ಒಂದೇ ಊರಿಗೆ ಕಳುಹಿಸಲು ಸಾಧ್ಯವಿಲ್ಲ. ಈ ಇಬ್ಬರಲ್ಲಿಯ ಅಸಮಾನತೆಯನ್ನು ಹೋಗಲಾಡಿಸಲು ಬಂಗಾರದ ಉಡುದಾರ ಮಾಡಿಸಿದರಂತೆ. ಈ ಉಡುದಾರವೇ ಮುಂದಿನ ಜಗಳಕ್ಕೆ ಕಾರಣವಾಗುವುದು. ನೀರಿನ ನೆಲೆಯನ್ನು ಅರಿತಿಕೊಂಡೆನೆಂದು ಬಲೆಯನ್ನು ಹಾಕಲು ಹೋಗಬೇಡ ಒಂದು ವೇಳೆ ನೆಲೆ ತಪ್ಪಿದರೆ, ಜೀವನದಲ್ಲಿ ದಿಕ್ಕೂ ತೋಚದೆ ದೇಶ ಬಿಡುವಂಥ ಸಂದರ್ಭ ಒದಗುವುದೆಂದು ಹೇಳಲಾಗಿದೆ. ಇಲ್ಲಿ ನೀರಿನ ಮಹತ್ವವನ್ನು ಅರಿತುಕೊಂಡವರು ಟೋಕ್ರೆಯವರೆ ಹೊರತು ಬೇರೆಯವರಲ್ಲ ಎಂಬುದು ಈ ಹಾಡಿನಿಂದ ತಿಳಿದು ಬರುತ್ತದೆ.

ಒಗಟು ನಿಗೂಢ ಅರ್ಥದಿಂದ ಕೂಡಿರುತ್ತದೆ ಒಗಟುಗಳು ಹೇಳಿದಾಗ ಸರಾಗವಾಗಿ ಅರ್ಥವನ್ನು ಕಂಡುಕೊಳ್ಳಲು ಸಾಧ್ಯವಿಲ್ಲ ಟೋಕ್ರೆ ಕೋಳಿಯವರು ಒಗಟಿನ ರೂಪದ ಹಾಡಗಳನ್ನು ಹೇಳುವರು. ಅದು ಈ ಕೆಳಗಿನಂತಿದೆ.

೧ ಸುತ್ತಲು ಸಮುದ್ರ ನಡುವೆ . ನೀರುಳಿ ಮರ
ಹೂವಾದರೇನೆ ಫಲವಿಲ್ಲ ದೊಂಬರ ಚೆನ್ನಿ
ಚೆಲುವಿದ್ದರೇನು ಕುಲವಿಲ್ಲ.
೨. ನೀರಿಲ್ಲದ ಕೆರೆಯಲ್ಲಿ ಬೇರಿಲ್ಲದ ಗಿಡ ಹುಟ್ಟಿ
ಉಗುರಿಲ್ಲದ ಹೂಗಳು ಕೊಯ್ದಾಳು/ಗಂಗಮ್ಮ
ಬಳ್ಳಿಲದ ಹೂವ ಸುರಹಾಳು.

ನೊರೆಯ ಕುರಿತು ಮೊದಲನೆಯದರಲ್ಲಿ ಒಗಟಿನ ರೂಪದಲ್ಲಿ ಚಿಕ್ಕ ಪದ್ಯ ಹೇಳಲಾಗಿದೆ. ಎರಡನೆಯದರಲ್ಲಿ, ಆ ನೊರೆಯನ್ನು ಬೇರಿಲ್ಲದ ಗಿಡದಲ್ಲಿ ಹುಟ್ಟಿದ ಬಿಳಿಯ ಹೂಮಾಲೆಯೆಂದು, ಗಂಗಮ್ಮ ಜಡೆ ಇಲ್ಲದೇನೇ ಇಳಿ ಬಿಟ್ಟ ಹೂಮಳೆಯೆಂದು ವರ್ಣಿಸಲಾಗಿದೆ.

**೧.೩. ವಾಲೀಕಾರನ ಹಾಡು**

ವಾಲೀಕಾರ ನಿನಗೆ ಒಳ್ಳೆ ಹೆಂಡತಿ ಯಾಕೊ
ನೀ ಹೋದಿ ರಾಜ್ಯ ತಿರುಗೂತ ನಿನ ನಾರಿ
ಬಾಡ್ಯಾಳೊ ಬಾಳಿ ಸುಳಿಯಾಗಿ. ||೧|| (ಚನ್ನಮಲ್ಲಪ್ಪ,ಹಲಸಂಗಿ:೧೯೯೦:೧೦೮)

ಊರ ಮುಂದಿನ ಗಂಗಿ ವಾಲಿಕಾರನ ತಂಗಿ
ಏನ್ ಬೇಡ್ಯಾಳ ಚದುರಂಗಿ ಸಾಹುಕಾರನ
ತೊಳ ಬೇಡ್ಯಾಳು ತಲೆಗುಂಬ. ||೨|| (ಚನ್ನಣ್ಣ,ವಾಲೀಕಾರ:೨೦೦೦:೩೭೮)

ವಾಲೀಕಾರರು ಸಂಪರ್ಕ ಸಾಧನಗಳಿಲ್ಲದ ಸಂದರ್ಭದಲ್ಲಿ ಒಂದು ಕಡೆಯಿಂದ ಇನ್ನೊಂದೆ ಕಡೆಗೆ ಹೋಗಿ ಜನರಿಗೆ ಸುದ್ದಿ ತಲುಪಿಸುತ್ತಿದ್ದರು. ಹಲವಾರು ಸಂದರ್ಭದಲ್ಲಿ ವಾಲೀಕಾರರು ದೇಶ ತಿರುಗತ್ತ ಒಂದೇ ಕಡೆ ಉಳಿದುಕೊಳ್ಳದೆ ಮನೆಯಲ್ಲಿ ಇರದ ಸಂದರ್ಭಗಳೇ ಹೆಚ್ಚು ಇರುವುದರಿಂದ ಜನರು ಆತನಿಗೆ ಒಳ್ಳೆಯ ಹೆಂಡತಿಯಿದ್ದರೆ ಆಕೆ ಕಾಮತೃಷೆಯಿಂದ ಬಾಳೆ ಸುಳಿಯಂತೆ ಬಾಡಿ ಹೋಗಬೇಕಾಗುತ್ತದೆ. ಪ್ರಾಚೀನ ಕಾಲದಲ್ಲಿ ವಾಲೀಕಾರನ ವೃತ್ತಿಯು ಯಾವ ರೀತಿಯಲ್ಲಿ ಇತ್ತು ಹಾಗೆ ಆತನಿಗೆ ಒಳ್ಳೆಯ ಹೆಂಡತಿ ಯಾಕೆ ಬೇಕು? ಎಂದು ಉನ್ನತ ವರ್ಗದ ಜನರು ಆತನ ಬಗ್ಗೆ ಇರುವ ಕೀಳರಿಮೆಯನ್ನು ಕಾಣಬಹುದು. ಅಲ್ಲದೆ ವಾಲೀಕಾರತನದಿಂದ

ದೇಶ ತಿರುಗತ್ತ ನೀ ಹೋಗುವೆ ಆಕೆಯ ಮನದ ಆಶೆಯನ್ನು ಈಡೆರದೇ ಬೇರೆಯವರ ಕಡೆ ಮನವಲಿಸುವಳೆಂದು ಹೇಳಲಾಗಿದೆ. ಈ ಬುಡಕಟ್ಟಿನ ಜನರ ಸ್ಥಿತಿಗತಿ ಹಾಗೂ ಬಡತನಕ್ಕೆ, ಹಸಿವಿಗೆ, ಅಪಚಾರ, ಅತ್ಯಾಚಾರಗಳಿಗೆ ಬಲಿಯಾಗಿದ್ದಾರೆಂಬುದನ್ನು ಈ ಒಂದು ನುಡಿಯಿಂದ ತಿಳಿದು ಬರುವುದು. ಸುಂದರವಾದ ಈ ಸಮುದಾಯದ ಸ್ತ್ರೀಯವರು ಸಾಹುಕಾರರ ಭೋಗದ ವಸ್ತುವಾಗಬೇಕಾಗಿತ್ತು. ಅವರು ಹೇಳಿದನ್ನು ಕೇಳಿಕೊಂಡು ಅವರ ಕೊಡುವ ಹಣದ ಆಶೆಯಿಂದ ತಮ್ಮ ಜೀವನವು ಅವರಿಗಾಗಿ ಮೀಸಲಿಡಬೇಕಾಗಿತ್ತು. ತಮ್ಮ ಮೈ ಮನಸ್ಸುಗಳು ಸಾಹುಕಾರರಿಗೆ ಮಾರಿಕೊಳ್ಳುತ್ತಿದ್ದರು ಎಂಬುದನ್ನು ಈ ನುಡಿಯಿಂದ ತಿಳಿದು ಬರುವುದು. ಊರಲ್ಲಿರುವ ವಾಲೀಕಾರನ ತಂಗಿ ಕೂಡ ಸಾಹುಕಾರನ ತೋಳನ್ನೆ ಅಪೇಕ್ಷಿಸಿದಳೆಂದು ಹೇಳಲಾಗಿದೆ. ಇಲ್ಲಿ ವಾಲೀಕಾರರು ಸುಂದರ ಸ್ತ್ರೀಯರನ್ನು ಹೊಂದಕೂಡದೆಂದು ಮತ್ತು ತಮ್ಮ ಸ್ತ್ರೀಯರನ್ನು ಶ್ರೀಮಂತರ ಭೋಗದ ವಸ್ತುಗಳು ಎಂಬುದನ್ನು ಚಿತ್ರಿಸಲಾಗಿದೆ.

## ೨. ಭೂಲಾಯಿ ಹಾಡುಗಳು

ಶ್ರಾವಣಮಾಸ ಪ್ರಾರಂಭವಾದ ಐದನೇ ದಿವಸಕ್ಕೆ ಪಂಚಮಿ ಹಬ್ಬ ಆಚರಿಸುವರು. ಹಬ್ಬಕ್ಕೆ ಸಿಹಿ ಅಡುಗೆಮಾಡಿ ನಾಗಣ್ಣನಿಗೆ ನೈವಿದ್ಯ ತೋರಿ ಹಾಲೆರೆಯುವರು. ಇದನ್ನು ಹೆಣ್ಣು ಮಕ್ಕಳ ಹಬ್ಬವೆಂದು ಕರೆಯುವರು. ಹೆಣ್ಣು ಮಕ್ಕಳು ಹೊಸ ಬಟ್ಟೆಯನ್ನು ತೊಟ್ಟುಕೊಂಡು ಓಣಿಯ ಹೆಣ್ಣು ಮಕ್ಕಳು ಒಂದು ಕಡೆ ಸೇರಿ ಭೂಲಾಯಿ ಹಾಕುವರು. ಭೂಲಾಯಿ ಹಾಕುವ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಒಬ್ಬರ ಕೈ ಇನ್ನೊಬ್ಬರು ಹಿಡಿದುಕೊಂಡು ಹಾಡು ಹೇಳುತ್ತಾ ಗೋಲಾಕರದಲ್ಲಿ ತಿರುಗುವರು. ಮೊದಲು ಹಾಡು ಹೇಳುವ ಇಬ್ಬರು ಹೆಣ್ಣು ಮಕ್ಕಳು ಸ್ವಲ್ಪ ಬಾಗಿ ಕೈ ಅಲುಗಾಡಿಸುತ್ತ ಹಾಡು ಹೇಳುವರು ಆ ಹಾಡುಗಳು ಈ ಕೆಳಗಿನಂತಿರುವವು.

### ೨.೧. ಬರದ ಹಾಡು

ಆರ ತಿಂಗಳ ಮಳಿ ಹೊಯಿತು ಮೂರು ತಿಂಗಳ ಬರS ಬಂತೆS| ಕೋಲು ಕೋಲೆಣ್ಣಾ ಕೋಲೆ.
ಕಲ್ಲಶೆಟ್ಟಿ ಮಲ್ಲಶೆಟ್ಟಿ ಅವರಿಬ್ಬರ ಅಣ್ಣಾ ತಮ್ಮರೆ |ಕೋ
ಅಣ್ಣಾಗಾದರ ಮಕ್ಕಳಿಲ್ಲ ತಮ್ಮಗಾದರS ಮಕ್ಕಳಾವೆS |ಕೋ
ತಮ್ಮ ಹೊಲ ಬೆಳೆನಿಲ್ಲ ಅಣ್ಣನ ಹೊಲ ಬೇಳೆದಾವೆS |ಕೋ
ಅಣ್ಣಾ ನನ್ನ ಕಲ್ಲಶೆಟ್ಟಿ ಒಮ್ಮನ ಜ್ವಾಳ ಕಡೆ ಕೊಡ್ಯಂದೆ |ಕೋ
ಒಮ್ಮನ ಜ್ವಾಳ ಕಡೆಕೊಡಂದ ಮಾಳದ ಹೊಲಕ ನಟ್ಟ ಹೊಡಿನಂದಾ |ಕೋ
ಒಮ್ಮನ ಜ್ವಾಳ ತಂದಾನ ಮರದಾಗS ಬರಕ್ಯಾನೆS |ಕೋ
ಸಲಕಿ ಗುದ್ದಳಿ ತಕೊಂಡಾನ ಮಾಳದ ಹೊಲಕ ಹೋಗ್ಯಾನ |ಕೋ
ಆರಣ ಜ್ವಾಳ ನುಚ್ಚಡಿಬೇಕS ಆರಣ ಜ್ವಾಳ ಬೀಸಬೇಕS |ಕೋ
ಆರಣ ಜ್ವಾಳ ನುಚ್ಚೋಡಿದಾರ ಆರಣ ಜ್ವಾಳ ಬೀಸಿದಾರS |ಕೋ
ಆರಣ ಜ್ವಾಳ ನುಚ್ಚೋಡಿದಾರೆ ಒಲೆಮ್ಯಾಲ ಹಾಕ್ಯಾರೆS |ಕೋ
ಕುದಿಲಾಕ ಇಟ್ಟಾಳS ನೀರಿಗಾದರ ಹೋಗ್ಯಾಳೆS |ಕೋ

ನೆರಮನಿ ನೆಗೆಯಣ್ಣೆ ಬೆಂಕಿಗಾದರ ಬಂದಳಲ್ಲ |ಕೋ
ಬೆಂಕಿಗಾದರ ಬಂದಿದಾಳೆ ತಮ್ಮ ಜ್ವಾಳ ಗುರುತಿಡಿದಿದಾಳೆ |ಕೋ
ತಮ್ಮ ಜ್ವಾಳ ಖಿನ ಹಿಡಿದ್ಯಾಳೆ ನುಚ್ಚಿನ ಗಡಗ್ಯಾಗ ಕಲ್ಲ ಹಾಕ್ಯಾಳೆ |ಕೋ
ನುಚ್ಚಿನ ಗಡಗ್ಯಾಗ ಕಲ್ಲ ಹಾಕ್ಯಾಳೆ ಇದ್ದಷ್ಟು ಹಿಟ್ಟಿನಾಗ ಬೂದ್ಯಾಕ್ಯಾಳೇ |ಕೋ
ಬೂದ್ಯಾರ ಹಾಕ್ಯಾಳೆ ಬೆಂಕಿ ತಗೊಂಡ ಹೋಗ್ಯಾಳೆ |ಕೋ
ನೀರಿಂದ ಬಂದಾಳ ಕೊಡನಾದರ ಇಳವ್ಯಾಳೆ |ಕೋ
ಕೊಡನಾದರ ಇಳವ್ಯಾಳೆ ಎದಿ ಎದಿ ಬಡಕೊಂಡಾಳೆ |ಕೋ
ಆಡುವ ಮಕ್ಕಳ ಬಂದು ಅದೇ ನುಚ್ಚ ನೆಕ್ಕಿದಾವೆ |ಕೋ
ದೇಶಕ್ಕೆ ಇಲ್ಲದ ಬರ ನಮ್ಮ ಸುತ್ತೆ ಬಂತೋ ಶಿವನೆ |ಕೋ
ದೇಶಕ್ಕೆ ಇಲ್ಲದ ಬರ ಮಕ್ಕಳ ಸುತ್ತೆ ಬಂತೆ ಶಿವನೆ |ಕೋ
ಒಂದ ಗುದುಳಿ ಹೊಡಿತಾನ ಮನಿಕಡಿ ನೋಡುತಾನ |ಕೋ
ಕಾಮಣ್ಣ ಭೀಮಣ್ಣ ತಂದಿ ಕರಿಯಲಿ ನಡದಾರೆ |ಕೋ
ಕಾಮಣ್ಣ ಹೊಂಟಾನೆ ರೊಟ್ಟಿ ತಕೊಂಡ ಹೊಂಟಾನೆ |ಕೋ
ಎಲ್ಲೋಯಪ್ಪ ಎಲ್ಲೋಯಪ್ಪ ಅಲ್ಲಿಯೂತರದ ರೊಟ್ಟಿಯಪ್ಪ |ಕೋ
ನೆರಮನಿ ನೆಗೆಣೆವ್ವ ನುಚ್ಚಿನ ಗಡಗ್ಯಾಗ ಕಲ್ಲಹಾಕ್ಯಾಳೆ |ಕೋ
ಕಲ್ಲರ ಹಾಕ್ಯಾಳ ಬೆಂಕಿ ತಗೊಂಡ ಹೋಗ್ಯಾಳೆ |ಕೋ
ದೇಶಕ್ಕೆ ಇಲ್ಲದ ಬರ ನಮ್ಮ ಸುತ್ತೆ ಬಂತೆ ಶಿವನೆ |ಕೋ
ದೇಶಕ್ಕೆ ಇಲ್ಲದ ಬರ ಮಕ್ಕಳ ಸುತ್ತೆ ಬಂತೆ ಶಿವನೆ
ಸಲಿಕಿ ಗುದ್ದಳಿ ತಗೊಂಡಾನೆ ಮನಿಗಾರ ಬಂದಾನೆ |ಕೋ
ಸಲಿಕಿ ಗುದ್ದಳಿ ತಗೊಂಡಾನ ದುಖಾನಕ ಹೋಗ್ಯಾನೆ |ಕೋ
ಸಲಿಕಿ ಗುದ್ದಳಿ ಇಟಗೊರೆಪ್ಪ ಅದ್ದನಕ್ಕಿ ಕೂಡರೆಪ್ಪ
ಅದ್ದನಕ್ಕಿ ಕೊಡಿರೆಪ್ಪ ದುಡ್ಡಿ ಇಸಾ ಎರಿರಪ್ಪಾ |ಕೋ
ಅದ್ದನಕ್ಕಿ ತಂದಾರ ಒಲಿಮ್ಯಾಲ ಹಾಕ್ಯಾರೆ |ಕೋ
ಕಾಮಣ್ಣಗ ಭೀಮಣ್ಣಗ ಒಂದೇ ಎಡಿ ಮಾಡಂದಾರೆ |ಕೋ
ರಾಮಣ್ಣಗ ಲಕ್ಷ್ಮಣಗ ಒಂದೇ ಎಡಿ ಮಾಡಂದಾರೆ |ಕೋ
ಚೋಳೆವ್ವಗ ಚಂಗಳೆವ್ವಗ ಒಂದೇ ಎಡಿ ಮಾಂಡಂದಾರೆ |ಕೋ
ನಿಂಬೆವ್ವಗ ನೀಲವ್ವಗ ಒಂದೇ ಎಡಿ ಮಾಡಂದಾರೆ |ಕೋ
ನಾಯಿ ಕುದರಿಗಿ ಒಂದೇ ಗೂಟಕ ಕಟ್ಟಿಂದಾರೆ
ಎಲ್ಲರ ಕುಂತಾರ ಭೋಜನ ಮಾಡ್ಯಾರೆ |ಕೋ
ಹೂವಿನ ಹಚ್ಚಡ ತಗೊಂಡ ನಡಮನ್ಯಾಗ ಹಾಸ್ಯಾರೆ |ಕೋ
ಮನ್ಯಾಗರ ಹಾಸ್ಯಾರೆ ತಟ್ಟಿ ಗುಳಿ ಎಳದಾರೆ |ಕೋ

ಕಾಮಣ್ಣಗ ಭೀಮಣ್ಣಗ ತನ್ನ ಬಲಕ ತಗೊಂಡಾನೆ |ಕೋ

ರಾಮಣ್ಣಗ ಲಕ್ಷ್ಮಣಗ ತನ್ನ ಎಡಕ ತಗೊಂಡಾನೆ |ಕೋ

ನೀಲವ್ವಗ ನಿಂಬೆವ್ವಗ ನಿನ್ನ ಬಲಕ ತಗೊಂದಾನೆ |ಕೋ

ಚೋಳೆವ್ವಗ ಚಂಗೆಳೆವ್ವಗ ನಿನ್ನ ಎಡಕ ತಗೊಂದಾನೆ |ಕೋ

ಸಟ್ಟನ ಸರಿರಾತ್ರಿ ಮಕ್ಕಳ ತಗಬಿಗಿ |ಕೋ

ಎಲೋಯಪ್ಪ ಎಲೋಯಪ್ಪ ನೀಡಿಕಿ ಆಗ್ಯಾವ್ಯೋ |ಕೋ

ಈಗ್ಯಾತರ ನೀರ ಮಕ್ಕಳೆ ಸುಮ್ಮನೆ ಮಲಕೊರಿ ಮಕ್ಕಳೇ |ಕೋ

ಚೋಳೆವ್ವ ಚಂಗಳೇವ್ವ ನೀಡಕಿ ಆಗ್ಯಾವಯಪ್ವ |ಕೋ

ಈಗ್ಯಾತರ ನೀರ ಮಕ್ಕಳೆ ಸುಮ್ಮನೆ ಮಲಕೊರಿ ಮಕ್ಕಳೇ |ಕೋ

ಸಟ್ಟನ ಸರಿರಾತ್ರಿ ಮಕ್ಕಳ ಮರುಗಳು ಜೀವ ಬಿಟ್ಟಾರ |ಕೋ

ಊರಾಗಿನ ತಮ್ಮ ಬಂದು ಅತ್ತ ಇತ್ತ ನೋಡುತ್ತಾನೆ |ಕೋ

ಹೊತ್ತೇರಿ ಒಂದಮಾರಾಯಿತು ಅಣ್ಣನ ಮಕ್ಕಳ ಸುಳವಿಲ್ಲ |ಕೋ

ಹೊತ್ತೇರಿ ಎರಡ ಮಾರಾಯಿತು ಅಣ್ಣನ ಮಡದಿದ ಸುಳವಿಲ್ಲ |ಕೋ

ಮನಿಗಾರ ಬಂದನೇ ಮಾಳಿಗ್ಯಾರ ಏರೆನೇ |ಕೋ

ಮಾಳಿಗ್ಯಾರರ ಏರ್ಯಾನೆ ಸೋನಿ ಬಾಗಿಲ ನೋಡ್ಯಾನ |ಕೋ

ಸೋನಿ ಬಾಗಿಲ ನೋಡ್ಯಾನೆ ಸಾಲ ಹೆಣ ಬಿದ್ದಾವೆ |ಕೋ

ಮಾಳಿಗಾದ್ರ ಇಳದಾನ ತಟ್ಟನಾದರ ಮುರದಾನ |ಕೋ

ತಟ್ಟನಾದರ ಮುರದಾನ ಒಡ್ಡರಿಗಿ ಕರಸ್ಯಾನೆ |ಕೋ

ಒಡ್ಡರಗಿ ಕರಸ್ಯಾನ ಸಾಲಕುಣಿ ಹೋಡಸ್ಯಾನೆ |ಕೋ

ಸಾಲಕುಣಿ ಹೊಡಸ್ಯಾನೆ ಮಣ್ಣರ ಮಾಡ್ಯಾನೆ |ಕೋ

ಮಣ್ಣರ ಮಾಡ್ಯಾನೆ ಮನಿಗಾದರ ಬಂದಾನ |ಕೋ

ನೀರಗಿ ಹೋದ ಹೆಣ್ಣುಮಕ್ಕಳು ಏನಂತ ಮಾತಾಡುತ್ತಾರೆ |ಕೋ

ನಿನ್ನರನೇ ಹೆಂಡತಿಯಿಂದ ಮಕ್ಕಳ ಮರಗುಳು ಜೀವ ಕೊಟ್ಟಾರೆ |ಕೋ

ಹಗ್ಗರ್‍ಯ ತಗೊಂಡನ ಫಾಸಿನಾದರ ಹಾಕೊಂಡಾನೆ |ಕೋ

ಊರಾಗಿನ ರೈತಬಂದು ಅವನ ಮಣ್ಣ ಮಾಡ್ಯಾನೆ |ಕೋ

ಈ ಹಾಡಿನಲ್ಲಿ ಬರದ ಪರಿಸ್ಥಿಯಿಂದ ಒಂದು ಕುಟುಂಬವೇ ನಾಶವಾಗಿದ್ದನ್ನು ಎತ್ತಿ ತೋರಿಸುತ್ತದೆ. ಕಲ್ಲಶೆಟ್ಟಿ, ಮಲ್ಲಶೆಟ್ಟಿ ಎಂಬ ಅಣ್ಣತಮ್ಮರು ಇರುತ್ತಾರೆ. ಅಣ್ಣ ಶ್ರೀಮಂತನಿರುವನು, ಆದರೆ ಮಕ್ಕಳಿರುವುದಿಲ್ಲ. ತಮ್ಮ ಬಡವನು ಆತನಿಗೆ ಮಕ್ಕಳಿವೆ. ಬರಗಾಲ ಬಂದಿದ್ದರಿಂದ ದಿನದ ಊಟಕ್ಕೆ ಗತಿಯಿಲ್ಲದೆ ಅಣ್ಣನ ಹತ್ತಿರ ಜೋಳವನ್ನು ಕಡ ತಂದು ಹೆಂಡತಿಗೆ ಕೊಟ್ಟು ಅಣ್ಣನ ಹೊಲಕ್ಕೆ ನಟ್ಟ ತೆಗೆಯಲು ಹೋಗುವನು. ಆದರೆ ನೆರಮನೆಯ ನೆಗೆಣಿ ಬಂದು ತಮ್ಮ ಜ್ವಾಳದ ಗುರುತು ಹಿಡಿದು ನುಚ್ಚಿನ ಗಡಿಯಲ್ಲಿ ಕಲ್ಲು ಹಾಕಿ ಹಿಟ್ಟಿನಲ್ಲಿ ಬೂದಿ ಕೂಡಿಸಿ ಹೋಗುವಳು. ನೀರಿನಿಂದ ಬಂದು ಆಕೆ ನೋಡುವಷ್ಟರಲ್ಲಿ ನುಚ್ಚೆಲ್ಲ ಚೆಲ್ಲಿರುತ್ತದೆ. ಹಸಿವೆ

ತಾಳಲಾರದೆ ಮಕ್ಕಳು ಅದೇ ನುಚ್ಚು ತಿನ್ನುವರು. 'ಆಡಾನೆ ಮಕ್ಕಳು ಬಂದು ಆ ನುಚ್ಚು ನೆಕ್ಕಿದಾವ' 'ಅದ್ದನಕ್ಕಿಯಲ್ಲಿ ವಿಷ ಬೇರಸಿ ಅನ್ನ ತಿಂದದ್ದು' ಇವೆಲ್ಲ ಬರಗಾಲದ ಪರಿಸ್ಥಿತಿಯನ್ನು ಎತ್ತಿ ತೋರಿಸುತ್ತದೆ. ಹೊಲದಲ್ಲಿ ಕೆಲಸ ಮಾಡಿ ಬಂದ ಮಕ್ಕಳ ತಂದೆಗೂ ಊಟಕ್ಕೆ ಇರಲಿಲ್ಲ. ಆದ್ದರಿಂದ ಕೆಲಸಕ್ಕೆ ಸಹಾಯಕವಾದ ಸಲಿಕೆ, ಗುದ್ದಲಿ ಇಟ್ಟು ಅಕ್ಕಿ ಮತ್ತು ವಿಷವನ್ನು ತಂದು ಬೇರೆಸಿದ ಅನ್ನವನ್ನು ಎಲ್ಲರೂ ಊಟ ಮಾಡಿ ತೀರಿಕೊಂಡರು. ಇದರಲ್ಲಿ ಬಡತನದ ಬವಣೆಯನ್ನು ಕಂಡು ಬರುವುದು.

**೨.೨. ಶಾಂವಕ್ಕಿ ಕುಟ್ಟಿಂದ್ರ**

ಶಾಂವ್ಯಕ್ಕಿ ಕುಟ್ಟಿಂದ್ರ ಶರ್ಯಗ್ಯಾಸಿ ಮನಗ್ಯಾಳ
ಎಬಸಣ್ಣಾ ನಿನ್ನ ಮಡದಿನ । ಕೋಲೆಣ್ಣಾ ಕೋಲ ||ಪಲ್ಲವಿ||
ಮಡದಿನ ಎಬಿಸಿದ್ರ ಅರನಿದ್ದಿ ಕಿರಿನಿದ್ದಿ
ಎರಡೊಬ್ಬಿ ಮಾಡಿ ತೆಗಿ ತಂಗಿ |ಕೋ
ಎರಡೊಬ್ಬಿ ಮಾಡಿದ್ರ ಬರಡಕ್ಕಿ ನಾಗ್ಯಾವೋ
ಎಬಸಣ್ಣಾ ನಿನ್ನ ಮಡದಿನ |ಕೋ
ಕುಟ್ಟಿದರ ಕುಟತಂಗಿ ಕಿಟಕ್ಯಿಟಿ ಹಚಬ್ಯಾಡಾ
ಬಂದ್ಯಾದಿ ಹಿಡಿದು ನಡಿ ತಂಗಿ |ಕೋ
ಎತ್ತಾರ ತಾರಣ್ಣಾ ಮುಟ್ಯಾರೆ ಬಿಗಿಯಣ್ಣಾ
ಹೊತೂಟ್ನೆ ನನ್ನ ಕಳವಣ್ಣಾ |ಕೋ
ಎತ್ತ್ಯ ನಮ್ಮಲ್ಲಿಲ್ಲ ಮುಟ್ಯ ನಮ್ಮಲಿಲ್ಲ
ಬಂದ್ಯ ಹಾದಿ ಹಿಡಿದು ನಡಿ ತಂಗಿ |ಕೋ
ತಂಗಿ ಹ್ಯಾದ ಮುರದೀನ ರಂಬೀಗಿ ಬ್ಯಾನಿ ಬಂದು
ಮನಿಯಾನ ಮಕ್ಕಳಿಗಿ ಉರಿ ಛೆಳಿ |ಕೋ
ಮೂರ ಸೇರ ಜ್ಯಾಳ ತಕ್ಕೊಂಡ ಮೂಲ್ಯಾಗ ಹಾಯಿಕೊಂಡು
ತ್ಯೊರಸಿ ನೋಡಲಿ ನಡದಾನ |ಕೋ
ತ್ಯೊರಸಿ ನೋಡಿದರ ದೇವರಿಲ್ಲ ದಿಂಡರಿಲಿಲ್ಲ,
ಮನಿ ಹೆಣ್ಣಾ ಮಗಳ ಉಸರಂದ್ಯ |ಕೋ
ಕುದುರ್ಯಾರ ತಂದನ ಜೀನರ ಬಿಗದನ
ತಂಗಿದ್ಯ ಊರಿಗಿ ನಡದಾನ್ಯ |ಕೋ
ಎಂದಿಲ್ಲದು ಅಣ್ಣರಾಯ ಇಂದ್ಯಾಕ ಬಂದಾನೆಂದು
ಕೂಡಲ್ಲಿ ಹಾಕ್ಯಾಳ್ಯ ಮಣೆಚೌಕಿ |ಕೋ
ಕೂಡಲ್ಲಿ ಬಂದಿಲ್ಲ ನಿಂದ್ರಲ್ಲಿ ಬಂದಿಲ್ಲ
ಬರಬೇಕ ತಂಗಿ ಮಗನ ಮದುವಿಗಿ |ಕೋ
ಹೆಂಡಿ ತಗೆವರಿಲ್ಲ ನೀರ ತರವರಿಲ್ಲ
ಹೇಗೆ ಬರಲಿ ಅಣ್ಣಾ ಮದವಿಗ್ಯ |ಕೋ
ಹೆಂಡಿ ತಗ್ಯಾವರಿಗಿ ಕೊಡುತ್ಯ ನೀರ ತರವರಿಗಿ ಕೊಡತ

ನಡಿ ತಂಗಿ ಮಗನ ಮದುವಿಗಿ |ಕೋ

ದನ ಕಾಯವರಿಲ್ಲ ರೊಟ್ಟಿ ಮಾಡವರಿಲ್ಲ
ಹ್ಯಾಂಗ ಬರಲೆಣ್ಣಽ ಮದವೀಗಿ |ಕೋ

ದನ ಕಾಯವರಿಗಿ ಕೂಡತ ರೊಟ್ಟಿ ಮಾಡವರಿಗಿ ಕೂಡುತ
ನಡಿ ತಂಗಿ ಮಗನ ಮದವಿಗಿ |ಕೋ

ಅಂಗಳ ಉಡುಗುವರಿಲ್ಲ ಗಂಗಳ ಬೆಳಗುವರಿಲ್ಲ
ಹ್ಯಾಂಗ ಬರಲೆಣ್ಣ ಮದವಿಗಿ |ಕೋ

ಅಂಗಳ ಉಡುಗುವರಿಗಿ ಕೊಡತ ಗಂಗಳ ಬೆಳವರಿಗಿ ಕೊಡತ
ಗಂಗಾದೇವಿಯೆಂಬ ಮಗಳ ಕೊಡತ್ಯಽ |ಕೋ

ಬ್ಯಾಸೀಗಿ ಬಿಸಲಣ್ಣ ಕೂಸೀನ ತಾಯಣ್ಣ
ಹ್ಯಾಂಗ ಬರಲೆಣ್ಣ ಮದವೀಗ್ಯಽ |ಕೋ

ಕೂಡಲಕ ಕುದರಿ ಕೂಡತ ಮ್ಯಾಲ ಛತ್ತರಿ ಹಿಡಿತ
ನಡಿ ತಂಗಿ ಮಗನ ಮದವೀಗಿ |ಕೋ

ಸಾವಿರ ರೂಪಾಯಿ ಕೊಟ್ಟು ಪಿತಾಂಬರ ತಂದಿದ್ದಽ
ಉಡುನಡಿ ತಂಗಿ ಸಭೆದಾಗ |ಕೋ

ಆ ಪಿತಾಂಬರ ಒಯ್ದು ನಿನ ಮಡದಿಗಿ ಉಡಸೋಗು
ಹಾಡ್ಯಾಳೊ ನಿನ್ನ ಹರ್‍ಯಸ್ಯಾಳೊ |ಕೋ

ಪನ್ನಸ ರೂಪಾಯಿಕೊಟ್ಟು ಕುಬ್ಬಸ ತಂದೀದ
ತೊಡನಡಿ ತಂಗಿ ಸಭೆದಾಗ |ಕೋ

ಆ ಕುಬ್ಬಸನೊಯ್ದು ಮಡದೀಗಿ ತೊಡಿಸಣ್ಣ
ಹಾಡ್ಯಾಳೊ ನಿನ್ನ ಹರಽಸ್ಯಾಳ್ಯೊಽ |ಕೋ

ಹಾಡಿಯ್ಯಾಳ್ಯಽ ನಿನ್ನ ಹರಸ್ಯಾಳ ಆ ಊರಾಗ
ಬಾರಣ್ಣನೆಂದು ಕರದ್ಯಾಳ |ಕೋ

ನನ ಮುಂದ ಹುಟ್ಟೀದಿ ನನ ಮುಂದ ಬೆಳದೀದಿ
ಇಟ್ಟ ಮಾತೆಲ್ಲಿ ಕಲತೆವ್ವಾಽ |ಕೋ

ಅಡವ್ಯಾಗ ಹುಟ್ಟಿದ್ಯಽ ಅಡವ್ಯಾಗ ಬೆಳದೀದಽ
ಎಲಿಗೊಂದ ಮಾತ ಕಲತೀನ್ಯಽ |ಕೋ

ಹುಟ್ಟಿದ ಮಲ್ಲಿಗಿಡ ಹುಟ್ಟಿದಂಗ ಇರೊದಿಲ್ಲ
ದಿನಽಕೊಂದು ಪರಿಯ ಚಿಗುವುದ್ಯಽ |ಕೋ

ದಿನಽಕೊಂದು ಪರಿಯ ಚಿಗವೂ ಮಲ್ಲಿಗಿ ಹೂವ
ಮತ್ತೊಬ್ಬ ಜಾಣ ಮುಡಿಯೋದ್ಯಽ |ಕೋ.

'ನಡಿಯ ಮನೆಗೆ ನಾದಿನಿ ಮೂಲ' ಎನ್ನುವ ಗಾದೆಯಂತೆ ಈ ಹಾಡಿನಲ್ಲಿ ಸೊಗಸಾದ, ಸಂತೋಷದ ಸಂಸಾರದಲ್ಲಿ ನಾದಿನಿಯು ಮುಳ್ಳುವಾಗುವಳು. ಅಲ್ಲದೆ ಕರೆಯಲು ಹೋದರೂ ಬರದೇ ಹಲವಾರು

ಸಮಸ್ಯೆಗಳನ್ನು ಎದುರಿಡುವಳು. ಇವೆಲ್ಲ ಸಮಸ್ಯೆಗಳಿಗೆ ಪರಿಹಾರ ನೀಡಿ ಕರೆತಂದರು ಅಣ್ಣನ ಮಾತಿಗೆ ಬೆಲೆಕೊಡದೆ ಸೀರೆ, ಕುಪ್ಪಸ ಉಡಲಾರದೇ 'ಆ ಸೀರೆ ಒಯ್ದು ನಿನ್ನ ಮಡದಿಗಿ ಉಡಿಸಿದರ ಹಾಡ್ಯಾಳೋ ನಿನ್ನ ಹರಸ್ಯಾಳೋ' ನಿನ್ನ ಹೆಂಡತಿಗೆ ಉಡಿಸೆಂದು ಹೇಳುವಳು. ಆಕೆ ನಿನಗೆ ಹರಕೆ ಕೊಡುವಳು ಎಂದು ವ್ಯಂಗ ರೀತಿಯಲ್ಲಿ ಹೇಳುವ ವಿವರ ಇಲ್ಲಿ ವ್ಯಕ್ತವಾಗುವುದು.

### ೨.೩. ಗಂಗೀ ಗೌರೀ ಹಾಡು

ಗಂಗಿನ ತರಬೇಕಂತ ನಂದಿನ ಶೃಂಗಾರ ಮಾಡಿ
ಕೊಂಬಣಸ ಕೊರಳ ಹುಲಗೆಜ್ಜಿ |ಕೋಲ
ಕೊಂಬ್ಯಣಸ ಕೊರಳ ಹುಲಗೆಜ್ಜಿ ಶಿವರಾಯಾ
ಗಂಗ್ಯಿನ ತರವಲಿ ನಡದಾರ |ಕೋಲ
ಹಳ್ಳs ದಂಡ್ಯಿಗಿ ಹೂವ ಕೋವೂ ಜಾಣ
ಲಿಂಗಕೊಂದ್ಹೊವ್s ದಯಮಾಡ |ಕೋಲ
ಲಿಂಗಕೊಂದ್ಹೂವ್s ದಯಮಾಡಿದ್ರ ಮಾಡೇನ
ನಮ್ಮವ್ವ ನಮಗ್s ಬೈತಾಳ |ಕೋಲ
ಹಳ್ಳs ದಂಡ್ಯಿಗಿ ಹೂವ ಕೋವೂ ಜಾಣ
ಲಿಂಗಕ್ಕೆರಡ್ಹೂವ್s ದಯಮಾಡಿದ್ರ ಮಾಡೇನ
ನಮ್ಮಪ್ಪ ನಮಗ್s ಬಡಿತಾನ |ಕೋಲ
ನಿಮ್ಮವ್ವ ಬೈದ್ಯರ ನಿಮ್ಮಪ್ಪ ಬಡಿದ್ಯರ
ಬೇಗ ಬಾ ಗಂಗಾ ಜಡಿದೊಳ |ಕೋಲ
ಬಂದ್ಯರ ಬೆಂದೇನ ನೆಂಬಿಗಿಲ್ಲೋ ಶಿವನೆ
ರಂಭ್ಯಾಳೊ ನಿನ್ನ ಮನಿಯಾಗ |ಕೋಲ
ನನ್ನಾಣಿ ನಿನ್ನಾಣಿ ಮತ್ತ ಲಿಂಗದಾಣಿ
ರಂಬಿಲ್ಲ ನನ್ನ ಮನಿಯಾಗ |ಕೋಲ
ಬಂದ್ಯರ ಬರುವೇನೊ ನೆಂಬಿಗಿಲ್ಲೋ ಶಿವೋನೆ
ಮಡದ್ಯಾಳೆ ನಿನ್ನ ಮನಿಯಾಗ |ಕೋ
ನನ್ನಾಣಿ ನಿನ್ನಾಣಿ ಮತ್ತ ದೇವ್ರಾಣಿ
ಮಡದಿಲ್ಲ ನನ್ನ ಮನಿಯಾಗ |ಕೋಲ
ಜಡಿಯಾಗ ಹೋಗೂದು ಗಿಣಿರಾಮ ಕಂಡಾನ
ಹೋಗಿ ಹೇಳ್ಯಾನ್s ಗೌರವಗ |ಕೋಲ
ಮನಗ್ಯಿದ ಗೌರವ್ವ ಮೈಮುರಿದು ಎದ್ದಾಳ
ತಣ್ಣೀರಲಿ ಮಕವ ತೊಳೆದಳ |ಕೋಲ
ತಣ್ಣೀರಲಿ ಮಕವ ತೊಳೆದನೆ ಗೌರವ್ವ
ಹೋದಳಣ್ಣಾನ ಅರಮನಿಗಿ |ಕೋಲ
ಎಂದಿಲ್ಲ ಗೌರವ ಇಂದ್ಯಾಕ ಬಂದಾಳೆಂದು
ಕುಡಲ್ಲಿ ಹಾಕ್ಯಾರೆ ಮಣಿ ಚೌಕಿ |ಕೋಲ

ಕುಡಲ್ಲಿ ಬಂದಿಲ್ಲ ನಿಂದ್ರಲಿ ಬಂದಿಲ್ಲ
ನಾ ಕಂಡ ಕನಸ ಹೇಳಲ್ಲಿ ಬಂದ |ಕೋಲ

ಕೆರಿಮ್ಯಾಲಿ ಕೆರಿಹುಟ್ಟಿ ಕೆರಿಮ್ಯಾಲ ಮರಹುಟ್ಟಿ
ಮರದ ಮ್ಯಾಲೊಬ್ಬ್ಯ ಬಲಿಹಾಕಿ |ಕೋಲ

ಕೆರಿಯಂದ್ರ ಶಿವರಾಯಾ ಮರ ಅಂದ್ರ ಜಡಿಗೋಳ
ಬಲಿಯಂದ್ರ ಒಳಗ ಸಿರಿಗಂಗಿ |ಕೋಲ

ದೇಶಾನೆ ಆಳವರಿಗೇಸೊಂದು ಹೆಂಡಿರ
ನಿನಗ್ಯಾಕ ತಂಗೀ ಪರದುಕ್ಕ |ಕೋಲ

ಕಿಡಿಕಿಡಿನಾದಾಳ ಕಿಡಿ ಚಂಡನಾದಾಳ
ಎಡವಿದ ಬೆರಳ್ಯೊಂದರವಿಲ್ಲ |ಕೋಲ

ಎಡವಿದ ಬೆರಳ್ಯೊಂದರವಿಲ್ಲ· ಗೌರವ್ವ
ಬಂದಳ ತನ್ನ ಅರಮನಿಗೆ |ಕೋಲ

ಗೊಬ್ಬೂರ ಹಾದೀಲಿ ಒಬ್ಬಯ್ಯ ಬರತಾನ
ಅಬ್ಬರಣಿ ಗಾರೀ ನೀರಕೂಡ |ಕೋಲ

ಒಂದ ಗಿಂಡಿ ಕೊಡನಂದ್ರ ಎರಡ ಗಿಂಡಿ ಕೊಟ್ಟ್ಯಾಳ
ನಿನಗಿಬ್ಬರೇನ ಪುರುಷರ |ಕೋಲ

ಅಯ್ಯಯ್ಯ ಶಿವ ಶಿವ ಅಣಕದ ಮಾತ್ಯಾಕೊ
ಸರವ ಕೆಂಜ್ಯೆಡಿ ಮಣಿಮುಕುಟ ಕೋಲ

ಸರವನೆ ಕೆಂಜ್ಯೆಡಿ ಮಣಿಮುಕುಟದೊಳಗಿನ
ಸಿರಿಗಂಗಾಗೊಂದ್ಯ ನಿನಗೊಂದ |ಕೋಲ

ಗೊಬ್ಬರ ಹಾದೀಲಿ ಒಬ್ಬಯ್ಯ ಬರತಾನ
ಅಬ್ಬರಮಿ ಗೌರ್‍ಯ ಎಡಿಮಾಡ |ಕೋಲ

ಒಂದೆಡಿ ಮಾಡಂದ್ರ ಎರಡೆಡಿ ಮಾಡ್ಯಾಳ
ನಿನಗಿಬ್ಬರೇನ ಪುರುಷ್ಯರ |ಕೋಲ

ಅಯ್ಯಯ್ಯ ಶಿವಶಿವ ಅಣಕ್ಯದ ಮಾತ್ಯಾಕೊ
ಸರವ ಕೆಂಜ್ಯೆಡಿ ಮಣಿಮುಕುಟ |ಕೋಲ

ಸರವನೆ ಕೆಂಜೆಡಿ ಮಣಿಮುಕುಟತೊಳಗಿನ
ಸಿರಿಗಂಗಿಗೊಂದು ನಿನಗೊಂದು |ಕೋಲ

ಗಂಗೀಗಿ ತಂದರ ತಿಂಗೀಗಿ ತಂದಂಗ
ನಿಂಗ್ಯವ ತಾರ ಬಡಿತೇನ |ಕೋಲ

ಗಂಗ್ಯಿನ ತಂದ್ಯರ ತಂಗೀಗಿ ತಂದಂಗ
ಖೆಂಡ್ಯವ ತಾರ್‍ಯ ಬಡಿತೇನ |ಕೋಲ

ಬೆಳ್ಳಿಯ ಬಟ್ಟಲಾಗ ಒಳ್ಳೆಣ್ಣಿ ತಕ್ಕೊಂಡು
ಕೌರ್‍ಯೋದಳವನ ತೆಲಿ ಹೂಸ |ಕೋಲ

ತೆಲಿಯಂಬ ಭಾಂವಕ ಒತ್ತ್ಯಾಳ ವರಿಸ್ಯಾಳ

ಟೊಂಕಂಬು ಭಾವಕಿಳಿದಾಳ |ಕೋಲ

ಟೊಂಕಂಬೊ ಭಾವಕ ಒತ್ತ್ಯಾಳ ವರಿಸ್ಯಾಳ
ಪಾದಂಬೊ ಭಾವ್ಯಕಿಳಿದಾಳ |ಕೋಲ

ಪಾದಂಬೊ ಭಾಂವಕ ಒತ್ತ್ಯಾಳ ಒರಿಸ್ಯಾಳ
ನೆಲ ಸೋಸಿ ಗಂಗಿ ಹರಿದಾಳ |ಕೋಲ

ಗಂಗ್ಯೊಕ್ಕ್ಯೇದ ಮರುದಿನ ಗೌರಿ ಮುಟ್‌ನಾದಳ
ಮಿಂದೆನಂದರ ನೀರನಿಲ್ಲ |ಕೋಲ

ಮಿಂದೇನು ಅಂದ್ಯರ ನೀರಿಲ್ಲ ಶಿವರಾಯ
ಹಾಲ್ಯಿನ ಕೊಡವ ಖಳವ್ಯಾನ |ಕೋಲ

ಹಾಲೀಲಿ ಮಿಂದಿದರ ಹೋಗ್ಯವು ಮುಡಚಾಟ
ತಂಗಿ ಗಂಗಮನ ಖಳವರಿ |ಕೋಲ

ಗಂಗ್ಯೊಕ್ಕ್ಯೇದ ಮರದ್ಯಿನ ಗೌರಿ ಮುಟ್ಟನಾದಾಳ
ಮಿಂದೇನಂದಾರ್ಯ ನೀರನಿಲ್ಲ |ಕೋಲ

ಮಿಂದೇನು ಅಂದ್ಯರ ನೀರಿಲ್ಲ ಶಿವರಾಯಾ
ತುಪ್ಪದ ಕೊಡವಾ ಖಳವ್ಯಾನ |ಕೋಲ

ತುಪ್ಪೀಲಿ ಮಿಂದಿದರ ಹೋಗವ ಮುಡಚಾಟ
ತಂಗಿ ಗಂಗಮನ ಖಳ್ಯುವರಿ |ಕೋಲ

ಪಂಚಮಿಯ ಹಬ್ಬದಲ್ಲಿ ಭೂಲಾಯಿ ಹಾಕುತ್ತಾ ಹಾಡು ಹೇಳುವರು. ಶಿವನು ಗಂಗೆಯನ್ನು ಕರೆತರಲು ನಂದಿಯನ್ನು ಶೃಂಗರಿಸಿಕೊಂಡು ಹೋಗುವನು. ಹಳ್ಳದ ದಂಡೆಯ ಮೇಲೆ ಹೂವನು ಕಡಿಯುತ್ತಿರುವ ಗಂಗಿಯನ್ನು ಪರಿಪರಿಯಾಗಿ ಮಾತಾಡಿ ತನ್ನ ಜಡೆಯಲ್ಲಿ ಕೂಡಿಸಿಕೊಂಡು ಮನೆಗೆ ಬರುತ್ತಾನೆ. ಇದನ್ನು ಗಿಳಿಯು ಕಂಡು ಗೈರಿಗೆ ತಿಳಿಸಲು, ಅವಳು ಸಿಟ್ಟಾಗಿ ತವರು ಮನೆಗೆ ಹೋಗುತ್ತಾಳೆ. ಅಲ್ಲಿ ತವರವರು ಈಕೆಯನ್ನೆ ಬಯ್ದು ಕಳಿಸುತ್ತಾರೆ. ದೇಶನೆ ಆಳವರಿಗೇಸೊಂದು ಹೆಂಡರ ನಿನಗ್ಯಾಕ ತಂಗೀ ಪರದುಕ್ಕ ಎಂದು ಹೇಳುವರು. ಅದಕ್ಕೆ ಗೌರಿ ಸಿಟ್ಟನಿಂದ ತನ್ನ ಮನೆಗೆ ಬರುವಳು. ಶಿವನು ಊರಿನಿಂದ ಬಂದು ಕಾಲಿಗೆ ನೀರು ಕೊಡುವೆಂದಾಗ ಎರಡು ತಂಬಿಗೆ ನೀರು ಕೊಡುವಳು. ಅದಕ್ಕೆ ಶಿವನು ನಿನಗಿಬ್ಬರೇನ ಪುರುಷರು ಎಂದು ಅಣಕದ ಮಾತಾಡುವನು. ಅದಕ್ಕೆ ಗಂಗಿಯ ವಿಷಯ ಬಯಲಿಗೆಳೆಯಲು ಪ್ರಯತ್ನಿಸುತ್ತಾಳೆ ಗೌರಿ. ಒಂದು ಬಟ್ಟಲಲ್ಲಿ ಎಣ್ಣೆಯನ್ನು ತೆಗೆದುಕೊಂಡು ತಲೆಗೆ ಹಚ್ಚಲು ಆರಂಭಿಸುತ್ತಾಳೆ. ಆಗ ಗಂಗೆಯು ಗೌರಿಗೆ ಗೊತ್ತಾಗದಂತೆ ಮೆಲ್ಲಗೆ ಸೊಂಟದ ಕಡೆಗೆ ಇಳಿಯುತ್ತಾಳೆ. ಗೌರವ್ವನು ಹಾಗೇ ಕೆಳಕ್ಕೆ ಬಂದ ಹಾಗೆ ಗಂಗೆಯೂ ಅದಕ್ಕಿಂತ ಕೆಳಗಡೆಗೆ ಸರಿಯುತ್ತ ಕೊನೆಗೆ ನೆಲಮುಟ್ಟಿ ಹೊಳೆಯಾಗಿ ಹರಿದು ಹೋಗುತ್ತಾಳೆ. ಮರುದಿನವೇ ಗೌರಿ ಮುಟ್ಟಾಗುವಳು. ಸ್ನಾನ ಮಾಡಲು ನೀರಿಲ್ಲದಂತಾಗುತ್ತದೆ. ಅದಕ್ಕೆ ಶಿವನು ಚೇಷ್ಟೆಯಿಂದ ಹಾಲಿನ ತುಪ್ಪದ ಕೊಡಗಳನ್ನು ಸ್ನಾನಕ್ಕೆಂದು ಕಳಿಸುತ್ತಾನೆ. ಗೌರಿಯ ಗರ್ವಭಂಗವಾಗುವುದು. ಗಂಗೆಯನ್ನು ಕರೆತರಲು ಶಿವನಿಗೆ ತಿಳಿಸುವಳು.

### ೩. ಋತುಮತಿ ಹಾಡುಗಳು

ಮಾನವ ದೇಹದಲ್ಲಿ ಪೂರ್ಣ ಸೌಂದರ್ಯವು ಕಂಡು ಬರುವ ಕಾಲಗಳು ಎರಡು. ಒಂದು ಎಳೆಗೂಸಿದ್ದಾಗ, ಇನ್ನೊಂದು ಪ್ರಾಯದಲ್ಲಿ ಬಾಲ್ಯವಸ್ಥೆ ಮುಗಿದು ಪ್ರಾಯಕ್ಕೆ ಬಂದ ಹುಡುಗಿ ಋತುಮತಿಯಾದಾಗ ಸೋಬಾನೆ

ಎಂಬ ಸೊಲ್ಲು ಇರುವಂಥ ಹಾಡುಗಳು ಹೇಳುವರು. ಮತ್ತೆ ಕೆಲವು ಹಾಡುಗಳಿಗೆ ಸೋಬಾನೆ ಎಂಬ ಪದ ಬಳಸುವುದಿಲ್ಲ. ಇಲ್ಲಿ ಹೇಳಿದಂತಹ ಹಾಡುಗಳಲ್ಲಿ ದೀಪಾವಳಿ ಹಬ್ಬ, ತಾಯಿ ತವರೂರು ಎಂಬ ಎರಡು ಹಾಡು ಇಲ್ಲಿ ಹೇಳಲಾಗಿದೆ.

**೩.೧. ದೀಪಾವಳಿ ಹಬ್ಬ**

ವರ್ಷಿಗಿ ಬರುವುದು ದೀವಳಿಗಬ್ಬ ದೇಶಕ ದೊಡ್ಡದ್ಽ
ಆಯಿತ್ತರ ಅಮಾಸಿ ಛತ್ತರದೇಸಿ ಬೆಳಗ್ಯಾಳ್ಯೊಽ ನಿಮಗಽ ||ಪ||

ಕಾಮಣ್ಣ ಭೀಮಣ್ಣ ಇಬ್ಬರು ಕೂಡಿ ತಂಗಿನ ಕರಿ ಹೋಗರಿ
ಎತ್ತ ತಂದು ಮುಟ್ಟವ ಬಿಗಿದು ತಂಗಿನ ಕರಿ ಹೋದ್ಽ ||೧||

ಹೋಗಿನ ದಿವಸ ಅಡಗಿ ಮಾಡ್ಯಾಳ ಪಂಚ್ಯಅಮೃತ
ಅತ್ತೆ ಮಾವಗ ಕದ್ದು ನೀಡ್ಯಾಳ ಸುಳಿದ ಬಾಳೆಹಣ್ಣಽ ||೨||

ತಂಗಿ ಮೈಮ್ಯಾಲ ಎಂಟ ತೊಲಿ ಎಂಟನೂರು ಎಂಟ್ಯೊಡವ್ಽ
ತಂಗಿ ಕರಕೊಂಡು ನಡದಾನೋ ಬೇಗ ||೩||

ಊರಾದಿ ಬಿಟ್ಟು ಕೇರ್‍ಯಾದಿ ಬಿಟ್ಟು ಈಕಡ್ಯಾಕ್ಯೊಽ ನಮ್ಮಣ್ಣ
ಊರ ಹಾದಿ ನಿನಗೆ ತಿಳಿಯಣಿಲ್ಲ ಇಳಿಯವ್ವ ಎತ್ತ ||೪||

ಎತ್ತಿನ ಮ್ಯಾಲಿನ ಇಳಿ ಇಳಿಯಳಿಗೆ ಕಟ್ಯಾನ ಕೈಕಾಲ
ಕಟ್ಯಾನ ಕೈ ಕಾಲ ಎತ್ಯಾನ ದೊಡ್ಡಕಲ್ಲಽ ||೫||

ದೊಡ್ಡ ಕಲ್ಲಿನ ಕೆಳಗ ಅದ ಏಳ ಹೆಡಿ ಸರ್ಪ
ಹಿಡಿದವನ ಕಿರಿ ಬಳ್ಳಿಗಿ ಏಳೆಡೆ ಸರ್ಪಽ ||೬||

ಗಿಮಿಗಿಮಿ ತಿರುಗಿ ಭೂಮಿ ಮ್ಯಾಲ ಬಿದ್ದು ಕಡಕೊಂಡ
ಜೀವ ಹೋಗತದ ಮೂರು ಗಂಟ್ಯಾಽದೊಳಗ ||೭||

ಏನಮ್ಮಣ್ಣ ಹೇಗೆ ಮಾಡಲಿ ಕಟ್ಟಿದ್ಽ ಕೈಕಾಲ
ಕಟ್ಟಿದ ಕೈಕಾಲ ಬಿಟ್ಟಿದರ ಕುಡಿಸುವೆ ಮಲಿಹಾಲ ||೮||

ಮಲಿಹಾಲಿಗಿ ಆಸೆವ ಬಿದ್ದು ಹೊರಳಾಡುತ ಬಂದ
ಕಟ್ಟಿದ ಕೈಕಾಲ ಬಿಟ್ಟಿದ ಮ್ಯಾಲ ಕುಡಿಸ್ಯಾಳ ಮಲಿಹಾಲ ||೯||

ಮಲಿ ಹಾಲ ಕುಡಿ ಕುಡಿಯಷ್ಟ್ರಿಗಿ ಅವನ ಜೀವ ತಿರಗಿ
ತಂಗಿ ಒಡವಿ ತಂಗಿ ಕೊಟ್ಟು ಕರಕೊಂಡು ಒಯ್ದ. ||೧೦||

ದೇಶದಲ್ಲೆಡೆ ಆಚರಿಸುವ ದೀಪಾವಳಿ ಹಬ್ಬಕ್ಕೆ ಸಾಮಾನ್ಯವಾಗಿ ತಮ್ಮ ಹೆಣ್ಣುಮಕ್ಕಳನ್ನು ಕರೆದುಕೊಂಡು ಬರುವರು. ಪ್ರಾಚೀನ ಕಾಲದಲ್ಲಿ ವಾಹನಗಳ ಸೌಕರ್ಯವಿಲ್ಲದ ಸಂದರ್ಭದಲ್ಲಿ ಎತ್ತು ಕುದುರೆಗಳನ್ನೇ ಕರೆತರಲು ಬಳಸುತ್ತಿದ್ದರು. ಹಾಗೆಯೇ ಒಬ್ಬ ಅಣ್ಣ ತಂಗಿಯನ್ನು ಕರೆಯಲು ಹೋಗಿದ್ದಾನೆ. ಆಕೆಯ ಒಡವೆ ಆಸೆಪಟ್ಟು ಊರಿನ ದಾರಿ ಬಿಟ್ಟು ಬೇರೆ ಕಡೆಗೆ ಒಯ್ದುತ್ತಿದ್ದಾಗ ಆಕೆ 'ಊರಾದಿ ಬಿಟ್ಟು ಕೇರ್‍ಯಾದಿ ಬಿಟ್ಟು ಈಕಡ್ಯಾಕೋ ನಮ್ಮಣ್ಣ' ಎಂದು ಕೇಳಿದಳು. ನಿನಗೆ ದಾರಿ ತಿಳಿಯುದಿಲ್ಲ ಕೆಳಗಿಳಿ ಎಂದಾಗ ಆಕೆ ಇಳಿವಷ್ಟರಲ್ಲಿ ಕೈಕಾಲು ಕಟ್ಟಿದನು. ಕೊಲೆ ಮಾಡಬೇಕೆಂದು ಕಲ್ಲು ಎತ್ತಿದ್ದಾಗ ಹಾವು ಕಡಿಯುತ್ತದೆ. 'ಕಟ್ಟಿದ ಕೈಕಾಲು ಬಿಟ್ಟಿದರೆ

ಕುಡಿಸುವೆ ಮಲಿಹಾಲ' ಅದಕ್ಕೆ ತಂಗಿ ಕೈಕಾಲು ಕಟ್ಟದಿದ್ದರೆ ನಿನಗೆ ಎದೆ ಹಾಲು ಕುಡಿಸುತ್ತಿದ್ದೆ ಎಂದಿದಕ್ಕೆ ಹೊರಳಾಡುತ್ತ ಬಂದು ಕಟ್ಟಿದ ಕೈಕಾಲುಗಳನ್ನು ಬಿಚ್ಚುವನು. ಆಕೆ ಮಗನಂತೆ ತಿಳಿದು ಹಾಲು ಕುಡಿಸಿದಕ್ಕೆ ಆತನ ಜೀವ ಮರಳಿತು. ಆಕೆಯ ಒಡವೆ ಆಕೆಗೆ ಕೊಟ್ಟು ಮನೆಗೆ ಕರೆದುಕೊಂಡು ಒಯ್ದನು. ಆಕೆ ದೀಪಾವಳಿ ಹಬ್ಬದ ದಿವಸ ಆರತಿ ಬೆಳಗಿದಳು. ಈ ಹಾಡಿನಲ್ಲಿ ತಂಗಿಯೆಂದು ಅರಿಯದೆ ಆಸೆಗೆ ಬಲಿಯಾಗಿ ಸಾಯುವ ಪರಿಸ್ಥಿತಿ ತಂದುಕೊಂಡನು. ಈ ರೀತಿ ತಪ್ಪು ಮಾಡಿದರೆ ಶಿಕ್ಷೆ ಖಚಿತವೆಂದು ಇದರಿಂದ ತಿಳಿದು ಬರುತ್ತದೆ.

**೩.೨. ತಾಯಿ ತವರೂರು**

ತಾಯಿ ತವರೂರs ಮನಿ ನೋಡಲು ಬಂದೆ
ತಾಯಿ ನೆನಪಾಗಿ ಕಣ್ಣನೀರು ತಂದೆs

ಹತ್ತು ಹದಿನಾಲ್ಕು ವರುಷಗಳಲ್ಲಿ
ಹಡೆದ ತಾಯಿ ತಂದಿ ಪ್ರೀತಿಗಳಲ್ಲಿs
ಮುತ್ತಿನಂತೆ ಜೋಪಾನವದೆವಲ್ಲಿ
ಹೊತ್ತು ಮುಣಗಿದರ ನಾ ಕಣ್ಣೀರಲ್ಲಿ | ತಾಯ ತವರೂರು ||೧||

ಮನೆಯ ಬಾಗಿಲ ಮುಂದೆ ರಂಗೋಲಿs
ಬಗ್ಗಿ ಹಾಕುತ್ತಿದ್ದೆs ನಾನಾ ತರದಲಿs
ಹುಟ್ಟಿದ ಮನಿಯ ಹ್ಯಾಂಗ ಮರೆಯಲಿ
ನನ್ನ ದುಃಖವ ಯಾರಿಗೆ ಹೇಳಲಿs | ತಾಯಿ ತವರೂರು ||೨||

ನನ್ನ ಅಣ್ಣನ ಹೆಂಡತಿ ಖೋಡಿ
ಕಣ್ಣ ಸಣ್ಣ ಮಾಡಿದಳೆನ್ನಗ ನೋಡಿ
ಅಣ್ಣ ಮಾತಾಡಿಸಿದರ ಒಳಗೆ ಓಡಿ
ತನ್ನ ಸತಿಗೂಡ ತಾನೇ ಮಾತಾಡಿ | ತಾಯಿ ತವರೂರು ||೩||

ನನ್ನ ಅತ್ತಿಗಿಯ ಕೈಗೊಂಬಿ ಅಣ್ಣ
ಎತ್ತಿ ಇಳಿಸಿದ ಮರತೆ ತಂಗಿನ
ಮನೆಯ ಬಾಗಿಲಿಗಿ ಹೋಗಿ ಬಂದೆನs
ಇತ್ತ ಬಾ ತಂಗಿ ಎನಬಾರದೆನs | ತಾಯಿ ತವರೂರು ||೪||

ತಾಯಿ ಇಲ್ಲದ ತವರೂರು ಮನಿಗೆ
ಹೋಗುಬಾರದು ಎಂದೂ ಎಂದಿಗೆs
ದೇವರದಯೆವಿರಲಿ ಈ ಎನ್ನ ಮ್ಯಾಲೆs
ಕಾಯಿ ಕರ್ಪೂರ ತರುವೆನು ನಿನಗೆ |ತಾಯಿ ತವರೂರು ||೫||

(ಹಾಡಿದವರು:ಪದ್ಮಾವತಿ ಮತ್ತು ಪುಷ್ಪಾ ಹಲಸಿ)

ಹೆಣ್ಣು ಮಕ್ಕಳಿಗೆ ತವರೂರೆಂದರೆ ಅತಿ ಪ್ರೀತಿ, ಹುಟ್ಟು ಬೆಳೆದ ಮನೆಯ ನೆನಪು, ಕೂಡಿ ಆಡಿದ ಗೆಳತಿಯರ ನೆನಪು, ಅಣ್ಣ ತಮ್ಮಂದಿರ ಪ್ರೀತಿ ಗಂಡನ ಮನೆಯಲ್ಲಿದ್ದರೂ, ಮರುಕಳಿಸುತ್ತಿರುತ್ತದೆ. ಆಕೆ ತವರು ಮನೆಗೆ ಬಂದಾಗ ಅತ್ತಿಗೆ ಯಾವ ರೀತಿಯಲ್ಲಿ ನಡೆದುಕೊಂಡಳು. ಅಣ್ಣನ ವರ್ತನೆ ಹೇಗಿತ್ತು. ಮೊದಲಾದವುಗಳ

ಅನುಭವವಾದ ಗರತಿ 'ತಾಯಿ ಇಲ್ಲದ ತವರೂರು ಮನಿಗೆ ಹೋಗಬಾರದು ಎಂದಿಗೆ' ಎನ್ನುವಲ್ಲಿ ಆಕೆಯ ಅನುಭವದಲ್ಲಿನ ವೇದನೆಯನ್ನು ವ್ಯಕ್ತಪಡಿಸುತ್ತದೆ.

### ೪. ಭಜನೆ ಹಾಡುಗಳು

ಭಜಿಸು ಎಂಬ ಪದದಿಂದ ಭಜನೆ ಎಂಬ ಪದ ಉಗಮಗೊಂಡಿದೆ. ಭಜನೆ ಎಂದರೆ ಪೂಜಿಸುವುದು, ದೇವರ ಸ್ತುತಿ ಮಾಡುವುದು ಎಂದರ್ಥ. ದೇವರ ನಾಮಸ್ಮರಣೆಗಳು ಮತ್ತು ಕೌಟುಂಬಿಕ ಜೀವನ ಈ ಭಜನೆ ಹಾಡುಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಭಜನೆ ಮಾಡುವ ವ್ಯಕ್ತಿಗಳು ತಂದೆಗಿಂತ ತಾಯಿಯ ಉಪಕಾರ, ವಾತ್ಸಲ್ಯಕ್ಕೆ ಮಾರುಹೋಗಿ ರಚಿಸಿದ ಹಾಡುಗಳು ಇಲ್ಲಿ ಕಂಡು ಬರುತ್ತವೆ.

#### ೪.೧. ತಾಯಿ ಸೇವೆ

ತಾಯಿ ಸೇವೆ ಮಾಡ್ರೋ ಜನ್ಮಕ
ಮಾಡಿಕೋ ಜನ್ಮ ಸಾರ್ಥಕ ||ಪ||

ದುರ್ಬುದ್ಧಿ ಮಗನಿದ್ದS ಒಬ್ಬ ಘಾತಕ
ನಿಶದೊಳಗ ತಾಯಿನ ಕಡಿದಿದ ಖಟಕ
ಪಂಚನಾಮ ಹೋಗ್ಯಾರೊ ರಾಜನತನಕ
ರಾಜ ಹುಕುಮ ಕೊಟ್ಟ ಘಾಸಿ ಶಿಕ್ಷಕ |ತಾಯಿ.....

ನಿತ್ಯ ನುಡಿಬೇಕು ತಾಯಿಯ ವಚನ
ವಾದ ಹಾಕುವ ಮಗನಿದರ ಯಾತಕ
ಮುಂದೆ ಹೋಗುತಾರೆ ಹಂದಿ ಜನಮ್ಮಕ |ತಾಯಿ.....

ತಾಯಿ ಸತ್ತು ಮತ ತಂದಿನಿದ್ದರೆ
ಹೈರಾಣಿ ಬರವುದು ಮಕ್ಕಳಿಗಪ್ಪ
ತಂದೆ ಸತ್ತು ತಾಯಿ ಇದ್ದರ ಬೆಲೆವಿಲ್ಲಪ್ಪ |ತಾಯಿ.....

ಪೂಜೆ ಮಾಡು ತಾಯಿ ತಂದಿ ಪಾದಕ
ಸರಸರ ನಡೆದು ಹೋಗುತಾರ ಕೈಲಾಸಕ
ಪೂಜೆ ಮಾಡಿ ಪುಣ್ಯ ಪಡೆದS ಪುಂಡಲಿಕSS
ವಿಠ್ಠಲ ಆಗಿ ನಿಂತ ಇಂದಿನತನಕ |ತಾಯಿ.....

ದೇಶದೊಳಗೆ ನಮ್ಮ ವಾಶ ಖೇಳದಿ
ನಿತ್ಯ ಮುಲ್ಲ ಮಾರಿ ಝುಳಕ ಮಾಡಿ
ದುರುಗುಣವೆಲ್ಲ ತೆಗೆದುಹಾಕಿ,
ಶಾಂತಿಯಿಂದ ನಡೆದುಕೊಳ್ಳು |ತಾಯಿ..... (ಹಾಡಿದವರು:ಸಂಗಮೇಶ ಹಲಸಿ)

'ತಾಯಿಗಿಂತ ದೇವರಿಲ್ಲ, ಉಪ್ಪಿಗಿಂತ ರುಚಿಯಿಲ್ಲ' ಎಂಬ ಗಾದೆ ತಾಯಿಯ ಶ್ರೇಷ್ಠತೆಯನ್ನು ಎತ್ತಿ ಹೇಳುವಂತೆ ಈ ಹಾಡಿನಲ್ಲಿ ಕೂಡ ಅದೇ ಶ್ರೇಷ್ಠತೆಯನ್ನು ಕಾಣಬಹುದು. ಪೂಜೆ ಮಾಡು ತಂದೆತಾಯಿ ಪಾದಕ, 'ವಿಠ್ಠಲ ಆಗಿನಿಂತ ಇಂದಿನತನಕ' ಎಂಬ ನುಡಿಗಳು ತಾಯಿ ಸೇವೆ ಮಾಡುವುದರಿಂದ ದೊರೆಯುವ, ಆಗುವ ಲಾಭವನ್ನು ಹೇಳಲಾಗಿದೆ.

೪.೨. ಊರ ಹೊರಗಿನ ಬಾವಿ

ಊರ ಹೊರಗಿನ ಬಾವಿ ಯಾರೂ ತೋಡಿದರೇನು$_s$
ಕಾಲು ಜಾರಿದರೆ ಕೈಲಾಸ$_s$ | ಹೆಣ್ಣಿನ ಮನವು ಜಾರಿದರೆ ವನವಾಸ ||ಪ||

ತನ್ನಂಗೆ ತಾನಿಲ್ಲ ಭಿನ್ನಿಲ್ಲ$_s$ ಭೇದಿಲ್ಲ$_s$
ತನ್ನಂತೆ ತನ್ನ ಮಗಳಂತೆ ನಡೆದುಕೊಳ್ಳುವರಾರ$_s$ | ಊರ ಹೊರಗಿನ.....

ಅತ್ತೆಯ ಮನೆಯಲ್ಲಿ ತೊತ್ತಾಗಿ ದುಡಿಬೇಕ$_s$
ಹೊತ್ತಿದು ಕೊಟ್ಟರ ಉಣಬೇಕೆ ತಂಗಿ$_s$
ಹೆತ್ತವರಿಗೆ ಹೆಸರು ತರಬೇಕೆ ಮಗಳೆ | ಊರ ಹೊರಗಿನ....

ಗಂಡನ ಮನಿಯಲಿ ಬೇದವ$_s$ ನೀಡಬೇಡ$_s$
ಅಣ್ಣಾ ತಮ್ಮಂದಿರ ಸಂಬಂಧ ಕಡಿಬೇಡ ಊರ ಹೊರಗಿನ.....

ಕರಿಸೀರಿ ಉಡಬೇಡ ಕೆಂಪು ಬಣ್ಣಾ ಬಿಡಬೇಡ
ತಲೆಯ ಮೇಲಿನ ಸೇರಗು ತೆಗೆಬೇಡ ತಂಗಿ
ನಡು ಬಾಗಿಲಲ್ಲಿ ನಿಂತು ನಗಬೇಡ | ಊರ ಹೊರಗಿನ.....(ಹಾಡಿದವರು:ಸಂಗಮೇಶ ಹಲಸಿ)

'ಅತ್ತೆಯ ಮನೆಯಲ್ಲಿ ತೊತ್ತಾಗಿ ದುಡಿಬೇಕ', 'ಅಣ್ಣಾ ತಮ್ಮಂದಿರ ಸಂಬಂಧ ಕಡಿಬೇಡ', 'ತಲೆಯ ಮೇಲಿನ ಸೆರಗ ತೆಗೆಬ್ಯಾಡ' ಮೊದಲಾದ ಮಾತುಗಳು ತಾಯಿ ತನ್ನ ಮಗಳಿಗೆ ನೀತಿ ಮಾತುಗಳನ್ನು ಬೋಧಿಸಿವಳು. ಮನಸ್ಸು ಚಂಚಲವಿರುತ್ತದೆ. ಅದನ್ನು ಹಿಡಿತದಲ್ಲಿಟ್ಟುಕೊಳ್ಳದಿದ್ದರೆ, ಹೆಣ್ಣಿನ ಜೀವನದಲ್ಲಿ ತೊಂದರೆಗಳೇ ಹೆಚ್ಚು ಬರುವವು ಎಂದು ಈ ಹಾಡಿನಲ್ಲಿ ಹೇಳಲಾಗಿದೆ.

ಜೋಕುಮಾರನ ಹಬ್ಬವನ್ನು ಟೋಕ್ರೆಕೋಳಿ ಸಮುದಾಯದವರೇ ಆಚರಿಸುತ್ತಾರೆ. ಆತನ ಕುರಿತ ಹಾಡಿದು

೫. ಜೋಕುಮಾರನ ಸಾಹಿತ್ಯ

೫.೧. ಜೋಕುಮಾರನ ಹಾಡು ೧

ಊರಲ್ಲಿ ಹೊಂಟು ಚಂಡಾಡಿದ್ರು
ಬಾಲ್ಕರ ಕಂದ ಬದಮಯ್ಯ | ಜೋಕಮಾರ
ಬಾಲ್ಯಾರ ಕಂದ ಬದಮಯ್ಯ ಚಂಡಾಡಿದ್ರ
ಗೋಧಿ ಜ್ವಾಳೆಲ್ಲ ಬೆಳೆದಾವೆ ಜೋಕುಮಾರ
ಏನಕೋಮರ ನೀ ಕಾಲಿಗೊಂದು ಇಳಿಗಿಲ್ಲ
ಮ್ಯಾಲ ಮಾಣಿಕದು ಅರಳಿಲ್ಲ | ಜೋಕುಮಾರ.
ಮ್ಯಾಲ ಮಾಣಿಕದ ಅರಳಿಲ್ಲ ಈ ಊರ
ರದಬಿದ್ಯಾಗ ಮೇರೆದಾನೋ ಜೋಕುಮಾರ. (ಹಾಡಿದವರು:ಸರಸ್ವತಿ ಬಂಡೆಪ್ಪ ಜಮಾದಾರ)

'ತಳವಾರ' ಎಂಬುದೊಂದು ವೃತ್ತಿ ಸೂಚಕವಾದ ಹೆಸರು. ತಳವಾರ ಎಂಬಲ್ಲಿ ತಳ+ವಾರ ಎಂಬ ಎರಡು ಪದಗಳು ಸೇರಿವೆ. 'ತಳ' ಎಂಬುದಕ್ಕೆ ಸ್ವಂತ ಊರು, ಜನ್ಮದೂರು ಎಂಬರ್ಥವಿದೆ. 'ವಾರ' ಎಂದರೆ ಸಂರಕ್ಷಣೆ

ಎಂದರ್ಥ. ಅಂದರೆ ತಳದಪಾರ ಮಾಡುವನು ತಳವಾರ ಎಂದಾದರು.

ಎಳ್ಳು ಗಾಣಿಗ ಬಲ್ಲ | ಸುಳ್ಳು ಸಿಂಪಿಗಬಲ್ಲ
ಕಳ್ಳ ತಳವಾರ ಬಲ್ಲ | ಬಣಜಿಗ
ಬಲ್ಲ ಎಲ್ಲರನು ಸರ್ವಜ್ಞ.

ಇದರಿಂದ ಕಳ್ಳರನ್ನು ಹಿಡಿಯುವುದು ತಳವಾರನ ಕಾಯಕವಾಗಿತ್ತೆಂಬುದು ತಿಳಿದುಬರುತ್ತದೆ.

ಅಗಸಿಯ ತಗಿ ನನ್ನ ಬಗಸ್ಕುಳ್ಳ ತಳವಾರ
ಬಗಸೀಯ ತುಂಬ ಅಡಕಿ ಬಳಿ ಎಲಿಯ | ಕೊಟ್ಟರ
ನಗತ ತಗದಾನ ಅಗಸೀಯ |

ಊರಿಗೆ ಅಗಸಿಯಿದ್ದು ಅದಕ್ಕೆ ಬಾಗಿಲವಿದ್ದರೆ ಕಾವಲಿಗೆ ನಿಂತ ತಳವಾರ ಬಾಗಿಲು ತಗೆದರೆ ಜನರು ಹೊರಗೆ ಹೋಗಬೇಕು. ಅಂಥ ಸಂದರ್ಭದಲ್ಲಿ, ಮದುವೆಯಾಗಿ ಹೋಗುವ ಊರಿನ ಹೆಣ್ಣುಮಕ್ಕಳನ್ನು ಅಗಸಿಯಲ್ಲಿ ತಡೆದು ತಳವಾರರು ಖುಸಿ ಕೇಳುತ್ತಿದ್ದರು. ಅದಕ್ಕೆ ಗಂಡಿನ ಮನೆಯವರು ಮಾನದ ಎಲೆ ಅಡಿಕೆ ಅಥವಾ ರೂಪಾಯಿ ಈತನಿಗೆ ಖುಸಿ ಕೊಟ್ಟ ನಂತರ ಅಗಸಿಯಿಂದ ಹೊರಗೆ ಬಿಡುತ್ತಿದ್ದನೆಂಬುದಕ್ಕೆ ಈ ಮೇಲಿನ ಪದ್ಯವೇ ಸಾಕ್ಷಿ.

**೫.೨. ಜೋಕುಮಾರನ ಹಾಡು ೨**

ಎಲ್ಲಿಂದ ಬಂದ್ಯೊ ಜೋಕುಮಾರ
ಬೇಡಿದ ವರ ಕೊಡತೀವಿ ಕಾಡಬ್ಯಾಡೋ ಜೋಕುಮಾರ ||ಪ||

ಅಡ್ಡಡ ಮಳಿ ಬಡಿದು ದೊಡ್ಡ ದೊಡ್ಡ ಕೆರಿತುಂಬಿ
ಗುಡ್ಡಗಳೆಲ್ಲ ಹೈನಾಗಿ ಜೋಕುಮಾರ| ಗೌಡರ
ಸೆಡ್ಡಿಯ ಮ್ಯಾಲ ಸಿರಿಬಂದೊ ಜೋಕುಮಾರ ||೧||

ಹುಟ್ಟಿದೇಳ ದಿವಸಕರ ಪಟ್ಟಣವ ತಿರಗ್ಯಾನ
ದಿಟ್ಟದೇವಿ ನಿನ ಮಗನ| ಕೊಮರಾಗ
ಕೊಟ್ಟೆವ್ವ ಏಳ ದಿನಗಳ ಜೋಕುಮಾರ ||೨||

ಹಾಸ್ಹಾಸಿ ಮಳಿ ಬಡಿದು ಬೀಸಿ ಬೀಸಿ ಕೆರಿತುಂಬಿ
ಬಾಸಿಂಗದಂತ ತೊಲಿಬಾಗಿ| ಜೋಕುಮಾರ
ಗೌಡರ ರಾಸಿಯ ಮ್ಯಾಲೆ ಸಿರಿಬಂದ ಜೋಕುಮಾರ ||೩||

ಹಾರೂರ ಕೇರ್‍ಯಾಗ ಹಾರಿ ಚೆಂಡಾಡ್ಯಾನ
ನಾರಿ ನಿನಮಗ ಕೊಮರಯ್ಯ| ಚೆಂಡಾಡಿ
ಊರ ಭೂಮೆಲ್ಲ ಬೆಳೆಬಂದ ಜೋಕುಮಾರ ||೪||

ಹೋಗತ ಹೊನ್ನ ಮುರದ ಬರತ್ತ ಬನ್ನಿಯ ಮುರಿದ
ಕಂಡ ಕಂಡಲ್ಲಿ ಕರಿಬೇವು| ಮುಡಿವಂತ
ಪುಂಡನ್ನ ದೇವಿ ಹಡದಾಳ ಜೋಕುಮಾರ ||೫||

ಪುಂಡನ ಪುಂಡಾಟ್ಕ ಹಿಂಡ ಮಂದಿ ಕೂಡ್ಯಾರ
ಕಂಡ ಕಲ್ಲಿಗಿ ಬಡದಾರ| ರಾತ್ರ್ಯಾಗ
ಅಗಸರ ಕಲ್ಲಾಗ ತುರಕ್ಯಾರ ಜೋಕುಮಾರ. ||೬||

ಜೋಕುಮಾರ ಸಮೃದ್ಧಿಯ ಸಂಕೇತ. ಅವನನ್ನು ಹೊತ್ತು ತಂದ ಹೆಣ್ಣು ಮಕ್ಕಳು ಹಾಡು ಹೇಳಿದ ನಂತರ ಕಾಳು ಕಡಿಗಳನ್ನು ನೀಡುವ ವಿಶಿಷ್ಟ ಸಂಪ್ರದಾಯವಿದೆ. "ಪ್ರತಿಯಾಗಿ ಜೋಕುಮಾರನನ್ನು ಹೊತ್ತು ತಂದ ಹೆಣ್ಣುಮಕ್ಕಳು, ಅಂಬಲಿಯ ಪ್ರಸಾದದ ಜೊತೆಗೆ ಬೇವಿನ ಸೊಪ್ಪನ್ನು, ಕಾಳು ಕಡಿ ನೀಡಿದ ಮನೆಯವರಿಗೆ ಕೊಡುವರು. ರೈತರು ಜೋಕುಮಾರನ ಬೇವಿನ ಸೊಪ್ಪನ್ನು ತೆಗೆದುಕೊಂಡು ಹೋಗಿ ತಮ್ಮ ಹೊಲ ಗದ್ದೆಗಳಿಗೆ ಉಗ್ಗುತ್ತಾರೆ. ಭತ್ತದ ಗದ್ದೆಗಳಿಗೆ ಉಗ್ಗಿದರೆ ಭತ್ತಕ್ಕೆ ಹುಳ ಮುಟ್ಟುವುದಿಲ್ಲವೆಂದು ರೈತರ ಆಗಾಧವಾದ ನಂಬಿಕೆ. ಅಲ್ಲದೇ ರೈತರು ಭತ್ತದ ರಾಶಿಯನ್ನು ಮಾಡುವಾಗ ಜೋಕುಮಾರನ ಬೇವಿನ ಸೊಪ್ಪನ್ನು ರಾಶಿ ಸುತ್ತಲೂ ಉಗ್ಗುವರು. ಅದರಿಂದ 'ಹುಲುಸು' ಜಾಸ್ತಿಯಾಗಿ ರಾಶಿ ಹೆಚ್ಚಾಗುತ್ತದೆ ಎಂಬ ಭಾವನೆಯೂ ಇದೆ" (ಪ್ರಜಾವಾಣಿ:೨೫.೯.೧೯೯೯).

### ೫.೩. ಜೋಕುಮಾರನ ಕುರಿತು ದಂತಕಥೆ ೧

ಸಪ್ತ ಋಷಿಗಳಿಗೆ 'ಜೋಕ'ನೆಂಬ ನಿಷ್ಠಾವಂತ ಸೇವಕನಿರುತ್ತಾನೆ. ಮೃತ್ಯುಲೋಕದ ವೈಭವವನ್ನು ತಾನು ನೋಡಿಕೊಂಡು ಬರುವುದಾಗಿ ಋಷಿಗಳಿಗೆ ಹೇಳುತ್ತಾನೆ. ಆಗ ಅವರು ಒಪ್ಪಿ, ಯಾವುದೇ ಮೃಷ್ಟಾನ್ನ ಮುಂದಿಟ್ಟರೂ ತಿನ್ನಬಾರದು, ಎಂತಹ ಸುಂದರ ತರುಣಿ ಬಂದರೂ ಮನ ಸೋಲಬಾರದು ಎಂದು ಕರಾರು ಮಾಡಿ ಕಳಿಸಿದರು. ಜೋಕನು ಭೂಲೋಕಕ್ಕೆ ಬರುವುದರಲ್ಲಿ ಕತ್ತಲಾಗಲು, ಹತ್ತಿರದ ಮಾರಿ ಗುಡಿಯಲ್ಲಿಯೇ ಉಳಿದು ಅಮೃತ ಕುಡಿದು ಹಾಡತೊಡಗುತ್ತಾನೆ. ಹಾಡು ಕೇಳಿದ ಮಾರೆಮ್ಮ ಚಿನ್ನದ ಪಾತ್ರೆಯೊಂದರಲ್ಲಿ ಮೃಷ್ಟಾನ್ನ ತಂದಿಟ್ಟು ಅವನನ್ನೆ ದಿಟ್ಟಿಸಿ ನೋಡ ತೊಡಗುತ್ತಾಳೆ. ಬ್ರಹ್ಮಾದಿಗಳಿಗೆ ಮನಸೋಲದ ಮಾರೆಮ್ಮ ಜೋಕುಮಾರನಿಗೆ ಮನಸೋಲುತ್ತಾಳೆ. ಜೋಕ ಋಷಿಗೆ ಕೊಟ್ಟ ಮಾತಿನಂತೆ ಮೃಷ್ಟಾನ್ನವನ್ನು ಉಣ್ಣುವಂತೆಯೂ ಇಲ್ಲ ಮತ್ತು ಅತ್ತ ಋಷಿಗಳ ಮಾತು ಮೀರುವಂತೆಯೂ ಇಲ್ಲ. ಆದರೂ ಧೈರ್ಯ ತಂದುಕೊಂಡು ಮೃಷ್ಟಾನ್ನ ತಿಂದು ಚಿನ್ನದ ತಂಬಿಗೆಯಿಂದ ಕೈ ತೊಳೆದು ಚಿನ್ನದಂತಿರುವ ಮಾರಿಯ ಮುಖ ನೋಡುತ್ತ ನೀನು ಯಾರು? ಎಂದು ಕೇಳಿದಾಗ, ತಾನು ಮಾರಿದೇವತೆ ಎಂದು ಹೇಳಿ ತಾಂಬೂಲ ಕೊಡಲು ಇಬ್ಬರಲ್ಲಿ ಪ್ರೇಮ ಅಂಕುರಿಸಿ ಅನುರಕ್ತರಾಗುತ್ತಾರೆ. ಎಚ್ಚರವಾದ ಬಳಿಕ ಜೋಕ ಋಷಿ ಗುರುವಿನ ಮಾತು ಮೀರಿದವನಾಗಿ ಕಾಲಿಗೆ ಬಿದ್ದು ಕ್ಷಮೆ ಕೇಳುತ್ತಾನೆ. ಋಷಿಗಳು ಕಾಲಿನಿಂದ ಒದೆಯುತ್ತಾರೆ. ನಿಮ್ಮ ಪಾದ ಸ್ಪರ್ಶದಿಂದ ನನ್ನ ಕುಲಕೋಟಿಯೆಲ್ಲ ಪಾಪಮುಕ್ತವಾಯಿತೆಂದು ಜೋಕನು ಹೇಳಿದಾಗ, ನೀನು ಏಳು ದಿನಗಳವರೆಗೆ ಸುಮ್ಮನಿರು ಅನಂತರ ನಮ್ಮನ್ನು ಬಂದು ಸೇರು ಎಂದು ಹೇಳುತ್ತಾರೆ. ವಿಚಿತ್ರವೆಂದರೆ, ಆ ಕೂಸು ಹುಟ್ಟಿದ ಕೂಡಲೆ ಮಾತನಾಡಹತ್ತುತ್ತದೆ. ನನ್ನ ತಂದೆ ಯಾರು ಹೇಳು ಎಂದು ಒತ್ತಾಯ ಮಾಡಿದಾಗ ಅವನೆಲ್ಲಿಗೆ ಹೋದನೋ ನನಗೆ ಗೊತ್ತಿಲ್ಲವೆಂದು ಹೇಳಲು, ಹಾಗದರೆ ನಾನು ತಂದೆಯನ್ನು ಹುಡುಕಿಕೊಂಡು ಬರುತ್ತೇನೆಂದು ಕುದುರೆಯೇರಿ ಹುಡುಕುತ್ತ ಹೋಗುತ್ತಾನೆ. ಈತ ಹುಟ್ಟಿದ ದಿನ ಬಾದ್ರಪದ ಶುದ್ಧ ಅಷ್ಟಮಿ. ಅಂದು ಅಗಸರು ಗಂಗಾ ಮಾತೆಯನ್ನು ಪೂಜಿಸುತ್ತಿದ್ದರು. ಹೊಳೆಯ ದಂಡೆಯಲ್ಲಿ ಹದಿಹರೆಯದ ಚೆಲುವಿ ಪುಕರ್ಣಿಕ ಎಂಬುವವಳನ್ನು ಕತ್ತೆ ಕಾಯಲು

ಬಿಟ್ಟಿರುತ್ತಾರೆ. ಮಾರಿಯ ಮಗನ ಕಣ್ಣು ಅವಳ ಮೇಲೆ ಬೀಳಲು ಕುದುರೆ ತರಬಿ ಅವಳನ್ನು ಕಾಡಿಸುತ್ತಾನೆ. ಆಕೆ ಚೀರಾಡಲು ಅಗಸರು ಬಂದು ಇವನನ್ನು ಹೊಡೆದು ಕೊಂದು ಹೆಣವನ್ನು ಕಲ್ಲಿನ ಕೆಳಗಿಟ್ಟು ಹೋಗುತ್ತಾರೆ.

ಇನ್ನೊಂದು ಉಪಕಥೆಯ ಪ್ರಕಾರ ಹುಟ್ಟಿದ ತಕ್ಷಣ ಜೋಕುಮಾರ ತನ್ನ ತಾಯಿಯನ್ನೇ ಮೋಹಿಸಲು ಪ್ರಾರಂಭಿಸಿದ್ದರಿಂದ ಚಂಡು ಕಡಿದು ಒಗೆದವಳೆಂಬ ಪ್ರತೀತಿ ಇದೆ.

**೫.೪. ಜೋಕುಮಾರನ ದಂತ ಕಥೆ ೨**

ಬಹಳ ದಿನಗಳಿಂದ ಜೋಕ ಋಷಿ ಮತ್ತು ಗೌರಿಗೆ ಮಕ್ಕಳಾಗಿರುವುದಿಲ್ಲ. ಅವರು ಶಿವನಲ್ಲಿ ಬೇಡಿಕೊಳ್ಳಲು,ಶವನು ಏಳದಿನ ಆಯುಷ್ಯವುಳ್ಳ ಮಗನನ್ನು ದಯಪಾಲಿಸುತ್ತಾನೆ. ಹುಟ್ಟಿದ ಕೂಡಲೆ ಮಗು ತಿರುಗಾಡುವುದು. ಮಾತನಾಡುವುದು ಕಲಿಯುತ್ತದೆ. ನಾಡೆಲ್ಲ ಸುತ್ತಿ ಮಳೆ ತರಿಸುತ್ತಾನೆ. ಹುಟ್ಟಿನಿಂದಲೇ ಅತಿಕಾಮಿಯಾದ ಜೋಕುಮಾರನು ಚಂಡಿನಾಟವಾಡುತ್ತ ಹೋಗಿ ಅಗಸರ ಹೆಣ್ಣನ್ನು ಮೋಹಿಸುತ್ತಾನೆ. ಅವಳ ತಂದೆ ಈತನನ್ನು ಕೊಂದು ರುಂಡವನ್ನು ಕಲ್ಲ ಕೆಳಗಿಟ್ಟು ಧಂಡವನ್ನು ಹೊಳೆಗೆ ಕೂಡಿಸುತ್ತಾನೆ. ಅರಬಿ ಒಗೆಯಲು ಬಂದ ಅಗಸರ ಹೆಂಗಸರು ಅದು ದೇವರೆಂದು ತಿಳಿದು ಪೂಜಿಸುತ್ತಾರೆ. ಮಳೆ ಬೆಳೆ ತರುವ ದೇವತೆಯೆಂದು ಹೇಳಿ ಆರಾಧಿಸುತ್ತಾರೆ. ಅಂದಿನಿಂದಲೇ ಜೋಕುಮಾರನ ಹಬ್ಬ ಆಚರಣೆಯಲ್ಲಿ ಬಂದಂತೆ ತೋರುತ್ತದೆ.

**೫.೫. ಜೋಕುಮಾರನ ದಂತ ಕಥೆ ೩**

ಪಾರ್ವತಿಗೆ ಗಣಪ್ಪ, ಚಂದಪ್ಪ, ಸೂರ್ಯ, ಮನ್ಮಥ ಮತ್ತು ಜೋಕುಮಾರರೆಂಬ ಐದು ಜನ ಮಕ್ಕಳಿರುತ್ತಾರೆ. ಒಮ್ಮೆ ಶ್ರೀಮಂತರ ಮನೆಗೆ ಊಟಕ್ಕೆ ಹೋಗಿರುತ್ತಾರೆ. ಊಟ ಮಾಡುವಾಗ ಚಂದಪ್ಪನಿಗೆ ತಾಯಿಯ ನೆನಪಾಗಿ ಊಟವನ್ನು ಹೇಗೆ ಒಯ್ಯಬೇಕೆಂದು ಆಲೋಚಿಸಿ, ತನ್ನ ಕೈ ಉಗುರಿನಲ್ಲಿ ಎಲ್ಲ ತರಹದ ಆಹಾರವನ್ನು ತರುತ್ತಾನೆ. ಉಂಡು ಮನೆಗೆ ಬಂದ ಮಕ್ಕಳಿಗೆ ನನಗೇನು ತಂದಿರಿ ಎಂದು ತಾಯಿ ಕೇಳಲು, ಎಲ್ಲರ ಕಣ್ಣುಗಳು ನೆಲ ಬರೆಯುತ್ತವೆ. ಚಂದಪ್ಪ ತಾಟು ತರಲು ಹೇಳಿ ತಾನು ಉಗುರಿನಲ್ಲಿ ತಂದ ತಿಂಡಿತಿನಿಸುಗಳನ್ನೆಲ್ಲ ಅದರಲ್ಲಿ ಹಾಕಿದಾಗ, ತಾಯಿ ಸಂತೋಷದಿಂದ ಊಟ ಮಾಡಿ ಹೀಗೆ ಹರಸುತ್ತಾಳೆ. ಚಂದಪ್ಪ ನೀನು ತಂಪೊತ್ತಿನಲ್ಲಿ ಹೋಗಿ ತಂಪೊತ್ತಿನಲ್ಲಿ ಬಾ, ಸೂರ್ಯ ನೀನು ಉರಕೊಂತ ಹೋಗಿ ಉರಕೊಂತ ಬಾ, ಮನ್ಮಥ ನೀನು ಹುಟ್ಟಿದ ಮರುದಿನವೇ ಹೊಲೆಯರಿಂದ ಸುಡಿಸಿಕೊಂಡು ಸಾಯಿ, ಜೋಕುಮಾರ ನೀನು ಏಳು ದಿನಕ್ಕೆ ಅಗಸರಿಂದ ತಲೆ ಒಡೆಯುವಂತೆ ಹೊಡೆಯಿಸಿಕೊಂಡು ಸಾಯಿ ಎಂದಳು. ಈ ಮೇಲಿನಂತೆಯೇ ಇಂದು ಎಲ್ಲ ಹೀಗೆ ಜೋಕುಮಾರನನ್ನು ಕುರಿತು ಅನೇಕ ಜನಪದ ದಂತ ಕಥೆಗಳು ಕಂಡು ಬರುತ್ತದೆ. (ಗೊಳಸಂಗಿ,ಅರ್ಜುನ್:೧೯೯೫:೧೦೫-೭). ಇವನ ಬಗ್ಗೆ ಇರಿಸಿಕೊಂಡ ನಂಬಿಕೆಗಳು ಈ ಕೆಳಗಿನಂತಿವೆ.

೧. ಜೋಕುಮಾರನನ್ನು ಪೂಜಿಸಿದ ಬಂಜೆಯರಿಗೆ ಮಕ್ಕಳಾಗುತ್ತವೆ.

೨. ಜೋಕುಮಾರನ್ನು ಮಳೆ ಬೆಳೆಯನ್ನು ತರುವನು.

೩. ಜೋಕುಮಾರನನ್ನು ಹೊತ್ತು ತಂದವರಿಗೆ ಕಾಳುಕಡಿವನ್ನು ಜನರು ನೀಡುವರು. ಅವರು ನಾಲ್ಕು ಕಾಳು ಮತ್ತು ಬೇವಿನ ತಪ್ಪಲುವನ್ನು ಕೊಡುವರು. ಅದನ್ನು ಧಾನ್ಯದಲ್ಲಿ ಕೂಡಿಸಿದರೆ ಹುಳು ಹತ್ತುವುದಿಲ್ಲ. ಹೊಲಗದ್ದೆಗಳಿಗೆ ಉಗಿದರೆ ಫಸಲು ಸಮೃದ್ಧವಾಗಿ ಬರುವುದು.

೪. ಜೋಕುಮಾರನನ್ನು ಹೊತ್ತು ತಂದವರಿಗೆ ಮೆಣಸಿನಕಾಯಿ, ಉಪ್ಪುನೀಡಿದರೆ ಮನೆಯಲ್ಲಿ ತಗಣಿ, ಚುಕ್ಕಡ ನಾಶವಾಗುತ್ತವೆ

೫. ಜೋಕುಮಾರನ ಬಾಯಿಯ ಬೆಣ್ಣೆ ಕಣ್ಣಿಗೆ ಹಚ್ಚಿಕೊಂಡರೆ ಕಣ್ಣು ತಂಪಾಗಿರುವವು.

## ೬. ಗಾದೆಗಳು

೧."ಗಾದೆ ವೇದಕ್ಕೆ ಸಮ". ವೇದ ಸುಳ್ಳಾದರು ಗಾದೆ ಸುಳ್ಳಾಗದು. ಗಾದೆಗಳು ಒಂದು ಸಮಾಜದ ಮೌಲ್ಯಗಳನ್ನು ಎತ್ತಿ ತೋರಿಸುವ ಮಾಧ್ಯಮವಾಗಿದೆ. ಊಟಕ್ಕೆ ಮೊದಲು ಉಪ್ಪಿನಕಾಯಿಯಂತೆ ಮಾತಿಗೆ ಮೊದಲು ಗಾದೆಗಳನ್ನು ಬಳಸುತ್ತಾರೆ. ಗಾದೆಗಳು ಜೀವನದ ಅನುಭವಗಳನ್ನು ಒಳಗೊಂಡ ಒಂದು ಸಣ್ಣ ಘಟಕ. ಗಾದೆಗಳು ಗಾತ್ರದಲ್ಲಿ ಚಿಕ್ಕದಾಗಿದ್ದರೂ ಅರ್ಥದಲ್ಲಿ ಘನತೆಯನ್ನು ಹೊಂದಿರುತ್ತದೆ. ಇವು ಪುರಾಣ, ಇತಿಹಾಸ, ಸಂಸ್ಕೃತಿಯ ಆಚಾರ ವಿಚಾರ ಲೋಕನೀತಿ ಮೊದಲಾದವುಗಳನ್ನು ಹೊಂದಿರುತ್ತವೆ. ಈ ಕೆಳಗಿನ ಗಾದೆಗಳು ಆ ಸಮುದಾಯವನ್ನು ಸೂಚಿಸುವಂತಹವುಗಳಾಗಿವೆ.

೨."ಅಗಸರ ಬಡಿವ್ಯಾರ ಬಟ್ಟಿಮ್ಯಾಲ ಬೆಸ್ತನ ಬಡಿವ್ಯಾರ ದೋಣಿ ಮ್ಯಾಲ" ಇದು ಬೆಸ್ತ ಸಮುದಾಯವನ್ನು ಹಾಗೂ ಅವರ ವೃತ್ತಿಯನ್ನು ಸೂಚಿಸುವುದು. ಅಗಸನಾದವನಿಗೆ ಬಟ್ಟೆಯ ಮೇಲಿರುವ ಒಣಹೆಮ್ಮೆ, ಆಡಂಬರತೆಯನ್ನು ಗುರುತಿಸುವುದು. ಹಾಗೆ ಬೆಸ್ತನಿಗೆ ತನ್ನ ದೋಣಿಯ ಮೇಲಿನ ಪ್ರತಿಯಿಂದ ಅದರಿಂದಾದ ನಷ್ಟಕ್ಕಾಗಲಿ, ಲಾಭಕ್ಕಾಗಲಿ ಲಕ್ಷವಹಿಸದೆ ಅದರ ಬಡಾಯಿಯನ್ನೆ ಹೇಳುವರು. ತನ್ನ ವೃತ್ತಿಯು ಜೀವನದ ಮೂಲಾಧಾರವಾದ ಇದನ್ನು ಎಂದೂ ತುಚ್ಛವಾಗಿ ಕಾಣಲಾರದೆ ಅದನ್ನು ಶ್ರೇಷ್ಠವಾಗಿ ಕಾಣುವನು.

೩."ಅಡವ್ಯಾಗ ಜಾಲಿ ಸೋಕ್ಕಬಾರುದು ಊರಾಗ ಕಬ್ಬಲಿಗ್ಯಾರ ಸೋಕ್ಕಬಾರದು" ಎಂಬ ಗಾದೆಯು ಕಬ್ಬಲಿಗ ಸಮುದಾಯವನ್ನು ಕುರಿತು ಹೇಳಲಾಗಿದೆ. ಇಲ್ಲಿ ಅಡವ್ಯಾಗ ಜಾಲಿ ಸೊಕ್ಕಬಾರದು ಎಂದರೆ ಮುಳ್ಳಿನ ಗಿಡಗಳು ಹೆಚ್ಚಾದರೆ ಜನರಿಗೆಲ್ಲ ತೊಂದರೆ ಕೊಡುತ್ತವೆ. ಆದುದರಿಂದ ಅವು ಹೆಚ್ಚಾಗಿ ಬೆಳೆಯಬಾರದೆಂದು ಹೇಳಿದಂತೆ ಊರಲ್ಲಿ ಕಬ್ಬಲಿಗ ಸಮುದಾಯದವರು ಹೆಚ್ಚಾದರೆ ಊರಿನಲ್ಲಿ ಶಾಂತಿಗೆ ಭಂಗಬಹುವುದೆಂದು ಮೇಲ್ವರ್ಗದವರು ಹೇಳಲಾದ ಗಾದೆ. ಕಡಿಮೆ ಸಂಖ್ಯೆಯಲ್ಲಿ ಜನರಿದ್ದರೆ ನಾವು ಹೇಳಿದನ್ನು ಕೇಳಿಕೊಂಡು ಇರಲು ಸಾದ್ಯ. ಸಂಖ್ಯೆ ಹೆಚ್ಚಾದರೆ ಅವರಲ್ಲಿ ರಕ್ತಗತವಾಗಿ ಬಂದಂಥ ಧೈರ್ಯವನ್ನು ಪ್ರದರ್ಶಿಸಲು ಸಿದ್ಧರಿರುತ್ತಾರೆ. ಅವರು ಸೋಕ್ಕಿದರೆ ಜನಸಂಖ್ಯೆ (ಹೆಚ್ಚಾದರೆ) ಜನರಿಗೆ ಕೆಡಾಗುವ ಸಂಭವ ಬರುವುದೆಂದು ಉನ್ನತ ವರ್ಗದವರು ಈ ಗಾದೆಯನ್ನು ಹುಟ್ಟು ಹಾಕಿದರು.

೪."ಇಂವ ನೋಡು ಜೋಕುಮಾರ ಆಗ್ಯಾನ" ಎಂಬ ಗಾದೆಯು ಜೋಕುಮಾರನ ಕುರಿತು ಹೇಳಲಾಗಿದೆ. ಈತನು ಟೋಕ್ರೆ ಕೋಳಿ ಸಮುದಾಯದ ಪರವಾಗಿ ಹೋರಾಟ ಮಾಡಿದ ವ್ಯಕ್ತಿ. ಈತನನ್ನು ಏಳು

ದಿವಸಗಳವರೆಗೆ ಕೂಡಿಸಿ ತಲೆಯ ಮೇಲೆ ಹೊತ್ತು ಮನೆ ಮನೆಗೆ ಹೋಗಿ ಮೇರವಣಿಗೆ ಮಾಡುತ್ತಾರೆ. ಇವನೇ ಅವರಿಗೆ ಶ್ರೇಷ್ಠ ವ್ಯಕ್ತಿ ಅಂಥ ಮಹಾನು ವ್ಯಕ್ತಿಯನ್ನು ಉನ್ನತ ವರ್ಗದವರು ಕೀಳಾಗಿ ಕಾಣುವರು. ಈತ ಮಳೆ, ಬೆಳೆಯನ್ನು ತಂದು, ಸಮೃದ್ಧಿ ತರುವಂಥ ವ್ಯಕ್ತಿಯಾದರೂ ಕೂಡ ಇತನನ್ನು ತುಚ್ಛವಾಗಿ ಕಾಣುವ ಮನೋಭಾವನೆಯಿಂದ ಹೋಲಿಕೆ ಮಾಡಿ ಹೇಳುವರು. ಯಾರಾದರೂ ಸರಿಯಾದ ರೀತಿಯಲ್ಲಿ ಇರದಿದ್ದರೆ, ಮುಖ ಸಪ್ಪೆಗೆ ಮಾಡಿಕೊಂಡು ಓಡಾಡುತ್ತಿದ್ದರೆ. ಈ ಗಾದೆಯನ್ನು ಉಪಯೋಗಿಸುತ್ತಾರೆ.

೫.''ಜೋಕುಮಾರನಂಗ ತಲೆ ಹೆಡೆಮುರಿ ಹೊಡಿಸಿಕೊಂತಿ'' ಎಂದು ಜೋಕುಮಾರನ ಕುರಿತು ಗಾದೆಯನ್ನು ಹೇಳುವರು. ಜೋಕುಮಾರನು ಕಾಮುಕ ದೃಷ್ಟಿಯವನು. ಆದುದರಿಂದ ಇನ್ನಿತರ ಹೆಣ್ಣುಮಕ್ಕಳನ್ನು ಚುಡಾಯಿಸಿದಕ್ಕಾಗಿ ಪೆಟ್ಟು ತಿನ್ನುವನು. ಅದರಂತೆ ಸಾಮಾನ್ಯ ಜನರು ಈ ರೀತಿಯ ಕೆಲಸಕ್ಕೆ ಕೈಹಾಕಿದಾಗಲೂ, ಏನಾದರು ತುಂಟಾಟ ನಡೆಸಿದಾಗಲೂ ಈ ಮಾತನ್ನು ಹೇಳುವರು. ಆತನಂತೆ ನೀನು ಪೆಟ್ಟು ತಿನ್ನುವಂಥ ಸಂದರ್ಭ ಒದಗಬಹುದು ಎಂದು ಜಾಗರೂಕತೆ ಮೂಡಿಸುವರು.

೬.''ಜೋಕುಮಾರನಂಗ ಬೇವಿನ ಘಳ್ಯಾಗ ಹೋಗುತಿ ನೋಡು'' ಎನ್ನುವ ಗಾದೆಯು ಜೋಗುಮಾರನಂತೆ ನೀನು ಬೇಗ ಸಾವನ್ನಪ್ಪತಿ ಎಂದು ಹೇಳಲಾಗಿದೆ. ಜೋಕುಮಾರನ ಆಯುಷ್ಯ ಕಡಿಮೆ ಇರುವುದರಿಂದ, ಸಾಮಾನ್ಯ ಮನುಷ್ಯರು ಕೆಟ್ಟ ಕೆಲಸಕ್ಕೆ ಕೈ ಹಾಕಿ ತಪ್ಪು ಮಾಡುತ್ತಿರುವಾಗ ನೀನು ಆತನಂತೆ ಬೇಗ ಸಾವನ್ನು ಹೊಂದಬೇಕಾಗುವೆಂದು ಹೇಳುವರು.

೭.''ಇವ ಸೋಂಡ್ಯಾ (ಗಣಪ) ಗಂಡ್ಯಾ (ಜೋಕುಮಾರ) ಲೊಂಡ್ಯಾ (ಪೀರಾ) ಆಗ್ಯಾನ ನೋಡು''. ಇದು ಜೋಕುಮಾರನ ಧೈರ್ಯತನವನ್ನು ಸೂಚಿಸುತ್ತದೆ. ಪ್ರಾಚೀನ ಕಾಲದಲ್ಲಿ ಜನರಿಗೆ ಬರಗಾಲ ಬಂದಾಗ ಗಣಪನಿಗೆ ಶಿವನು ಭೂಲೋಕದಲ್ಲಿ ಜನರು ಆರಾಮವಾಗಿ ಇದ್ದಾರೆಯೆ? ಎಂದು ಕೇಳಿದಾಗ ಅದಕ್ಕೆ ಗಣಪತಿ ಆರಾಮಾಗಿದ್ದಾರೆಂದು ಹೇಳಿದನಂತೆ. ಅವನ ನಂತರ ಹೋದ ಜೋಕುಮಾರ ಗಣಪ ಹೇಳುವುದು ಸರಿಯಲ್ಲ. ಅಲ್ಲಿ ಜನರು ಭೀಕರ ಬರಗಾಲದಿಂದ ನರಳುತ್ತಿದ್ದಾರೆ. ಮಳೆಇಲ್ಲ, ಬೆಳೆ ಇಲ್ಲದೆ ಒದ್ದಾಡುತ್ತಿದ್ದಾರೆ ಎಂದು ಧೈರ್ಯವಾಗಿ ತಿಳಿಸಿದನು. ಅದುದರಿಂದ ಶಿವನು ಭೂಮಿಗೆ ಮಳೆ ಬರಸಿದರಿಂದ ಜನ ಸಂತೃಪ್ತರಾಗಿ ಇರಲು ಸಾದ್ಯವಾಯಿತು. ಈ ಕಥೆಯನ್ನು ಜೋಕುಮಾರನ ಧೈರ್ಯ ಸೂಚಿಸುತ್ತದೆ.

ಇವೆಲ್ಲ ಗಾದೆಗಳು ಟೋಕ್ರೆ ಕೋಳಿ ಸಮುದಾಯಕ್ಕೆ ಸಂಬಂಧ ಪಟ್ಟವುಗಳಾಗಿವೆ. ಇವುಗಳಲ್ಲದೆ ಇನ್ನೂ ಬೇರೆ ಬೇರೆ ಗಾದೆಗಳು ಕೂಡ ಬಳಸುತ್ತಾರೆ.

**೭. ಒಡಪುಗಳು**

ಒಡಪುಗಳು ಜನಪದರ ಜಾಣ್ಮೆಯನ್ನು ಸೌಂದರ್ಯ ವಿಚಾರಗಳನ್ನು ತಿಳಿಸುತ್ತಿವೆ. ಒಡಪುಗಳು ವಿಶೇಷವಾಗಿ ಗಂಡ ಹೆಂಡಿರ ಹೆಸರುಗಳನ್ನು ಹೇಳುವಾಗ, ಬಣ್ಣಿಸಿ ಹೇಳುವ ಮಾತುಗಳು ಆಗಿರುತ್ತದೆ. ಒಡಪುಗಳ ರಚನೆಯೆಂದರೆ ದಂಪತಿಗಳಿಬ್ಬರ ಪ್ರೀತಿಯ ಸೇತುವೆಯೇ ಆಗಿವೆ. ಒಬ್ಬರನ್ನೊಬ್ಬರು ಒಂದು ಗೂಡಿಸಲು, ಮನವನ್ನು ಸಾಮಿಪ್ಯಕ್ಕೆ ತರುವ ಮಾಧ್ಯಮವೆನಿಸಿವೆ. ''ಪ್ರಾಸಬದ್ಧವಾದ ಕೆಲವು ಒಡಪುಗಳನ್ನು ಬಿಟ್ಟರೆ

ಉಳಿದವುಗಳೆಲ್ಲ ಸಂಸ್ಕೃತಿಯ ಸೌರಭ ಸೂಸುವಂತವುಗಳಾಗಿವೆ. ದಾಂಪತ್ಯ ಪ್ರೇಮದ ಹದವರಿತ ರಸಪಾಕ ಅನುಭವದ ತನಿರಸವನ್ನಿಯುವುದು''. ''ಜನಪದರ ದಾಂಪತ್ಯ ಪ್ರೇಮದ ರಸನಿಮಿಷಗಳನ್ನು ರಚಿಸಿ ಹೇಳುವ ಮಾಧ್ಯಮಗಳಿಗೆ ಒಡಪುಗಳೆಂದು ಕರೆಯುವರು. ಒಡಪು ಹಾಕಿ ಒಡಪಿಟ್ಟು ಹೆಸರು ಹೇಳುವುದು ಎಂದು ಕರೆಯುತ್ತಾರೆ. ಜೀವನದ ಸಿಹಿ ಕಹಿ ಅನುಭವಗಳ ಚಿತ್ರಣ ಒಡಪುಗಳಿಂದ ದೊರೆಯುತ್ತದೆ. ಇವು ದಾಂಪತ್ಯ ಜೀವನದ ಸುಖ ದುಃಖಗಳ ಸಂಗಮ ಕ್ಷೇತ್ರದಂತೆ. ಅವುಗಳ ಸ್ವರೂಪ ಇಂತಹದೇ ಎಂದು ಹೇಳಲಿಕ್ಕೆ ಬಾರದು''. ಲತ್ತೆ, ಎಂ.ಎಸ್.,೧೯೭೯,೯೧೯೨

೧ ಕಟ್ಟೆಮ್ಯಾಲ ಕರಾ ಉತ್ತತ್ತಿಸರಾ
ನನಗೂ ನಮ್ಮವರಿಗೂ ಭಲೆವರಾ.....

೨ ಕಟಕ ರೊಟ್ಟಿ ಚಿಟ ಖಾರ
ಕಟಕೊಂಡ ಹೋಗಂದ್ರ ಸೆಟ್ಟಗೊಂಡ ಹೋಗತಾರ....

೩ ಉದ್ರು ಉದ್ರು ಬಾನ ಉದ್ದಿನ ಹಪ್ಪಳ
ಕಾಸಿನ ತುಪ್ಪ ಕಂಬಳ ಹೂವ
ಬಗ್ಗಿ ನೀಡಕಿ ಇರಮ್ಮ
ಹಿಗ್ಗಿಲಿ ಉಂಬವ.....

೪ ಸೈಕಲ್ ಮ್ಯಾಲ ಇರೋದು ಸರಸ್ವತಿ
ಪಂಕದ ಮ್ಯಾಲ ಇರೋದು ಪಾರ್ವತಿ
ಏಕಾಂತದಲ್ಲಿ ಕೂತಗೊಂಡು
ಶ್ರೀಕಾಂತಿ ಚಾ ಅಂತ ಕರಿತಾರ......

೫ ಕಂಚಿನ ಹೂವ ಕಮಲದ ಹೂವ
ಮಂಚದ ಮ್ಯಾಲ ಕುಂತು
ಮಾತಾಡಸ್ತಾರ.......

೬ ತೆಳ್ಳನ ರೊಟ್ಟಿ ಬೆಳ್ಳನ ಮೊಸರು
ನೆಳ್ಳಾಗಿ ಕುಂತಗೊಂಡು
ನೆಯ್ಯಾರಿ ಮಾಡತ್ತಾರ......

೭ ಅಂಗೈಯಾಗ ಆರಗಿಣಿ
ಮುಂಗೈಯ್ಯಾಗ ಮೂರಗಿಣಿ
ಅಂಗಳದಾಗ ನಿಂತಗೊಂಡು
ಅಕ್ಕತಂಗ್ಯಾರಗಿ ಕರಿತಾರ......

೮ ಸಾವಿರ ಕೊಟ್ಟಿಲ್ಲ ಸರಗಿ ಇಟ್ಟಿಲ್ಲ
ಸಾವಕಾರ್‍ರ ಹೆಸರ ಹೇಳ್ತೇವಿ ಸಾವಕಾಶ

೯ ಹತ್ತು ಅಂಕಣದ ಅರಮನೆ

ಮೂರು ಅಂಕಣದ ಪಡಸಲಿ
ತಾಟು ಇಕ್ಕಿ ಊಟಕ್ಕ ನೀಡಿದ್ರ
ಬೂಟ ಹಾಕ್ಕೊಂಡು ಪ್ಯಾಟಿಗಿ ಹೋಗತಾನ.....

೧೦ ಗುರು ಇದ್ದ ಮಠ ಚಂದ
ಹಿರ್ಯಾ ಇದ್ದ ಮನಿಚಂದ
ಗರತಿಯಿದ ನನ್ನ ಬಾಳೆಚಂದ......

೧೧ ತಗಣಿ ಮ್ಯಾಗ ಕುಂತು
ತವರಿಗಿ ಹೋಗ್ತಾಳೆ....

೧೨ ಹಗ್ಗದಿಂದಲಿ ಹೊಡೆದರೆ
ಮಗ್ಗಲಿಗಿ ಬರತ್ತಾಳೆ...

೧೩ ಅಡ್ಡಣಿಗಿ ಮ್ಯಾಲ ಕುಂತ
ಗೊಡ್ಡೆಮ್ಮಿ ಹಿಂಡತಾಳ

೧೪ ಉಂಗುರ ಕೂದಲು
ಬಂಗಾರ ಬೈತಲ
ಅಂಗಳದಾಗ ಕೂಂತ
ಕೌದಿ ಹೊಲೀತಾಳ....

## ಆಧಾರ ಗ್ರಂಥಗಳು


೧. ಅರ್ಜುನ ಯ. ಗೊಳಸಂಗಿ., ೧೯೯೫, *ಗೊಳಸಂಗಿ ಗ್ರಾಮ:ಒಂದು ಸಾಂಸ್ಕೃತಿಕ ಅಧ್ಯಯನ*, ಗೊಳಸಂಗಿ, ಮಲ್ಲಿಕಾರ್ಜುನ ಪ್ರಕಾಶನ
೨. ಶೋಭಾ(೩೦)., ಎಮ್ ಮಾರ್ಜಪೂರ, ಬೀದರ ತಾಲೂಕು ೩.೫.೨೦೦೦
೩. ಹಣಮವ್ವ ಅರ್ಜುನ(೪೫)., ಕಮಠಾಣ, ೪.೪.೨೦೦೧
೪. ಸರಸ್ವತಿ ಬಂಡೆಪ್ಪಾ ಜಮಾದಾರ(೫೫).,ಹಲಸಿ, ೧೦.೨.೨೦೦೨
೫. ಸರುಬಾಯಿ ಜಮಾದಾರ(೪೫).,ಹಲಸಿ, ೧೦.೨.೨೦೦೨
೬. ವಿಮಲಾಬಾಯಿ ಜಮಾದಾರ(೪೦).,ಹಲಸಿ, ೧೦.೨.೨೦೦೨
೭. ಪಾರಮ್ಮಾ ತುಕ್ಕಪ್ಪಾ(೫೦).,ಬುದೇರಾ, ೧೦.೪.೨೦೦೨
೮. ಚಂದ್ರಭಾಗಾ ಬಕ್ಕಪ್ಪಾ(೪೧).,ಬುದೇರಾ, ೧೦.೪.೨೦೦೨
೯. ಲಠ್ಠೆ,ಎಂ,ಎಸ್.,೧೯೭೯, *ಜನಪದ ದಿಪ್ತಿ ೧*, ಹುಬ್ಬಳ್ಳಿ, ಮನೋಹರ ಪಬ್ಲಿಕೇಶನ್ಸ್.
೯. ಶಿವಮ್ಮಾ ಮಾಣಿಕಪ್ಪಾ ಜಮಾದಾರ(೭೦).,ಹಲಸಿ (ಎಲ್), ೧೨.೪.೨೦೦೨
೧೦. ಸಂಗಮೇಶ ಜಮಾದಾರ(೧೮).,ಹಲಸಿ, ೧೨.೧೦.೨೦೦೨
೧೧. ಪದ್ಮಾವತಿ ಜಮಾದಾರ(೨೪).,ಹಲಸಿ, ೧೭.೧೦.೨೦೦೨

# ಅಧ್ಯಾಯ ೬

# ಸಮಸ್ಯೆಗಳು, ಸಂಘಟನೆಗಳು ಮತ್ತು ಪರಿಹಾರೋಪಾಯಗಳು

೧. ಸಾಮಾಜಿಕ ಮತ್ತು ಧಾರ್ಮಿಕ ಸಮಸ್ಯೆಗಳು

೨. ಶೈಕ್ಷಣಿಕ ಸಮಸ್ಯೆಗಳು

೩. ವೃತ್ತಿ ಸಮಸ್ಯೆಗಳು

೪. ಜಾತಿ ಪ್ರಮಾಣ ಪತ್ರದ ಸಮಸ್ಯೆ

# ಅಧ್ಯಾಯ ೬
# ಸಮಸ್ಯೆಗಳು, ಸಂಘಟನೆಗಳು ಮತ್ತು ಪರಿಹಾರೋಪಾಯಗಳು

ಸಮಾಜವು ಒಂದು ಜೀವಂತ ವಾಹಿನಿ ಹೊರತು, ಜಡವಲ್ಲ, ಸ್ಥಾವರವಲ್ಲ. ಆದ್ದರಿಂದ ಇದು ಚಲನಶೀಲ. ಟೋಕ್ರೆ ಕೋಳಿ ಬುಡಕಟ್ಟಿನ ಸಾಮಾಜಿಕ ಚಲನೆಯನ್ನು ಗಮನಿಸಿದಾಗ ಜನಸಂಖ್ಯೆ, ಸಂಸ್ಕೃತಿ, ನಂಬಿಕೆ, ಆಚಾರ, ಸಂಪ್ರದಾಯಗಳಲ್ಲಿ, ನಿರಂತರವಾದ ವ್ಯತ್ಯಾಸವನ್ನು ಕಂಡು ಬರುತ್ತದೆ. ಇದಕ್ಕೆ ವಸಾಹತೀಕರಣ, ನಗರೀಕರಣ ಹಾಗೂ ಔದ್ಯೋಗಿಕರಣಗಳೇ ಕಾರಣವಿರಬಹುದು. ಇವು ಜನರ ಜೀವನದಲ್ಲಿ ಅಭಿವೃದ್ಧಿ ತಂದಿದ್ದಲ್ಲದೆ, ಕೆಲವು ದುಷ್ಪರಿಣಾಮಗಳು ಕೂಡ ಉಂಟು ಮಾಡಿದವು. ಸವಲತ್ತು ಹೆಚ್ಚಾದಂತೆ ಮಾನವ ಮೈಗಳ್ಳನಾಗುತ್ತಾನೆ. ದುಡಿಯಲು, ಶ್ರಮ ಪಡಲು ಹಿಂಜರಿಯುತ್ತಾನೆ. ಇವೆಲ್ಲ ಕಾರಣಗಳಿಂದ ಅನೇಕ ಸಮಸ್ಯೆಗಳು ಉದ್ಭವವಾಗುತ್ತದೆ.

## ೧. ಸಾಮಾಜಿಕ ಮತ್ತು ಧಾರ್ಮಿಕ ಸಮಸ್ಯೆಗಳು

ಟೋಕ್ರೆಕೋಲಿ ಬುಡಕಟ್ಟು ಸಮುದಾಯದವರು ಮುಗ್ಧ ಮತ್ತು ಸರಳ ಜೀವಿಗಳು. ಇವರು ತಮ್ಮದೆಯಾದ ಸಾಂಸ್ಕೃತಿಕ ಬದುಕನ್ನು ಅಳವಡಿಸಿಕೊಂಡಿದ್ದವರು. ಪ್ರಸ್ತುತದಲ್ಲಿ ಅನ್ಯ ಜನರ ಸಂಪರ್ಕ ಹೆಚ್ಚಾದಂತೆ ಇವರ ಸಾಮಾಜಿಕ ಜೀವನದಲ್ಲಿ ಬದಲಾವಣೆಯನ್ನು ಕಂಡು ಬರುತ್ತವೆ. ಒಂದು ಸಮುದಾಯದಲ್ಲಿ ಬದಲಾವಣೆ ಕಾಣಬೇಕಾದರೆ ಅದು ಒಮ್ಮಿಂದೊಮ್ಮೆಲೆ ಆಗುವಂಥದಲ್ಲ. ಅದಕ್ಕೆ ಅದರದ್ದೇ ಆದ ಕಾಲಾವಕಾಶ ಬೇಕಾಗುತ್ತದೆ.

ಪ್ರಾಚೀನ ಕಾಲದಲ್ಲಿ ಬೇಟೆಯೇ ಇವರ ಮೂಲ ಬದುಕಾಗಿತ್ತು. ದಟ್ಟವಾದ ಕಾಡ ಇರುವುದರಿಂದ ಬೇಟೆಯಾಡಲು ಅನುಕೂಲವಾಗಿತ್ತು. ಬೇಟೆಯಾಡಿ ತಂದ ಪ್ರಾಣಿಗಳನ್ನು ಸಮುದಾಯದವರೆಲ್ಲ ಹಂಚಿ ತಿನ್ನುತಿದ್ದರು. ನೀರಿನಲ್ಲಿಯ ಜಲಚರಗಳನ್ನು ಬೇಟೆಮಾಡಿ ಬದುಕುತಿದ್ದರು. ಕಾಲಾಂತರದಲ್ಲಿ ಬಲೆಗಳ ಸಹಾಯದಿಂದ ಮೀನುಗಳನ್ನು ಹಿಡಿಯಲು ಟೋಕ್ರೆಯನ್ನು ಕಂಡುಕೊಂಡರು. ಈ ಟೋಕ್ರೆ(ಬುಟ್ಟಿ)ಗಳೇ ಮುಂದೆ ಜನರನ್ನು ನೀರಿನಲ್ಲಿ ಒಂದು ದಡದಿಂದ ಇನ್ನೊಂದು ದಡಕ್ಕೆ ಸಾಗಿಸಲು ಅನುಕೂಲ ಮಾಡಿ ಕೊಟ್ಟಿದ್ದವು. ಕಾಲಾಂತರದಲ್ಲಿ ಇಲ್ಲಿಯೂ ಕೂಡ ತೃಪ್ತಿ ಇಲ್ಲದಂತಾಗಿ ಕೃಷಿ ಹಾಗೂ ಕೃಷಿಯೇತರ ಕೆಲಸಗಳಿಗೆ ವಾಲುತ್ತಿರುವುದನ್ನು ಕಾಣಬರುತ್ತದೆ.

ಪ್ರಾಚೀನ ಕಾಲದಲ್ಲಿ ಬೇಟೆಗಾರಿಕೆ ಚಾಲನೆಯಲ್ಲಿದ್ದಾಗ ಮಾತೃಪ್ರಧಾನ ಕುಟುಂಬಗಳೇ ಇದ್ದವೆಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ಪ್ರಸ್ತುತದಲ್ಲಿ ಪಿತೃ ಪ್ರಧಾನ ಕುಟುಂಬ ಅಸ್ತಿತ್ವದಲ್ಲಿದ್ದು ಅವಿಭಕ್ತ

ಕುಟುಂಬಗಳ ಬದಲಾಗಿ ವಿಭಕ್ತ ಕುಟುಂಬಗಳೇ ಅಧಿಕವಾಗಿವೆ. ಇವರಲ್ಲಿಯ ಸರಾಸರಿ ಕುಟುಂಬದ ಗಾತ್ರ ೬ ಜನರಿಂದ ಕೂಡಿದೆ. ಶೇಕಡ ೫೨ರಷ್ಟು ಜನರು ಮದುವೆಯಾಗದವರು, ೪೪ರಷ್ಟು ಮದುವೆಯಾದವರು, ೪ರಷ್ಟು ಜನರು ವಿಧವೆ ಮತ್ತು ವಿಧುರರಿರುವುದು ಪ್ರಸ್ತುತ ಸಮೀಕ್ಷೆಯಿಂದ ತಿಳಿದು ಬರುತ್ತದೆ. ಗಂಡ ಬಿಟ್ಟಂತ ವಿಚ್ಛೇದನೆಗೊಂಡವರ ಹಾಗೂ ಬೇರ್ಪಡೆಗೊಂಡವರ ಸಂಖ್ಯೆ ಹೆಚ್ಚಾಗಿ ಕಂಡು ಬರುವುದಿಲ್ಲ.

ಇವರಲ್ಲಿ ಕುಟುಂಬದ ಆಸ್ತಿಗೆ ಗಂಡು ಮಗನೆ ವಾರಸುದಾರ. ಮನೆಯ ಹಿರಿಯ ಮಗನೆ ಮನೆಯ ಜವಾಬ್ದಾರಿಯನ್ನು ಹೊತ್ತಿರುತ್ತಾನೆ. ಹೆಣ್ಣುಮಕ್ಕಳಿಗೆ ಆಸ್ತಿಯಲ್ಲಿ ಪಾಲುದಾರಿಕೆ ಇಲ್ಲ. ಆಕೆ ಗಂಡನ ಮನೆಯ ಆಸ್ತಿಯಲ್ಲಿ ಭಾಗಿದಾಳಾಗುವಳು. ಟೋಕ್ರೆ ಕೋಳಿ ಸಮುದಾಯದವರು ಈ ರೀತಿಯ ನಿಯಮ ಬದ್ಧವಾದ ಜೀವನವನ್ನು ತಮ್ಮ ಹಿರಿಯರ ಕಾಲದಿಂದಲೇ ರೂಢಿಸಿಕೊಂಡು ಬಂದವರು. ತಮ್ಮ ಮಧ್ಯ ಏನಾದರೂ ವ್ಯಾಜ್ಯಗಳು ಉಂಟಾದರೆ ಅವರು ಕೋರ್ಟು ಕಚೇರಿಗಳಿಗೆ ಹೋಗದೆ ಊರಿನ ಮುಖಂಡನ ಸಮ್ಮುಖದಲ್ಲಿ ಪರಿಹಾರ ಕಂಡುಕೊಳ್ಳತ್ತಿದ್ದರು. ಇಂದು ಇದು ಕಣ್ಮರೆಯಾಗುತಿದೆ.ಇಂತಹ ಉತ್ತಮ ಸಾಮಾಜಿಕ ಹಿನ್ನೆಲೆಯಲ್ಲಿ ಸಾಗಿಬಂದ ಟೋಕ್ರೆ ಕೋಳಿ ಬುಡಕಟ್ಟು ತನ್ನ ಹಳೆಯ ಮೌಲ್ಯಗಳಿಂದ ವಿಚಲಿಸುತ್ತಲಿದೆ.

ಟೋಕ್ರೆ ಕೋಳಿ ಸಮುದಾಯದ ಕೆಲವು ವೃತ್ತಿಗಳು ಕೆಳಮಟ್ಟದಾಗಿವೆ. ಇನ್ನೂ ಉಚ್ಚ ಜಾತಿಯವರ ಮದುವೆ ಮುಂಜುವೆ ಮುಂತಾದ ಶುಭಕಾರ್ಯಗಳಲ್ಲಿ ಬಂಧು ಬಳಗದವರೆಲ್ಲ ಊಟ ಮಾಡಿ ಇಟ್ಟ ಮುಸುರೆಯ ಪಾತ್ರೆಗಳನ್ನು ತಿಕ್ಕುವರು. ಶ್ರಮಕ್ಕೆ ಪ್ರತಿಫಲವಾಗಿ ಕೊಟ್ಟ ಅನ್ನವನ್ನು ಮನೆಯವರೆಲ್ಲ ಊಟ ಮಾಡುವರು. ಇದು ಬೇರೆ ಜನರಿಗೆ ಕೀಳಾಗಿ ಕಂಡರೂ ಇವರಿಗೆ ಅಂದಿನ ದಿವಸ ತಮ್ಮ ಮನೆಯವರಿಗೆ ಮದುವೆಯ ಮನೆಯಲ್ಲಿ ಊಟ ಸಿಗುವುದೆಂದು ಕೀಳಾಗಿ ಕಂಡರೂ ಈ ಕೆಲಸ ಮಾಡುವರು. ಇದಕ್ಕೆ ಬಡತನವೇ ಕಾರಣ.

ಹಿಂದೆ ಇವರು ಸಿಂದಿ ಬನ ಕಾಯುತಿದ್ದರು. ಸಿಂದಿಗಾಗಿ ಬನಗಳನ್ನು ಗುತ್ತಿಗೆ ಹಿಡಿಯುತ್ತಿದ್ದರು. ಸಿಂದಿ ಕುಡಿಯುತಿದ್ದರು. ಈಗ ಬನಗಳೇ ಕಣ್ಮರೆಯಾಗಿವೆ. ಈ ಕಾಯಕ ಕೈತಪ್ಪಿದೆ.

ಎಕ್ಕೆಲೆ ಹಾಕುವ ಕೆಲಸ ಇವರದಾಗಿತ್ತು. ಹಳ್ಳಿಯಲ್ಲಿ ರೈತರು ಎಲೆಗಳಿಂದ ಚಿಲುಮೆ ಮಾಡಿ ಅದರಲ್ಲಿ ತಂಬಾಕು ತುಂಬಿ ಧೂಮಪಾನ ಮಾಡುತ್ತಿದ್ದರು. ಪ್ರತಿ ದಿನ ತಳವಾರರು ರೈತರ ಮನೆಗೆ ಹೋಗಿ ಎಕ್ಕೆಲೆ ಹಾಕಿ ರೋಟಿ ನೀಡಿಸಿಕೊಂಡು ಬರುತ್ತಿದ್ದರು. ಇದು ಬೇರೆಯವರಿಗೆ ಕೀಳ ಕೆಲಸವೆಂದು ಕಂಡರೂ ಇವರಿಗೆ ಅನಿವಾರ್ಯವಾಗಿತ್ತು. ಯಾಕೆಂದರೆ ರೈತರು ನೀಡಿದ ರೊಟ್ಟಿಯಿಂದ ಪ್ರತಿ ದಿನ ರಾತ್ರಿ ಮನೆಯವರೆಲ್ಲ ಊಟ ಮಾಡುತ್ತಿದ್ದರು. ಯಾವ ಕೆಲಸ ಮಾಡಿದರು ಹೊಟ್ಟೆಗಾಗಿ ಬಟ್ಟೆಗಾಗಿ ಎಂಬ ಮನೋಭಾವನೆ ಅವರಿಗಿತ್ತು. ಆದರೆ ಈ ಕೆಲಸ ಇಂದು ಕಾಣಲಾರದು. ತಯಾರಾದ ಬೀಡಿಗಳೆ ದೊರೆಯುವುದರಿಂದ ಈ ಕಾಯಕ ಕೈತಪ್ಪಿದೆ. ಹಿಂದೆ ಎಂಥ ಸಮಸ್ಯೆಗಳು ಬಂದರೂ ಎದುರಿಸುವಂಥ ಧೈರ್ಯ ಇವರಲ್ಲಿ ಕಂಡು ಬರುತಿತ್ತು.

ಟೋಕ್ರೆ ಕೋಳಿ ಸಮುದಾಯದವರಲ್ಲಿ ಸಂಪ್ರದಾಯ, ಆಚಾರಣೆ, ನಂಬಿಕೆ, ಪಶುಬಲಿ ಇತ್ಯಾದಿಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಡುವರು. ಮನೆಯಲ್ಲಿ ಮದುವೆಯಂಥ ಶುಭಕಾರ್ಯ ಮಾಡಬೇಕಾದರೆ ಮನೆ ಲಕ್ಷ್ಮೀ, ಗೊಂದಲ ಮೊದಲಾದ ಕಾರ್ಯಗಳು ಮಾಡುತ್ತಾರೆ. ಇದಕ್ಕೆ ಕುರಿಬಲಿ, ಮೇಕೆಬಲಿ ಕೊಡುವರು. ಇದು

ಕೆಲವು ಮಕ್ಕಳು ಕಷ್ಟ ಪಟ್ಟು ಶಾಲೆಗೆ ಹೋದರೂ ಪ್ರೌಢಶಿಕ್ಷಣದವರೆಗೆ ಮಾತ್ರ. ಇವರಲ್ಲಿಯ ಒಟ್ಟು ಅಕ್ಷರಸ್ಥರಲ್ಲಿ ಶೇ ೮೪.೬೪ರಷ್ಟು ಪ್ರೌಢಶಿಕ್ಷಣದ ಮೆಟ್ಟಿಲು ತುಳಿದವರು. ಅದಕ್ಕೆ ಅವರದೆಯಾದ ಸಮಸ್ಯೆಗಳಿರುತ್ತವೆ. ದುಡಿದರೆ ಮಾತ್ರ ಹೊಟ್ಟೆಗೆ ಅನ್ನ ಸಿಗುವಂಥ ಸಂದರ್ಭದಲ್ಲಿ ಶಾಲೆಗೆ ಮಕ್ಕಳನ್ನು ಕಳಿಸುವುದು ಕಷ್ಟ. ಕಲಿತೇನು ಮಾಡುವುದು? ಮನೆಗೆ ಸಂಪಾದನೆ ಬೇಕಲ್ಲವೆ? ಎನ್ನುವ ಮಾತು ಅವರಿಂದ ಬರುತ್ತವೆ. ಈ ಅಸಾಹಯಕ ಟೋಕ್ರೆ ಕೋಳಿಯವರ ಮಾತುಗಳಲ್ಲಿ ಬದಲಾವಣೆಯಾಗಬೇಕು. ಕಲಿಕೆಯ ಮೌಲ್ಯಗಳ ಅರಿವಾಗಬೇಕು. ೧೦ರಿಂದ ೧೨ ವರ್ಷಗಳಾದರೆ ಸಾಕು ಮಕ್ಕಳಿಗೆ ದನ ಕಾಯಲು, ಬೇರೆಯವರ ಮನೆಯಲ್ಲಿ ನೀರು ತರಲು, ತೋಟಕ್ಕೆ ನೀರು ಬಿಡಲು, ಹುಲ್ಲು ತರಲು ಮೊದಲಾದ ಕೆಲಸಗಳಿಗೆ ಹಚ್ಚಿ ಮಕ್ಕಳ ದುಡಿತದಿಂದ ಬಂದ ಹಣದಿಂದ ಸಮಸ್ಯೆಗಳನ್ನು ಪರಿಹರಿಸಕೊಳ್ಳುವರು.

ಶೇಕಡ ೮೪.೬೪ರಷ್ಟು ಜನರು ಪಡೆದ ಜ್ಞಾನ ಕೇವಲ ಅಕ್ಷರ ಜ್ಞಾನಕ್ಕೆ ಮಾತ್ರ ಸಹಾಯಕವಾಗುತ್ತದೆ. ಹೊರತು ಯಾವ ಉದ್ಯೋಗವನ್ನು ಪಡೆಯಲು ನೆರವಾಗುವುದಿಲ್ಲ. ಉಳಿದ ಶೇಕಡ ೧೬ರಷ್ಟು ಸಾಕ್ಷರರು ಮಾತ್ರ ಕಾಲೇಜುಗಳ ಮೆಟ್ಟಿಲನ್ನು ಹತ್ತಿದವರು. ಇವರಲ್ಲಿ ತಾಂತ್ರಿಕ ಮತ್ತು ತಾಂತ್ರಿಕೇತರ ಪದವಿ ಪಡೆದವರ ಸಂಖ್ಯೆ ಬೆರಳಣಿಕೆಷ್ಟು ಮಾತ್ರ. ಉದ್ಯೋಗಸ್ಥರ ಸಂಖ್ಯೆ ಬೆರಳಣಿಕೆಷ್ಟು ಮಾತ್ರ: ಆದ್ದರಿಂದಲೇ ಇವಲ್ಲಿ ಬಡತನ ಹೆಚ್ಚಾಗಿ ಕಂಡು ಬರುವುದು. (ವೃತ್ತ ಚಿತ್ರ ನೋಡಿ).

ಟೋಕ್ರೆ ಕೋಳಿ ಸಮುದಾಯದವರು ಸುಗ್ಗಿಯ ಸಂದರ್ಭದಲ್ಲಿ ಮಕ್ಕಳನ್ನು ಶಾಲೆ ಬಿಡಿಸಿ ಹೊಲಕ್ಕೆ ಕರೆದುಕೊಂಡು ಹೋಗುವರು. ಮಕ್ಕಳು ಜೊತೆಯಲ್ಲಿದ್ದರೆ ಹೆಚ್ಚಿನ ದವಸ ಧಾನ್ಯವನ್ನು ಸಂಗ್ರಹಿಸಲು ಸಾಧ್ಯವಾಗುವುದೆಂದು ಈ ರೀತಿ ಮಾಡುವರು. ಇದರಿಂದ ಮಕ್ಕಳಿಗೆ ಶಾಲೆಯ ಬಗ್ಗೆ ಉತ್ಸಾಹ ಕಡಿಮೆಯಾಗುತ್ತದೆ. ಶಿಕ್ಷಕರು ಕೇಳಿದ ಪ್ರಶ್ನೆಗಳಿಗೆ ಉತ್ತರ ನೀಡಲು ಅಸಮರ್ಥರಾಗುತ್ತಾರೆ. ಇಂಥ ಸಮಯದಲ್ಲಿ ಮಕ್ಕಳು ಶಾಲೆಯನ್ನು ಮುಂದೆವರಿಸಲು ಹಿಂಜರಿಯುತ್ತಾರೆ. ಅವರ ಮಾತು ಹಾಗಿರಲ್ಲಿ, ಉನ್ನತ ಶಿಕ್ಷಣ ಪಡೆದವರಿಗೂ ಈ ಕಡೆ ಉದ್ಯೋಗವು ದೊರೆಯದೆ ಆ ಕಡೆ ಇನ್ನಿತರ ಕೆಲಸವು ಬಾರದೆ ತೊಳಲಾಡುತ್ತಾರೆ. ಇವೆಲ್ಲವನ್ನು ಕಂಡ ವಿದ್ಯಾರ್ಥಿಗಳ ಪೋಷಕರು ಎಷ್ಟೋ ಜನ ಕಲಿತು ಕುಳಿತ್ತಿದ್ದಾರೆ ಅವರಿಗೆ ಉದ್ಯೋಗವಿಲ್ಲ. ನೀ ಕಲಿತೇನು ಮಾಡುತಿ ಎಂದು ನಿರುತ್ಸಾಹ ಭಾವನೆ ತಾಳಿ ಮಕ್ಕಳಿಗೆ ಉನ್ನತ ಮಟ್ಟದ ಶಿಕ್ಷಣಕ್ಕೆ ಕಳಿಸದವರೆ ಹೆಚ್ಚು ಜನರು. ಸರ್ಕಾರಿ ಉದ್ಯೋಗಗಳಲ್ಲಿ ಪರಿಶಿಷ್ಟ ಪಂಗಡದವರಿಗೆ ಎಷ್ಟು ಪ್ರತಿಶತ ಮೀಸಲಾತಿ ಇರುತ್ತದೆ ಎಂಬುದು ಕೂಡ ಅರಿಯದವರು. ಸಂವಿಧಾನ ಒದಗಿಸಿರುವ ಪ್ರಮಾಣದಲ್ಲಿ ಉನ್ನತ ದರ್ಜೆಯ ಹುದ್ದೆಗಳು ಈ ವರ್ಗದವರಿಗೆ ದೊರೆಯದೆ ಇರುವುದು. ಅತೃಪ್ತಿ ಮತ್ತು ಅಸಮಧಾನ ಉಂಟು ಮಾಡುತ್ತದೆ.

ಸ್ತ್ರೀ ಶಿಕ್ಷಣ : ಹೆಣ್ಣು ಕಲಿತೇನು ಮಾಡುವಳು ಎಂಬ ಮನೋಭಾವನೆಯಿಂದ ಆಕೆಯ ಶಿಕ್ಷಣದ ಕಡೆಗೆ ಹೆಚ್ಚಿನ ಗಮನ ಹರಿಸದೇ ಇರುವುದನ್ನು ಪ್ರಾಚೀನ ಕಾಲದಿಂದಲೂ ಕಂಡು ಬರುತ್ತದೆ. ಹೆಣ್ಣು ಸಂಸಾರದ ಕಣ್ಣು ಒಂದು ಮನೆಯಲ್ಲಿ ಗಂಡು ಓದಿದರೆ ಸಾಲದು, ಹೆಣ್ಣು ಕೂಡ ಶಿಕ್ಷಣ ಪಡೆಯಬೇಕು. ಒಂದು ಹೆಣ್ಣು ಓದಿದರೆ ಒಂದು ಕುಟುಂಬ ಸುಧಾರಿಸುವಳು ಮತ್ತು ನೆಮ್ಮದಿಯಿಂದ ಇರಲು ಸಾದ್ಯ. ಆ ಕುಟುಂಬದ

ಅಭಿವೃದ್ಧಿ ಆಕೆಯಿಂದಲೆ ಕಾಣಬಹುದು ಎಂಬುದನ್ನು ಅರಿತು ಇತ್ತೀಚಿಗೆ ಸ್ತ್ರೀ ಶಿಕ್ಷಣದ ಕಡೆಗೆ ಸ್ವಲ್ಪ ಗಮನ ಹರಿಸಿರುವುದನ್ನು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ. ಟೋಕ್ರೆ ಕೋಳಿ ಬುಡಕಟ್ಟಿನ ಕ್ಷೇತ್ರಕಾರ್ಯಗ್ಕೆ ಒಳಗೊಂಡ ಜಿಲ್ಲೆಯ ೧೫೦ ಹಳ್ಳಿಗಳಲ್ಲಿ ೭,೯೦೪ ಸಾಕ್ಷರರ್ಹ ಸ್ತ್ರೀಯರಲ್ಲಿ ೧,೪೫೧ ಸ್ತ್ರೀಯರು ಮಾತ್ರ ಸಾಕ್ಷರರಾಗಿದ್ದಾರೆ. ಅಂದರೆ ಶೇಕಡ ೧೮.೩೫ ರಷ್ಟು ಮಾತ್ರ ಸಾಕ್ಷರತೆಯನ್ನು ಹೊಂದಿದ್ದಾರೆ. ಇದರಲ್ಲಿ ಪ್ರಾಥಮಿಕ ಶಾಲೆಯಿಂದ ಪ್ರೌಢಶಾಲೆಯವರೆಗೆ ೧೩೭೯ ಸ್ತ್ರೀಯರು ಶಾಲೆಯನ್ನು ಕಲಿತವರು. ಪದವಿ ಪೂರ್ವ ಕಾಲೇಜಿನಲ್ಲಿ ೧೦೩ ಸ್ತ್ರೀಯರು ಶಿಕ್ಷಣವನ್ನು ಪಡೆದಿರುವರು. ಪದವಿಯಲ್ಲಿ ೧೭ ಜನ ವಿದ್ಯಾರ್ಥಿನಿಯರು, ತಾಂತ್ರಿಕ ಶಿಕ್ಷಣದಲ್ಲಿ ಒಂದು ಸ್ತ್ರೀ ಮಾತ್ರ ಓದುತ್ತಿರುವುದನ್ನು ತಿಳಿದು ಬರುತ್ತದೆ. ಬೀದರ ಜಿಲ್ಲೆಯಲ್ಲಿಯ ಈ ಬುಡಕಟ್ಟಿನಲ್ಲಿ ಒಟ್ಟು ಕಾಲೇಜು ಮೆಟ್ಟಿಲನ್ನು ಹತ್ತಿದಂತಹ ಸ್ತ್ರೀಯರು ಕೇವಲ ೧೨೨ ಜನ ಮಾತ್ರ. (ವೃತ್ತಚಿತ್ರ : ೪.೬ ನೋಡಿ). ಎಂಬುದು ಸಮೀಕ್ಷೆಯಿಂದ ಸ್ಪಷ್ಟಗೊಂಡಿದೆ.

**ವೃತ್ತಚಿತ್ರ : ೪.೬ ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನ ಶೈಕ್ಷಣಿಕ ಮಟ್ಟ**




ಸ್ತ್ರೀ ಶಿಕ್ಷಣದಲ್ಲಿ ಹಿಂದೆ ಬಿಳಲು ಹಲವಾರು ಕಾರಣಗಳು ಇವೆ. ಹೆಣ್ಣು ಕೇವಲ ಮನೆಯಲ್ಲಿದ್ದು ಅಡಿಗೆ ಮಾಡಿದರೆ ಸಾಕು. ಆಕೆ ಓದುವುದು ಬೇಡ ಎನ್ನುವುದರಿಂದಲೇ ಸ್ನಾತಕೋತ್ತರದಲ್ಲಿ ಒಬ್ಬರು, ತಾಂತ್ರಿಕ ಶಿಕ್ಷಣದಲ್ಲಿ ಒಬ್ಬರು ಸ್ತ್ರೀ ಮಾತ್ರ ಶಿಕ್ಷಣ ಪಡೆದಿದ್ದಾರೆ. ಉನ್ನತ ಶಿಕ್ಷಣದಲ್ಲಿ ಸ್ತ್ರೀಯರು ಕಡಿಮೆ ಜನರಿರಲು ವರದಕ್ಷಿಣೆ ಕೂಡ ಒಂದು ಕಾರಣ. ಸ್ತ್ರೀಗೆ ಓದಿಸಿದರೆ ಲಾಭವಿಲ್ಲ, ಆಕೆ ಗಂಡನ ಮನೆಗೆ ಹೋಗುವಳು. ಓದಿಸಿಯಾದರೂ ವರದಕ್ಷಿಣೆ ನೀಡಲೇಬೇಕಲ್ಲವೆ. ಎಂದು ಪ್ರೌಢಶಾಲೆ ಇಲ್ಲವೆ ಪದವಿಪೂರ್ವ ಶಿಕ್ಷಣ ಮುಗಿಸುವುದರಲ್ಲಿ ಮದುವೆ ಮಾಡುವರು. ಹೆಚ್ಚು ಜನ ಸ್ತ್ರೀಯರು ಪ್ರಾಥಮಿಕ, ಮಾಧ್ಯಮಿಕ ತರಗತಿಯವರೆಗೆ ಮಾತ್ರ ಓದುತ್ತಾರೆ. ಆಮೇಲೆ ಆಕೆ ದೊಡ್ಡವಳಾದ ನಂತರ ಶಾಲೆಗೆ ಕಳಿಸುವುದಿಲ್ಲ. ಮತ್ತೇ ಕೆಲವರು ಆರ್ಥಿಕ

ಸಮಸ್ಯೆಯಿಂದಲೂ ಶಿಕ್ಷಣ ಮುಂದುವರೆಸಲು ಆಗುವುದಿಲ್ಲ. ಕುಟುಂಬ ಯೋಜನೆ ಅಳವಡಿಸಿಕೊಳ್ಳುವುದು ಪಾಪ ಎಂಬ ಕಲ್ಪನೆ ಈ ಸಮುದಾಯದವರಲ್ಲಿ ಇರುವುದರಿಂದ ಜನಸಂಖ್ಯೆ ಹೆಚ್ಚಳ ಕಂಡು ಬರುತ್ತದೆ. ಸ್ತ್ರೀಯರು ಮನೆಯ ಕೆಲಸದಲ್ಲಿ ಸಹಾಯಕ್ಕಾಗಿ ಹಾಗೂ ಅಂತರವಿಲ್ಲದ ಮಕ್ಕಳ ಜನನದಿಂದ ಸಣ್ಣ ಮಕ್ಕಳ ಲಾಲನೆ ಪಾಲನೆಗಾಗಿ ಮಕ್ಕಳನ್ನು ಶಾಲೆಗೆ ಕಳಿಸಲಾರರು. ಈ ಎಲ್ಲಾ ಕಾರಣಗಳಿಂದ ಸ್ತ್ರೀ ಮತ್ತು ಪುರುಷರ ಶಿಕ್ಷಣದಲ್ಲಿ ಪ್ರಗತಿ ಕಾಣುವುದಿಲ್ಲ.

**ರಾಜಕೀಯ ಸಮಸ್ಯೆಗಳು :** ರಾಜಕೀಯದಲ್ಲಿ ಭಾಗವಹಿಸಲು ಟೋಕ್ರೆ ಕೋಳಿಗಳು ಹಿಂಜರಿಯುತ್ತಾರೆ. ಆದುದರಿಂದಲೇ ರಾಜಕೀಯ ಇವರಿಂದ ದೂರ ಉಳಿದಿದೆ. ಪುರೋಹಿತಶಾಹಿ ಜನ ನಿರ್ಮಿಸಿದ ದೇವರು, ಧರ್ಮಗಳ ಹೆಸರಿನಲ್ಲಿ ಮೂಢನಂಬಿಕೆ, ಕಂದಾಚಾರ, ಹಣೆಬರಹ, ಪುನರ್ಜನ್ಮ, ಸ್ವರ್ಗ, ನರಕ, ಪಾಪ, ಪುಣ್ಯ, ಕರ್ಮಸಿದ್ಧಾಂತ ನಂಬಿ ನಡೆಯುವವರಾಗಿದ್ದಾರೆ. ಇವರು ತಮ್ಮ ಆಂತರಿಕ ದುಶ್ಚಟಗಳಾದ ಕಳವು, ಕೊಲೆ, ಹಾದರ, ಜೂಜು, ಕುಡಿತಗಳಿಗೆ ಬಲಿಯಾಗಿ, ಗುಲಾಮರಾಗಿ, ಜೀತದಾಳುಗಳಾಗಿ ಸಾಯಲು ಕಾರಣವಾಗಿದೆ(ವಾಲೀಕಾರ,ಚೆನ್ನಣ್ಣ:೨೦೦೦:೩೮೨).

ಅಜ್ಞಾನ ಅನಕ್ಷರತೆಯಿಂದಾಗಿ ರಾಜಕೀಯ ಪ್ರಜ್ಞೆ ಇವರಲ್ಲಿ ಬೆಳೆಯಲಿಲ್ಲ. ಇವರು ಮತ ಹಾಕಿ ಜನರನ್ನು ಗೆಲ್ಲಿಸುವುದಾಗಲಿ, ತಾವೇ ಒಂದು ಕ್ಷೇತ್ರಕ್ಕೆ ನಿಂತು ಗೆಲ್ಲುವ ಪ್ರಯತ್ನ ಮಾಡಲಿಲ್ಲ. ಇದಕ್ಕೆ ಬಡತನ, ದಾಸ್ಯತ್ವ, ಋಣಾನುಬಂಧ ಮೊದಲಾದವುಗಳು ಕಾರಣವಾಗಿರುವವು.

ಪ್ರಸ್ತುತದಲ್ಲಿ ಹಲವಾರು ಜನರು ರಾಜಕೀಯದಲ್ಲಿ ಭಾಗವಹಿಸುವುದಲ್ಲದೆ, ಸ್ಪರ್ಧಿಸಿ ಆಯ್ಕೆಗೊಂಡಿರುವರು. ತೂಲೂಕ, ಮಂಡಲ ಮತ್ತು ಜಿಲ್ಲಾ ಪಂಚಾಯತಿಗಳಿಗೆ ಆರಿಸಿ ಬಂದಥ ಇನ್ನಿತರ ವರ್ಗದ ಸದಸ್ಯರು ಇವರಿಗೆ ಕೊಡುವ ಸ್ಥಾನಮಾನಗಳು ಕೂಡ ಹೆಚ್ಚಿನದಾಗಿರುವುದಿಲ್ಲ. ಇದರಿಂದ ಆರಿಸಿ ಬಂದಂಥ ಮಂಡಲ, ತಾಲೂಕು, ಜಿಲ್ಲಾ ಪಂಚಾಯತ ಸದಸ್ಯರಲ್ಲಿ ಕೀಳರಿಮೆ ಉಂಟಾಗುತ್ತಲಿದೆ.

ಪ್ರಸ್ತುತದಲ್ಲಿ ಮಂಡಲ ಪಂಚಾಯತಿಯಿಂದ ೧೫೦ ಜನರು, ತಾಲೂಕು ಪಂಚಾಯಿತಿಯಿಂದ ೪ ಜನರು ಟೋಕ್ರೆ ಕೋಳಿ ಪರಿಶಿಷ್ಟ ವರ್ಗದ ಮಿಸಲಾತಿಯಲ್ಲಿ ಆಯ್ಕೆಯಾಗಿದ್ದಾರೆ. ಇದಕ್ಕಿಂತ ಪೂರ್ವದಲ್ಲಿ ೧೯೭೮ ರಿಂದ ೧೯೮೩ರ ವರೆಗೆ ಹುಮನಾಬಾದ ತಾಲೂಕಿನಿಂದ ಕೃಷ್ಣಪ್ಪ ಒಳಕಿಂಡಿಯವರು ತಾಲೂಕ ಬೋರ್ಡಿನ ಅಧ್ಯಕ್ಷರಾಗಿದ್ದರು. ನಂತರ ೧೯೮೬ ರಿಂದ ೧೯೯೨ರ ವರೆಗೆ ಬಿ. ನಾರಾಯಣರಾವ್ ಜಿಲ್ಲಾ ಪಂಚಾಯಿತಿಯ ಸದಸ್ಯರಾಗಿದ್ದು ಜಿಲ್ಲಾ ಪಂಚಾಯತಿಯ ಯೊಜನಾ ಮತ್ತು ಅಭಿವೃದ್ಧಿ ಸ್ಥಾಯಿ ಸಮಿತಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೮೩ರಲ್ಲಿ ಬೀದರ ವಿಧಾನ ಸಭಾ ಕ್ಷೇತ್ರದಿಂದ ಮತ್ತು ೧೯೮೯ರಲ್ಲಿ ಬಸವಕಲ್ಯಾಣ ವಿಧಾನ ಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಸೋತಿರುತ್ತಾರೆ. ಒಬ್ಬಿಬ್ಬರನ್ನು ಬಿಟ್ಟರೆ ಸ್ವಾತಂತ್ರ್ಯ ಪಡೆದು ೫೫ ವರ್ಷಗಳು ಕಳೆದರು ಜಿಲ್ಲೆಯಲ್ಲಿ ಈ ಸಮುದಾಯದವರು ಗಣನೀಯ ಪ್ರಮಾಣದಲ್ಲಿ ರಾಜಕೀಯದಲ್ಲಿ ಭಾಗವಹಿಸಲಿಲ್ಲ.

ಒಬ್ಬ ವ್ಯಕ್ತಿ ಶೈಕ್ಷಣಿಕವಾಗಿ ಮುಂದೆ ಬಂದರೆ ಆರ್ಥಿಕವಾಗಿ ಮುಂದೆ ಬರಲು ಸಾದ್ಯ. ಆರ್ಥಿಕವಾಗಿ ಮುಂದೆ ಬಂದ ವ್ಯಕ್ತಿ ಆಸಕ್ತನಾಗಿದ್ದರೆ ರಾಜಕೀಯದಲ್ಲಿ ತಾನಾಗಿಯೇ ಮುಂದೆ ಬರುವ ಸಾದ್ಯತೆಯಿರುತ್ತದೆ. ರಾಜಕೀಯದಲ್ಲಿ ಹಿಂದೆ ಬೀಳಲು ಅನಕ್ಷರತೆ. ಜನರ ಬೆಂಬಲ. ಆರ್ಥಿಕ ಕೊರತೆ ಮತ್ತು ಸಾಮಾಜಿಕ ಕೀಳರಿಮೆ ಇವೆಲ್ಲವುಗಳು ಕಾರಣ. ಪ್ರಸ್ತುತದಲ್ಲಿ ರಾಜಕೀಯದಲ್ಲಿ ಟೋಕ್ರೆ ಕೋಳಿ ಸಮುದಾಯದವರು ಶೇಕಡ ೧೦ರಷ್ಟು

ಮಾತ್ರ ಭಾಗವಹಿಸುತ್ತಿದ್ದಾರೆ. ಇತ್ತೀಚೆಗೆ ಒಳ್ಳೆಯದು ಕೆಟ್ಟದರ ಬಗ್ಗೆ ಅರಿತುಕೊಂಡು ಇವರು ಎಲ್ಲಾ ಕ್ಷೇತ್ರಗಳಲ್ಲಿ ಸ್ಪರ್ಧಿಸಲು ಪ್ರಯತ್ನಿಸುತ್ತಿದ್ದಾರೆ. ಇನ್ನು ಹೆಚ್ಚಿನ ಮಟ್ಟದಲ್ಲಿ ಮುಂದೆ ಭಾಗವಹಿಸುವ ಸಾಧ್ಯತೆಗಳಿವೆ.

೩. ವೃತ್ತಿ ಸಮಸ್ಯೆಗಳು

ಪ್ರಾಚೀನ ಕಾಲದಿಂದಲೂ ವಂಶಪಾರಂಪರಿಕವಾಗಿ ಬಂದ ತಮ್ಮ ವೃತ್ತಿಯನ್ನೇ ಶ್ರೇಷ್ಠವೆಂದು ನಂಬಿರುತ್ತಾರೆ. ಅವು ನೋಡುವರಿಗೆ ಕೀಳಾಗಿ ಕಾಣಬಹುದು. ಆದರೆ ಅದರಲ್ಲಿಯೇ ಇವರು ಸರ್ವಸ್ವ ಕಾಣಲು ಪ್ರಯತ್ನಿಸುತ್ತಾರೆ. ತಮ್ಮ ವೃತ್ತಿಗೆ ಧಕ್ಕೆ ಬರದಂತೆ ನೋಡಿಕೊಳ್ಳುತ್ತಾರೆ. ಅದನ್ನೆ ನಂಬಿಕೊಂಡು ಜೀವನ ಸಾಗಿಸುತ್ತಾರೆ. "ಎಲ್ಲದಕ್ಕೂ ಬದುಕು ಮುಖ್ಯ. ಬದುಕಲು ಅಂಬಿಗಾರರು ಅಂದು ಆ ನೀರಿನ ವೃತ್ತಿಯನ್ನು ಕೈಗೊಂಡರು. ತಿಳುವಳಿಕೆ ಹೆಚ್ಚಾದಂತೆ, ವ್ಯವಹಾರ ಗೊತ್ತಾದಂತೆ ಇಂಥವರು ಮೊದಲಿನಂತೆ ಉಳಿದಿಲ್ಲ. ಪರದೇಶಗಳಿಗೆ ಹಡಗಿನ ಮೂಲಕ ಮೀನು ರಫ್ತು ಮಾಡುತ್ತಿದ್ದಾರೆ. ಕಲ್ಕತ್ತಾ, ಮುಂಬಯಿ, ಮಂಗಳೂರು, ಕಾರವಾರಗಳಲ್ಲಿರುವ ಮೀನಗಾರರು ಜಗತ್ತಿನಾದ್ಯಂತ ಮೀನಿನ ವ್ಯಾಪಾರ ನಡೆಸುತ್ತಾ ಸ್ಥಿತಿವಂತರಾಗಿರುವುದು ಕಂಡು ಬರುವುದು. ಆದರೆ ಇಂಥವರು ಬೆರಳಣಿಕೆಯಷ್ಟು ಮಾತ್ರ".

ಟೋಕ್ರೆ ಕೋಳಿ ಸಮುದಾಯದವರು ಬೇಟೆಗಾರಿಕೆ, ಟೋಕ್ರೆ ನಡೆಸುವ, ಮೀನುಗಾರಿಕೆ ಇವು ಇವರ ಪ್ರಮುಖ ವೃತ್ತಿಗಳು. ಇತ್ತೀಚೆಗೆ ಕಾಡಿನ ಕೊರತೆಯಿಂದಾಗಿ ಬೇಟೆಗಾರಿಕೆ ಬಹುಮಟ್ಟಿಗೆ ಕಂಡು ಬರುತ್ತಿಲ್ಲ. ಕೆಲವೊಂದು ಸಂದರ್ಭಗಳಲ್ಲಿ ಮಾತ್ರ ಬೇಟೆಯಾಡುತ್ತಿದ್ದಾರೆ. ಅನಂತರ ಟೋಕ್ರೆ ವೃತ್ತಿಯು ಸೇತುವೆ ಇಲ್ಲದ ಕಡೆಗಳಲ್ಲಿ ನದಿಯಲ್ಲಿ ಟೋಕ್ರೆಯನ್ನು ಹಾಕಿ ಜನರನ್ನು ಸಾಗಿಸುವುದು. ಇಂದು ಸಹ ಚಾಲನೆಯಲ್ಲಿದೆ. ಆದರೆ ಆಯಾ ಕಡೆಗಳೆಲ್ಲ ಸೇತುವೆ ನಿರ್ಮಾಣವಾದರೆ ಆ ವೃತ್ತಿ ಸಂಪೂರ್ಣವಾಗಿ ಕಂಡು ಬರುವುದಿಲ್ಲ. ಆ ವೃತ್ತಿಯಲ್ಲಿ ಬರುವಂಥ ಹಣ ಸಂಸಾರ ಭಾರ ಹೆಚ್ಚಾದರಿಂದ ಅದರ ಖರ್ಚನ್ನು ಕೂಡ ಸಾಕಾಗುತ್ತಿಲ್ಲ. ಆದುದರಿಂದ ಅನ್ಯ ವೃತ್ತಿಗೆ ಮಾರು ಹೋಗುತ್ತಿದ್ದಾನೆ. ಇದರಿಂದ ಟೋಕ್ರೆ ಕೋಳಿಯವರ ವೃತ್ತಿಯನ್ನು ಬೇರೆ ಬೇರೆ ಜಾತಿಯವರು ಮಾಡುತ್ತಿದ್ದಾರೆ. ಯಾಕೆಂದರೆ ಸರ್ಕಾರದವರು ಗುತ್ತಿಗೆ ಆಧಾರದ ಮೇಲೆ ಕೆರೆಗಳನ್ನು ಮೀನುಗಾರಿಕೆಗೆ ಕೊಡುತ್ತಿದ್ದಾರೆ. ಅಂಥ ಸಂದರ್ಭದಲ್ಲಿ ಆರ್ಥಿಕತೆಯಿಂದ ಹಿಂದುಳಿದ ಇವರು ಗುತ್ತಿಗೆ ಪಡೆಯಲು ಆಗುತ್ತಿಲ್ಲ. ಆದುದರಿಂದ ಮೀನುಗಾರಿಕೆಯೂ ಬಿಡುವಂತಾಗಿದೆ.

ಹೊಳೆ, ಹಳ್ಳ, ಕೆರೆ, ಕಾಲುವೆಗಳಲ್ಲಿ ಬಲೆ ಬೀಸಿ ಮೀನು ಹಿಡಿದು ಮಾರುವುದು ಈ ಜನರ ಕಸುಬಾಗಿತ್ತು. ಆದರೆ ಆಧುನಿಕ ಪ್ರಭಾವದ ಪರಿಣಾಮವಾಗಿ ಯಾಂತ್ರಿಕ ದೋಣಿಗಳು ಬಂದಿದ್ದರಿಂದ ಅವುಗಳನ್ನು ಕೊಂಡುಕೊಳ್ಳುವ ಶಕ್ತಿ ಈ ಜನರಲ್ಲಿ ಇಲ್ಲದರಿಂದ ಹಾಗೂ ಸರಕಾರವು ಮೀನಿನ ಪ್ರದೇಶಗಳನ್ನು ಗುತ್ತಿಗೆಯ ಆಧಾರದ ಮೇಲೆ ಸ್ಪರ್ಧೆಗೆ ಒಳಪಡಿಸಿದರಿಂದ ದೊರೆಯುವ ತುತ್ತು ಅನ್ನವು ಕೂಡ ಕಸಿದುಕೊಂಡಂತಾಗಿದೆ. ಹಾಗೆ ನದಿಗಳಿಗೆ ಕಾರ್ಖಾನೆಗಳ ವಿಷಪೂರಿತ ರಸಾಯನಿಕ ಪದಾರ್ಥಗಳನ್ನು ಬಿಡುವುದರಿಂದ ಮೀನುಗಳು ಸತ್ತು ಮೀನುಗಾರಿಕೆಗೆ ನಷ್ಟವಾಗುತ್ತಲಿದೆ. ಅಂಥದರಲ್ಲಿ ಕಷ್ಟ ಪಟ್ಟು ಮೀನುಗಳನ್ನು ಹಿಡಿದು ತಂದು ಮಾರಲು ಹೊರಟರೆ ಇವರು ಇದ್ದ ಸ್ಥಳದಲ್ಲಿ ಮೂಗು ಮುಚ್ಚಿಕೊಂಡು ಹೋಗುವರು. ಆದರೆ ಆ ವಾಸನೆಯನ್ನು

ತಡೆದುಕೊಂಡು ಹೊಟ್ಟೆಗಾಗಿ, ಜೀವನ ಸಾಗಿಸಲು ಆ ವೃತ್ತಿಯಲ್ಲಿ ತೊಡಗಿಕೊಂಡಿದ್ದಾರೆ. ಆದ್ಯಾಗೂ ಕೂಡ ಬೀದರ ಜಿಲ್ಲೆಯಲ್ಲಿ ಹೆಚ್ಚಿನ ಅಭಿವೃದ್ಧಿಯನ್ನು ಮೀನುಗಾರಿಕೆಯಲ್ಲಿ ಕಂಡು ಬರಲಾರದು.

ಇವೆಲ್ಲ ಸಮಸ್ಯೆಗಳಿಂದ ಟೋಕ್ರೆ ಕೋಳಿ ಸಮುದಾಯದವರು ಮೂಲ ವೃತ್ತಿಗಳಾದ ಟೋಕ್ರೆ ನಡೆಸುವುದು, ಮೀನುಗಾರಿಕೆಯನ್ನು ಬಿಟ್ಟು ಕೃಷಿ, ಕೃಷಿಕೂಲಿಗಳು, ಇನ್ನಿತರ ವೃತ್ತಿಗಳಲ್ಲಿ ನಿರತರಾಗಿರುವುದನ್ನು ಕಾಣಬಹುದು. ಆದರೆ ಮೂಲ ವೃತ್ತಿಗಳನ್ನು ಅಳವಡಿಸಿ ಕೊಳ್ಳಬೇಕೋ ಅಥವಾ ಅನ್ಯ ವೃತ್ತಿಯಲ್ಲಿ ತೊಡಗಬೇಕೋ ಎಂಬುದು ತಿಳಿಯದೆ ಹಲವರು ಪೇಚಾಟದಲ್ಲಿದ್ದಾರೆ. ಮೂಲ ವೃತ್ತಿಗೆ ಸಾಕಷ್ಟು ಬೆಲೆ ದೊರೆಯದೆ ಅನ್ಯ ವೃತ್ತಿಗಳ ಅನುಭವ ಇರದೆ ತೋಳಲಾಡುತ್ತ ಜೀವನ ಪರಿಯಂತ ಕಷ್ಟ ಅನುಭವಿಸುತ್ತಲಿದ್ದಾರೆ. ಬೀದರ ಜಿಲ್ಲೆಯಲ್ಲಿ ಟೋಕ್ರೆ ಕೋಳಿ ಸಮುದಾಯದವರು ಶೇಕಡ ೧೪ರಷ್ಟು ಜನರು ಭೂಮಿಯನ್ನು ಹೊಂದಿ ಕೃಷಿಯಲ್ಲಿ ನಿರತರಾಗಿದ್ದಾರೆ. ಆದರೆ ಉಳಿದ ಶೇಕಡ ೮೬ ರಷ್ಟು ಜನರು ಕೃಷಿ ಕೂಲಿಗಳಾಗಿ, ವ್ಯಾಪಾರಿಗಳಾಗಿ, ಸಂಘ ಸಂಸ್ಥೆಗಳಲ್ಲಿ ಸಣ್ಣ ಕೆಲಸ, ಕೆಲವರು ಸರ್ಕಾರಿ ನೌಕರಿಯನ್ನು ಹೊಂದಿದ್ದಾರೆ. ಇವರ ಒಟ್ಟು ಶೇಕಡ ೧೪ರಷ್ಟು ಕೃಷಿಕರಲ್ಲಿ ಶೇಕಡ ೪ ರಷ್ಟು ನೀರಾವರಿ ಭೂಮಿಯನ್ನು ಹೊಂದಿದ್ದಾರೆ. ಉಳಿದವರು ಶೇಕಡ ೧೦ರಷ್ಟು ರೈತರು ನೈಸರ್ಗಿಕದತ್ತ ಮಳೆಯ ಮೇಲೆ ಅವಲಂಬಿತರಾಗಿದ್ದಾರೆ. ಸರಿಯಾದ ಸಮಯಕ್ಕೆ ಮಳೆಯು ಬಿದ್ದರೆ ರೈತರು ಬೆಳೆಯನ್ನು ಕಾಣಬಹುದು. ಅದು ಕೈಕೊಟ್ಟಾಗ ದಿಕ್ಕೆ ತಪ್ಪುತ್ತದೆ. ಶೇಕಡ ೧೦ ರಷ್ಟು ರೈತರಲ್ಲಿ ಶೇಕಡ ೫ರಷ್ಟು ರೈತರು ಮಾತ್ರ ಎರಡು ಬೆಳೆ ಬೆಳೆಯುವಂತಹವರಾಗಿದ್ದಾರೆ. ಉಳಿದದ್ದು ಶೇಕಡ ೫ ರಷ್ಟು ಭೂಮಿ ಒಂದು ಬೆಳೆಯನ್ನು ಮಾತ್ರ ಪಡೆಯಲು ಸಾದ್ಯ. (ವೃತ್ತ ಚಿತ್ರ ನೋಡಿ).

**ಕರ್ನಾಟಕದಲ್ಲಿ ಟೋಕ್ರೆ ಕೋಳಿ ಬುಡಕಟ್ಟಿನ ವಿವಿಧ ಸಂಘಟನೆಗಳ ಪಟ್ಟಿ**

೧ ಕರ್ನಾಟಕ ಪ್ರದೇಶ ಟೋಕ್ರೆ ಕೋಳಿ ಪರಿಶಿಷ್ಟ ಜನಾಂಗ ಸಂಘ ದೇವರಾಜ ನಗರ ಹುಬ್ಬಳ್ಳಿ.

೨ ಜಿಲ್ಲಾ ಟೋಕ್ರೆ ಕೋಳಿ ಸಮಾಜ ಸಂಘ, ಬೆಳಗಾವಿ.

೩ ಜಿಲ್ಲಾ ಟೋಕ್ರೆ ಕೋಳಿ, ಕೋಳಿಡೋರ ಸಮಾಜ ಸಂಘ, ವಿಜಾಪುರ.

೪ ಧಾರವಾಡ ಜಿಲ್ಲಾ ಕೋಲಿ ಸಮಾಜ ಹಿತರಕ್ಷಕ ಸಂಘ, ಧಾರವಾಡ.

೫ ಉತ್ತರ ಕನ್ನಡ ಮೀನುಗಾರರ ಸೇವಾ ಸಮಿತಿ, ತರಡಿ, ಕಾರವಾರ ಜಿಲ್ಲೆ.

೬ ಹೈದರಾಬಾದ್ ಕರ್ನಾಟಕ ಕೋಲಿ (ಕೋಯಾ) ಸಮಾಜ ಸಂಘ ಗುಲ್ಬರ್ಗಾ.

೭ ಕರ್ನಾಟಕ ಅಂಬಿಗ ಸೇವಾ ಸಮಾಜ ಸಂಘ, ಬಳ್ಳಾರಿ.

೮ ಕರ್ನಾಟಕ ರಾಜ್ಯ ಬೆಸ್ತರ (ಬುಂಡೆ ಬೆಸ್ತರ) ಸಂಘ, ಭದ್ರಾವತಿ.

೯ ಕರ್ನಾಟಕ ಪ್ರದೇಶ ಮೊಗವೀರರ ಸಂಘ, ಉಡುಪಿ, ಜಿಲ್ಲಾ ಮಂಗಳೂರು.

೧೦ ಅಖಿಲ ಕರ್ನಾಟಕ ಮೀನುಗಾರರ ಪರಿಷತ್ತು, ಮಂಗಳೂರು.

೧೧ ಕರ್ನಾಟಕ ರಾಜ್ಯ ಗಂಗಾಮತಸ್ಥರ ಸಂಘ, ಬೆಂಗಳೂರು.

೧೨ ನ್ಯಾಶನಲ್ ಅಸೋಸಿಯೇಶನ್ ಆಫ್ ಫಿಶರಮ್ಯಾನ, ರಾಜ್ಯ ಶಾಖೆ, ಬೆಂಗಳೂರು.

೧೩ ರಾಜ್ಯ ನಾಯಕ, ಪರಿವಾರರ ಸಂಘ, ಮೈಸೂರು.

೧೪ ಅಖಿಲ ಕರ್ನಾಟಕ ಮೀನುಗಾರರ ಯುವ ಸಂಘಟನಾ ಮಂಡಳಿ ಉಡುಪಿ (ಚನ್ನಣ್ಣವಾಲೀಕಾರ: ೨೦೦೦:೩೬೮)

೧೫ ಬೀದರ ಜಿಲ್ಲಾ ಟೋಕ್ರೆ ಕೋಳಿ ಸಂಘ, ಬೀದರ.

೧೬ ಬಸವಕಲ್ಯಾಣ ತಾಲೂಕು ಜಲಸೇನ ಟೋಕ್ರೆ ಕೋಳಿ ಸಂಘ, ಬಸವಕಲ್ಯಾಣ

೧೭ ಟೋಕ್ರೆ ಕೋಳಿ ಸರಕಾರಿ ನೌಕರರ ಪತ್ತಿನ ಸಹಕಾರ ಸಂಘ,ಬಸವಕಲ್ಯಾಣ ೧೯೯೯

೧೮ ಹುಮನಾಬಾದ ತಾಲೂಕು ಜಲಸೇನ ಟೋಕ್ರೆ ಕೋಳಿ ಸಂಘ, ಹುಮನಾಬಾದ.

೧೯ ಬೀದರ ತಾಲೂಕು ಜಲಸೇನ ಟೋಕ್ರೆ ಕೋಳಿ ಸಂಘ, ಬೀದರ.

೨೦ ಬೀದರ ಜಿಲ್ಲಾ ಟೋಕ್ರೆ ಕೋಳಿ ಸರಕಾರಿ ನೌಕರರ ಸಂಘ, ಬೀದರ ೨೦೦೧

೨೧ ವಾಲ್ಮೀಕಿ ಯುವಕ ಸಂಘ ಬಸಂತಪುರ ತಾಲೂಕು, ಜಿಲ್ಲೆ ಬೀದರ ೧೯೯೦

೨೨ ಔರಾದ ತಾಲೂಕು ಜಲಸೇನ ಟೋಕ್ರೆ ಕೋಳಿ ಸಂಘ, ಔರಾದ ಬಿ

೨೩ ಭಾಲ್ಕಿ ತಾಲೂಕು ಜಲಸೇನ ಟೋಕ್ರೆ ಕೋಳಿ ಸಂಘ, ಭಾಲ್ಕಿ

**ಟೋಕ್ರೆ ಕೋಳಿ ಬುಡಕಟ್ಟಿನ ಚಳುವಳಿ ಹಾಗೂ ಮನವಿ ಪತ್ರಗಳು**

ಟೋಕ್ರೆ ಕೋಳಿ ಮತ್ತು ಕೋಳಿ ಢೋರ ಬುಡಕಟ್ಟುಗಳನ್ನು ೧೯೫೦ರಲ್ಲಿಯೇ ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಲಾಗಿದೆ. ಅದರ ಪರ್ಯಾಯ ಪದಗಳಾದ ಕಬ್ಬಲಿಗ, ಮೀನುಗಾರ, ಸುಣಗಾರ, ತಳವಾರ ಮೊದಲಾದ ೩೯ ಪದಗಳನ್ನು ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಲಿಲ್ಲ. ಸೇರಿಸಬೇಕೆಂದು ಅನೇಕ ಸಲ ಮನವಿ, ಪ್ರತಿಭಟನೆ, ಚಳುವಳಿಗಳು ನಡೆದಿವೆ. ಅವುಗಳಲ್ಲಿ

೧.ವಿಜಾಪುರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನವರು ಲೋಕಸಭಾ ಸದಸ್ಯರಾದ ಶ್ರೀ ಬಿ.ಈ. ಚೌಧರಿಯವರ ನೇತೃತ್ವದಲ್ಲಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿರುವ ಟೋಕ್ರೆ ಕೋಳಿ ಹೆಸರಿನಡಿಯಲ್ಲಿ ಕರ್ನಾಟಕದಲ್ಲಿಯ ಈ ಬುಡಕಟ್ಟಿನ ಪರ್ಯಾಯ ಪದಗಳನ್ನು ಸೇರ್ಪಡಿಸಲು ಕರ್ನಾಟಕ ಮುಖ್ಯಮಂತ್ರಿಗಳಿಗೆ ೨೧.೨.೧೯೮೩ರಂದು ಮನವಿ ಪತ್ರ ಸಲ್ಲಿಸಿರುವರು.

೨. ಬಿಜಾಪುರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನವರಾದ ಕೆ.ಎಫ್.ಅಂಕಲಗಿಯವರ ನೇತೃತ್ವದಲ್ಲಿ ಟೋಕ್ರೆ ಕೋಳಿಯ ಪರ್ಯಾಯ ಪದಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲು ಚಳುವಳಿ ನಡೆಸಿ ಮನವಿ ಸಲ್ಲಿಸಿರುವರು.

೩.ವಿಜಾಪುರ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ವಿ.ಜಿ.ಗೋರೆಯವರ ನೇತೃತ್ವದಲ್ಲಿ ಶ್ರೀ ಜಿ.ಅಲೆಕ್ಯಾಂಡರ್ ಕಾರ್ಯದರ್ಶಿಗಳು ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ಈ ಬುಡಕಟ್ಟಿನ ತಳವಾರ, ಸುಣಗಾರ, ಅಂಬಿಗಾರ ಇತ್ಯಾದಿ ೩೯ ಪರ್ಯಾಯ ಪದಗಳ ಬಗ್ಗೆ ಬರೆದ ಅರೆ ಸರಕಾರಿ (ಡಿ.ಒ) ಪತ್ರ ಸಂಖ್ಯೆ ಡಿಎಸ್‌ಡ್ಲ್ಯೂ:ಎಡಿಎಂ:೮-೩೧ ದ ೮೧-೮೨ ದಿನಾಂಕ ೧೦.೧೧.೧೯೮೧ ಮನವಿ ಪತ್ರ ಸಲ್ಲಿಸಿರುವರು.

೪.ಮಾನ್ಯ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಿಜಾಪುರ ಇವರು ಮಾನ್ಯ ನಿರ್ದೇಶಕರು ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು ಇವರಿಗೆ, ಪರಿಶಿಷ್ಟ ಪಂಗಡ (ಎಸ್.ಟಿ) ಪಟ್ಟಿಯಲ್ಲಿ ಈ ಬುಡಕಟ್ಟಿನ ಕಬ್ಬಲಿಗ, ತಳವಾರ, ಸುಣಗಾರ, ಪರಿವಾರ, ಮೀನುಗಾರ, ಗಂಗಾಮತ ಮೊದಲಾದ ೩೯ ಪರ್ಯಾಯ ಪದಗಳನ್ನು ಸೇರಿಸಲು ಬಿಜಾಪುರ ಜಿಲ್ಲಾ ಸಂಘ ನೀಡಿದ ೧೩೮ ಪುಟಗಳ ಮನವಿಯೊಡನೆ ಬರೆದ ಪತ್ರ ಸಂಖ್ಯೆ:ಜಿಪ.ಜಾವಕ:ಜಾಮ:ವಿವ: ೮೫-೮೬:ದಿನಾಂಕ:೨೬.೮.೧೯೮೬ ಇದೇ ಸಂಘದಿಂದ ಇವರಿಗೆ ಮತ್ತೊಮ್ಮೆ ಬರೆದ ಪತ್ರದ ಸಂಖ್ಯೆ:ಜಸಕ:ಜಾಪಪ್ರ:ಸಿಆರ್-೨:೮೮-೮೯:ದಿನಾಂಕ:೧೦.೭.೧೯೯೦.

೫.ಧಾರವಾಡ ಜಿಲ್ಲೆಯ ಟೋಕ್ರೆ ಕೋಳಿಯವರ ಅಧ್ಯಕ್ಷರಾದ ಶಿವಶರಣ ಬಾರಕೇರರವರ ನೇತೃತ್ವದಲ್ಲಿ, ದೇಶದ ಪ್ರಧಾನಿ, ರಾಜ್ಯದ ಮುಖ್ಯಮಂತ್ರಿಗಳೊಡನೆ ಕೇಂದ್ರ ಹಾಗೂ ರಾಜ್ಯ ಸರಕಾರಿ ಅಧಿಕಾರಿಗಳಿಗೆ ಸಂಬಂಧಿಸಿದ ಮಂತ್ರಿಗಳಿಗೆ ಹಾಗೂ ರಾಜಕೀಯ ನಾಯಕರುಗಳಿಗೆ ಕರ್ನಾಟಕ ಪ್ರದೇಶ ಟೋಕ್ರೆ ಕೋಳಿ ಪರಿಶಿಷ್ಟ ಜನಾಂಗದ ಸಂಘ ಹುಬ್ಬಳ್ಳಿಯವರು ಈ ಬುಡಕಟ್ಟಿನ ೩೯ ಪರ್ಯಾಯ ಪದಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲು ಚಳುವಳಿ ನಡೆಸಿ ಮನವಿ ಪತ್ರ ಸಲ್ಲಿಸಿರುವರು. ಪತ್ರದ ಸಂಖ್ಯೆ: ಕ.ಪ್ರ.ಟೋ.ಪಸ:ಹು:ಟಿ:೮೭-೮೮:ದಿನಾಂಕ:೧೪.೧.೧೯೮೮.

೬.ನಿರ್ದೇಶಕರು ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು, ಇವರು ಮುಖ್ಯ ಕಾರ್ಯದರ್ಶಿಗಳು, ಜಿಲ್ಲಾ ಪರಿಷತ್ ವಿಜಾಪುರ ಇವರಿಗೆ ಬರೆದ ಪತ್ರದ ಸಂಖ್ಯೆ:ಡಿಎಸ್‌ಡಬ್ಲ್ಯೂ.ಇಟಿ(೨ಸಿಆರ್:೧೨೩:೮೭ ದಿನಾಂಕ:೫.೩.೧೯೮೮ ಕರ್ನಾಟಕ ಮೀನುಗಾರರ ಸಮ ಪದಗಳನ್ನೆಲ್ಲ ಪರಿಶಿಷ್ಟ ವರ್ಗದ ಪಟ್ಟಿಯಲ್ಲಿ ಸೇರ್ಪಡಿಸಲು ಕುರಿತು).

೭.ಜನವರಿ ೧೩,೧೯೯೭ರಂದು ಗುಲ್ಬರ್ಗಾದಲ್ಲಿ ಅಖಿಲ ಕರ್ನಾಟಕ ಗಂಗಾಮತಸ್ಥರ (ಕೋಲಿ) ಸಂಘಟನೆ, ಅದರ ಅಧ್ಯಕ್ಷರಾದ ಜೆ.ಶ್ರೀನಿವಾಸನ್ ಮತ್ತು ಸಚಿವರಾದ ಡಿ.ಟಿ.ಜಯಕುಮಾರ ಅವರ ನೇತೃತ್ವದಲ್ಲಿ ರಾಜ್ಯಮಟ್ಟದ ಸಮ್ಮೇಳನ ನಡೆಸಿ ಪ್ರಧಾನ ಮಂತ್ರಿಗಳಾಗಿದ್ದ ಶ್ರೀ.ಎಚ್.ಡಿ.ದೇವೆಗೌಡ ಅವರಿಗೆ ಉದ್ಘಾಟನೆಗೆ ಕರೆಯಿಸಿ ಟೋಕ್ರೆ ಕೋಳಿ ಬುಡಕಟ್ಟಿನಡಿಯಲ್ಲಿ ಬರುವ ೩೯ ಪರ್ಯಾಯ ಪದಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲು ವಿನಂತಿಸಿದರು.

೮.ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಾದ ಶಾಸಕರಾದ ಶ್ರೀ ಬಾಬುರಾವ್ ಚಿಂಚನಸೂರ ಅವರು ಶ್ರೀ ಎಂ.ವೀರಪ್ಪ ಮೊಯ್ಲಿಯವರು ಮುಖ್ಯಮಂತ್ರಿಗಳಾಗಿದ್ದಾಗ ಟೋಕ್ರೆ ಕೋಳಿ ಬುಡಕಟ್ಟಿನಲ್ಲಿ ಬರುವಂಥ ಕಬ್ಬಲಿಗ, ತಳವಾರ, ಸುಣಗಾರ, ಮೀನುಗಾರ ಮೊದಲಾದ ೩೯ ಪರ್ಯಾಯ ಪದಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲು ಹಲವಾರು ಬಾರಿ ಒತ್ತಾಯಿಸಿದ್ದಾರೆ.

೯.ಗುಲ್ಬರ್ಗಾ ಜಿಲ್ಲೆಯ ಅಫಜಲಪುರ ತಾಲೂಕಿನ ದೇವಲ ಗಾಣಗಾಪುರದ ಶ್ರೀ ವಿಠಲ ಹೆರೂರ ಅವರು ಟೋಕ್ರೆ ಕೋಳಿ ಬುಡಕಟ್ಟಿನಡಿಯಲ್ಲಿ ಬರುವಂಥ ೩೯ ಪರ್ಯಾಯ ಪದಗಳು ಪರಿಶಿಷ್ಟ ಪಂಗಡಕ್ಕೆ ಸೇರಿಸಲು ಉತ್ತರ ಕರ್ನಾಟಕದ ತುಂಬ ಸಭೆಗಳನ್ನು ನಡೆಸಿ ರಾಜ್ಯ ಸರ್ಕಾರಕ್ಕೆ ಎಚ್ಚರಿಕೆ ನೀಡಿದ್ದಾರೆ. ಟೋಕ್ರೆ ಕೋಳಿ ಸಮುದಾಯದ ರಾಜ್ಯ ಸುಧಾರಣಾ ಸಮಿತಿಯು ಇದನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸುವಂತೆ ಆಗ್ರಹಿಸಿ ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಾರ್ಯಾಲಯದ ಮುಂದೆ ಉಪವಾಸ ಸತ್ಯಾಗ್ರಹ ನಡೆಸಿದೆ (೨೬.೧೧.೧೯೯೭).

೧೦.ರಾಯಚೂರು ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನವರಾದ ಎನ್.ಹುಸೇನಪ್ಪ ಮತ್ತು ಕೆ.ಎಂ.ಲಕ್ಷ್ಮಣ ಅವರ ನೇತೃತ್ವದಲ್ಲಿ ಸಭೆ ಸೇರಿಸಿ ಈ ಸಮುದಾಯದಲ್ಲಿ ಬರುವಂಥ ೩೯ ಪರ್ಯಾಯ ಪದಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲು ರಾಜ್ಯ ಸರ್ಕಾರಕ್ಕೆ ಪ್ರತಿಭಟನೆ ಮಾಡಿದರು.

೧೧.ಬೀದರ ಜಿಲ್ಲೆಯ ಟೋಕ್ರೆ ಕೋಳಿ ಬುಡಕಟ್ಟಿನವರು ಶ್ರೀ ಬಿ.ನಾರಾಯಣರಾವ್ ಅವರ ನೇತೃತ್ವದಲ್ಲಿ ಸಭೆ ಸೇರಿಸಿ ಚಳುವಳಿ ನಡೆಸಿ ಈ ಬುಡಕಟ್ಟಿನಲ್ಲಿ ಬರುವಂಥ ಕಬ್ಬಲಿಗ, ಮೀನುಗಾರ, ತಳವಾರ, ಸುಣಗಾರ, ಗಂಗಾಮತ ಮೊದಲಾದ ೩೯ ಪರ್ಯಾಯ ಪದಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲು ರಾಜ್ಯ ಸರ್ಕಾರಕ್ಕೆ ಒತ್ತಾಯಿಸಿರುವರು.

೧೨. ಉಡುಪಿ ಮತಕ್ಷೇತ್ರದ ಶಾಸಕರಾದ ಶ್ರೀ ಯು.ಆರ್. ಸಭಾಪತಿಯವರು, ಈ ಜನಾಂಗವನ್ನು ಪರಿಶಿಷ್ಟ ಪಂಗಡದಲ್ಲಿ ಸೇರಿಸಲು ಸತತ ಪ್ರಯತ್ನ ನಡೆಸಿರುವರು.

೧೩.ಜೆ.ಶ್ರೀನಿವಾಸ್ ಅವರು ಗಂಗಾಮತ ಸಂಘಟನೆಯ ಅಧ್ಯಕ್ಷರಾದ ಮೇಲೆ ಎಲ್ಲರ ಸಹಕಾರದೊಂದಿಗೆ ಕರ್ನಾಟಕದ ಟೋಕ್ರೆ ಕೋಳಿ ಬುಡಕಟ್ಟಿನ ಸಮಸ್ಯೆಗಳನ್ನು ಮೇಲಿಂದ ಮೇಲೆ ಸರಕಾರದ ಗಮನಕ್ಕೆ ತರಲು ಪ್ರಯತ್ನಿಸಿದ್ದಾರೆ. ಸಮುದಾಯದಲ್ಲಿಯೂ ಸಂಘಟನೆ ಗಟ್ಟಿಗೊಳಿಸಿದ್ದಾರೆ.

**ಭಾರತದಲ್ಲಿ ಕೋಳಿ ಪರಿಶಿಷ್ಟರು** : ಕೋರಿ ಅಥವಾ ಕೋಳಿ ಸಮುದಾಯವನ್ನು ಭಾರತದ ವಿಭಿನ್ನ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿ ಮೀಸಲಾತಿಯನ್ನು ಕಲ್ಪಿಸಲಾಗಿದೆ. ಅದರ ವಿವರ ಈ ಕೆಳಗಿನಂತೆ ಕೊಡಲಾಗಿದೆ.

**ಕೋಷ್ಟಕ : ೪.೧೭ ಭಾರತದ ಪರಿಶಿಷ್ಟರ ಪಟ್ಟಿಗಳಲ್ಲಿ ಕೋಳಿ ಬುಡಕಟ್ಟು**

| ಪ್ರದೇಶದ ಹೆಸರು | ಕ್ರ.ಸಂ. | ಜಾತಿಯ ಹೆಸರು | ಎಸ್.ಸಿ /ಎಸ್.ಟಿ |
|---|---|---|---|
| ೧ | ೨ | ೩ | ೪ |
| ಗುಜರಾತ | ೧೫ | ಕೋಲಿ (ಜಿಲ್ಲಾ ಕಚ್ಛ) | ಎಸ್.ಟಿ |
| | ೧೬ | ಟೋಕ್ರೆಕೋಲಿ, ಢೋರಕೋಲಿ,ಕೊಲ್ಚಾ , ಕೋಲ್ಘಾ | ಎಸ್.ಟಿ |
| ಹರಿಯಾಣ | ೨೧ | ಕೋರಿ,ಕೋಲಿ | ಎಸ್.ಸಿ |
| ಹಿಮಾಚಲ ಪ್ರದೇಶ | ೩೫ | ಕೋರಿ,ಕೋಲಿ | ಎಸ್.ಸಿ |

| ೧ | ೨ | ೩ | ೪ |
|---|---|---|---|
| ಕರ್ನಾಟಕ | ೨೨ | ಟೋಕ್ರೆ ಕೋಳಿ, ಢೋರಕೋಳಿ, ಕೊಲ್ಚಾ , ಕೋಲ್ಘಾ | ಎಸ್.ಟಿ |
| ಮಧ್ಯಪ್ರದೇಶ | ೩೧ | ಕೋಲಿ, ಕೋರಿ | ಎಸ್.ಸಿ |
| ಮಹಾರಾಷ್ಟ್ರ | ೩೩ | ಕೋರಿ | ಎಸ್.ಸಿ |
| | ೨೮ | ಢೋರಕೋಲಿ, ಟೋಕ್ರೆ ಕೋಲಿ, ಕೋಲ್ಚಾ,ಕೋಲ್ಘಾ | ಎಸ್.ಟಿ |
| | ೩೦ | ಮಲ್ಹಾರ ಕೋಲಿ | ಎಸ್.ಟಿ |
| ಒರಿಸಾ | ೪೮ | ಕೋರಿ | ಎಸ್.ಸಿ |
| | ೩೬ | ಮಲ್ಹಾರ ಕೋಲಿ | ಎಸ್.ಟಿ |
| ಪಂಜಾಬ | ೨೧ | ಕೋರಿ, ಕೋಲಿ | ಎಸ್.ಸಿ |
| ರಾಜಸ್ಥಾನ | ೩೭ | ಕೋರಿ, ಕೋಲಿ | ಎಸ್.ಸಿ |
| | ೩೮ | ಡೋರಕೋಲಿ, ಟೋಕ್ರೆ ಕೋಳಿ, ಕೋಲ್ಚಾ, ಕೋಲ್ಘಾ | ಎಸ್.ಟಿ |
| ತಮಿಳನಾಡು | ೩೨ | ಕೋಲಿಯಾನ್ | ಎಸ್.ಸಿ |
| ತ್ರಿಪುರ | ೨೨ | ಕೋರಿ | ಎಸ್.ಸಿ |
| ಉತ್ತರ ಪ್ರದೇಶ | ೫೦ | ಕೋರಿ | ಎಸ್.ಸಿ |
| ದಲ್ಲಿ ಕೇಂದ್ರಾಡಳಿತ ಪ್ರದೇಶ | ೨೨ | ಕೋಲಿ | ಎಸ್.ಸಿ |
| ಚಂಡಿಗಢ | ೨೦ | ಕೋರಿ, ಕೋಲಿ | ಎಸ್.ಸಿ |
| ದಾದ್ರಾ ಮತ್ತು ನಗರ ಹವೇಲಿ | ೫ | ಕೋಲಿ ಢೋರ, ಕೋಲ್ಚಾ | ಎಸ್.ಟಿ |

ಆಧಾರ : Sarkar,B.K. ***Brochure: Containing the list of Scheduled Castes and Scheduled Tribes*** (New Delhi: Govt.of India Ministry of Home Affairs,1984)

೧೯೫೦ರಲ್ಲಿಯೇ ಹೈದರಾಬಾದ್ ರಾಜ್ಯದಲ್ಲಿ ಕೋಯ ಸಮುದಾಯ ಬುಡಕಟ್ಟು ಪಟ್ಟಿಗೆ ಸೇರಿ ೧೯೫೬ರ ಭಾಷಾವಾರು ಪ್ರಾಂತ ರಚನೆಯಾದ ನಂತರ ೧೯೬೦ ರಿಂದ ಹೈದರಾಬಾದ ಕರ್ನಾಟಕ ಪ್ರದೇಶವಾದ ಬೀದರ, ಗುಲ್ಬರ್ಗಾ ಹಾಗೂ ರಾಯಚೂರು ಜಿಲ್ಲೆಗಳಿಗೆ ಸೀಮಿತಗೊಂಡಂತೆ ಕೋಯ(Koya) ಬುಡಕಟ್ಟು ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿತು. ಇದರಲ್ಲಿ ಭಿನೆ ಕೋಯ (Bhine Koya) ಹಾಗೂ ರಾಜ ಕೋಯ(Raj Koya)ಗಳೂ ಒಳಗೊಂಡಿವೆ. ಇವುಗಳು ೧೯೭೭ರಿಂದ ಪ್ರಾದೇಶಿಕ ಮಿತಿಯನ್ನು ಸಡಿಲಿಸಿಕೊಂಡು ಕರ್ನಾಟಕದಾದ್ಯಂತ ತಮ್ಮ ವ್ಯಾಪ್ತಿಯನ್ನು ಪಸರಿಸಿಕೊಂಡವು. ಆದರೆ ೧೯೭೭ರ ವರೆಗೆ ಟೋಕ್ರೆಕೋಳಿ ಬುಡಕಟ್ಟು ಸಂವಿಧಾನ ಬದ್ಧವಾಗಿ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿದ್ದ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿರಲಿಲ್ಲ. ಹೀಗಾಗಿ ಈ ಪ್ರದೇಶದ ಕೋಳಿಗಳು ಕೋಯ ಎಂಬೀ ಜಾತಿ ಪ್ರಮಾಣ ಪತ್ರ ಪಡೆದಿರುವ ದಾಖಲೆಗಳಿವೆ. ಕೋಲಿ ಮತ್ತು ಕೋಯಗಳು ಭಿನ್ನವಾಗಿರದೆ ಇವೆರಡು ಪದಗಳನ್ನು ಹೊಂದಿರುವ ಸಮುದಾಯಗಳು ಒಂದೇ ಆಗಿರವವೆಂಬುದನ್ನು ಕರ್ನಾಟಕ ಉಚ್ಚನ್ಯಾಯಾಲಯದ ೧೯೮೩ರ ತೀರ್ಪು ಸಾಬಿತು ಪಡಿಸಿದೆ(ಮೈತ್ರಿ,ಕೆ.ಎಂ.:೨೦೦೨:೧೧೭-೮).

## ೪. ಜಾತಿ ಪ್ರಮಾಣ ಪತ್ರದ ಸಮಸ್ಯೆ

ಕೋಲಿ ಸಮುದಾಯವನ್ನು ಪ್ರಾದೇಶಿಕ ಭಿನ್ನತೆಯಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದಲ್ಲಿ ಸೇರಿಸಲಾಗಿದೆ. ಕೋಳಿ ಮತ್ತು ಕೋರಿ ಪದವು ಹರಿಯಾಣ, ಹಿಮಾಚಲ ಪ್ರದೇಶ, ಮಧ್ಯಪ್ರದೇಶದಲ್ಲಿ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಲಾಗಿದೆ. ಓಡಿಸಾ, ತ್ರಿಪುರ, ಉತ್ತರ ಪ್ರದೇಶಗಳಲ್ಲಿ ಇದೇ ಸಮುದಾಯದ ಕೋರಿ ಎಂಬುದೊಂದು ಜಾತಿಯನ್ನು ಪರಿಶಿಷ್ಟ ಜಾತಿಯಲ್ಲಿ ಸೇರಿಸಲಾಗಿದೆ. ಗುಜರಾತ, ಹರಿಯಾಣ, ಕರ್ನಾಟಕ, ರಾಜಸ್ಥಾನಗಳಲ್ಲಿ ಟೋಕ್ರೆ ಕೋಳಿ, ಢೋರಕೋಳಿ, ಕೋಲ್ಚ, ಕೋಲ್ಘಾಗಳನ್ನು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಲಾಗಿದೆ. ಇದಕ್ಕಾಗಿ ಭಾರತದಲ್ಲಿ ವಿಭಿನ್ನ ಪ್ರದೇಶದಲ್ಲಿ ಕರೆಯುವ ಪಟ್ಟಿಯನ್ನು ನೋಡಬಹುದು.

ಬೀದರ, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳಲ್ಲಿ ಇವರನ್ನು ಕೋಳಿ, ಕೋಯ, ರಾಜಕೋಯ, ಭಿನೆಕೋಯ, ನಿವಲ್ಯಾಕೋಳಿ, ಕಬ್ಬಲಿಗ, ತಳವಾರ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಟೋಕ್ರೆ ಕೋಳಿ ಸಮುದಾಯದವರು ಹಿಂದೆ ಕೋಯ ಎಂಬ ಹೆಸರಿನಿಂದ ಜಾತಿ ಪ್ರಮಾಣ ಪತ್ರ ಪಡೆಯುತ್ತಿದ್ದರು. ೨೭.೧೦.೧೯೯೩ರಲ್ಲಿ ಇದನ್ನು ಎ ಗುಂಪಿನಲ್ಲಿ ಸೇರಿಸಲಾದ ಗಂಗಾಕುಲದ ೨೮ ಪರ್ಯಾಯ ಜಾತಿಗಳನ್ನು ಗಂಗಾಕುಲ, ಗಂಗೆ ಮಕ್ಕಳು, ಗಂಗಾಮತ, ಗಂಗಾಪುತ್ರ, ಗೌರಿಮತ, ಅಂಬಿಗ, ಅಂಬಿಗ್, ಬೆಸ್ತ, ಕಬ್ಬಲಿಗ, ಕಬ್ಬಲಿ, ಕಬ್ಬೆರ, ಕಬ್ಬೇರ, ಕೋಳಿ, ಖಾರ್ವಿ, ಬೋಯಿ, ಬೋಇ, ತೊರೆಯ, ಹರಿಕಾಂತ್ರ, ಹರಿಕಂತ್ರ, ಕಾಹರ್, ಮೀನುಗಾರ, ಮೋಗವಿರ, ಖಾರಿಯ, ಸುಣ್ಣಗಾರ, ಸಿವಿಯಾರ, ಬಾರ್ಕಿ, ಪರಿವಾರ ಇವೆಲ್ಲವುಗಳು ಎ ಗುಂಪಿನಲ್ಲಿನ ಬೆಸ್ತರ ಹಾಗೂ ಬುಂಡೆ ಬೆಸ್ತರ ಜಾತಿಗಳೊಂದಿಗೆ ಸೇರ್ಪಡೆಯಾಗಿ ದಿನಾಂಕ ೧೮.೧೦.೮೬ರ ಆದೇಶದಂತೆ ಎ ಗುಂಪಿನಡಿಯಲ್ಲಿ ನೀಡಲು ಆದೇಶಿಸಲಾಗಿದೆ.

ಬೀದರದಲ್ಲಿ ಬಿ. ನಾರಾಯಣರಾವ್, ಗುಲಬರ್ಗಾದಲ್ಲಿ ವಿಠಲ್ ಹೆರೂರ್,ಬಾಬುರಾವ್ ಚಿಂಚನಸೂರ್, ಬಿಜಾಪುರದಲ್ಲಿ ಬಿ.ಈ. ಚೌಧರಿಯವರು ಮೈಸೂರಿನಲ್ಲಿ ಡಿ.ಟಿ. ಜಯಕುಮಾರರವರು ಜಿಲ್ಲಾಧಿಕಾರಿ ಮತ್ತು ತಹಶೀಲ್ದಾರನ್ನು ಮನವಲಿಸಿ ಮನವರಿಕೆ ಮಾಡಿ ಎಸ್.ಟಿ ಸರ್ಟಿಫಿಕೇಟು ಕೊಡಿಸಿದ ಪ್ರಸಂಗಗಳು ಆಗಿ ಹೋಗಿವೆ.

೧೯೯೭ರ ಜನವರಿ ೧೩ ರಂದು ಕರ್ನಾಟಕ ರಾಜ್ಯ ಗಂಗಾ ಮತಸ್ಥರ ಬೃಹತ್ ಸಮ್ಮೇಳನ ಗುಲಬರ್ಗಾದಲ್ಲಿ ನಡೆಯಿತು. ಈ ಸಮ್ಮೇಳನವನ್ನು ಪ್ರಧಾನಿ ಸನ್ಮಾನ್ಯ ಶ್ರೀ ಹೆಚ್.ಡಿ.ದೇವೇಗೌಡ ಅವರು ಉದ್ಘಾಟಿಸಿದರು. ಇದರಲ್ಲಿ ಮುಖ್ಯಮಂತ್ರಿ ಸನ್ಮಾನ್ಯ ಶ್ರೀ ಜೆ.ಹೆಚ್. ಪಟೇಲ, ಉಪ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಶ್ರೀ ಸಿದ್ಧರಾಮಯ್ಯನವರು, ಹಿಂದುಳಿದ ಹಾಗೂ ಅಲ್ಪಸಂಖ್ಯಾತರ ಸಚಿವರಾಗಿದ್ದ ಸನ್ಮಾನ್ಯ ಶ್ರೀ ಮಾಲಿಕಯ್ಯ ಗುತ್ತೇದಾರರು, ತೋಟಗಾರಿಕೆ ಸಚಿವರಾಗಿದ್ದ ಸನ್ಮಾನ್ಯ ಶ್ರೀ ಡಿ.ಟಿ. ಜಯಕುಮಾರರವರು, ಸಾರಿಗೆ ಸಚಿವರಾಗಿದ್ದ ಸನ್ಮಾನ್ಯ ಶ್ರೀ ಪಿ.ಜಿ.ಆರ್.ಸಿಂಧ್ಯಾರವರು ಅಲ್ಲದೆ ಸಮಾಜದ ಶಾಸಕರೂ ಅನೇಕ ರಾಜಕಾರಣಿಗಳು, ಗಣ್ಯ ವ್ಯಕ್ತಿಗಳು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ರಾಜ್ಯದ ವಿವಿಧ ಭಾಗಗಳಿಂದ ಲಕ್ಷಾಂತರ ಗಂಗಾಮತಸ್ಥರು ಈ ಬೃಹತ್ ಸಮ್ಮೇಳನದಲ್ಲಿ ಭಾಗವಹಿಸಿದರು.

ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡುತ್ತ ಉದ್ಘಾಟಕರು ಹಾಗೂ ಆಗಿನ ಪ್ರಧಾನಿಯವರಾಗಿದ್ದ ದೇವೇಗೌಡರು ಗಂಗಾಮತದ ೩೯ ಪರ್ಯಾಯ ಪದಗಳನ್ನು ಪರಿಶಿಷ್ಟ ಪಂಗಡದಲ್ಲಿ ಸೇರಿಸಲು ಪ್ರಾಮಾಣಿಕ ಪ್ರಯತ್ನ ಮಾಡುವುದಾಗಿ ಆಶ್ವಾಸನೆ ನೀಡಿದರು.

# ಅಧ್ಯಾಯ ೭
# ಸಮಾರೋಪ

ಸೃಷ್ಟೀಕೃತ ಆದಿಮಾನವನ ಜೀವನವನ್ನು ಅರಿಯಬೇಕಾದರೆ ಬಡುಕಟ್ಟುಗಳ ಅಧ್ಯಯನದ ಅವಶ್ಯಕತೆ ಇದೆ. ಇತ್ತೀಚೆಗೆ ಆಧುನೀಕರಣ, ಸಂಸ್ಕೃತೀಕರಣ, ನಗರೀಕರಣ ಇತ್ಯಾದಿಗಳು ಜನರ ಜೀವನದ ಮೇಲೆ ಗಾಢ ಪ್ರಭಾವ ಬೀರಿ, ಬದಲಾವಣೆ ತಂದಿವೆ. ಅದಲ್ಲದೆ ಸಮೂಹ ಮಾಧ್ಯಮಗಳ ಸಂಪರ್ಕ ಹೆಚ್ಚಾದಂತೆ, ಕಡ್ಡಾಯ ಶಿಕ್ಷಣದಿಂದ ಅಲ್ಪ ಸ್ವಲ್ಪ ಶಿಕ್ಷಣ ಪಡೆದುದರಿಂದ ಜೀವನದ ಮಾರ್ಗವೇ ಬದಲಾಗಿದೆ. ಆ ಕಡೆ ನಿರಕ್ಷರರೂ ಅಲ್ಲದೆ ಈ ಕಡೆ ಸಂಪೂರ್ಣ ಅಕ್ಷರ ಜ್ಞಾನವು ಪಡೆಯದೇ ನಿರುದ್ಯೋಗಿಗಳಾಗಿ ತೊಳಲಾಡುತ್ತಿರುವ ಯುವಕರೂ ಇದ್ದಾರೆ. ಮೂಲ ವೃತ್ತಿಗೆ ಕಾಲಕ್ಕೆ ತಕ್ಕಂತೆ ಬೆಲೆಯಿಲ್ಲದಾಗಿ, ಅದರಲ್ಲಿ ಉತ್ಸಾಹವಿಲ್ಲದೆ ಹೊಸ ಕೆಲಸವು ಬಾರದೆ ಎಷ್ಟೋ ವಿದ್ಯಾರ್ಥಿಗಳು ಪ್ರೌಢ ಶಿಕ್ಷಣದವರೆಗೆ ಶಿಕ್ಷಣ ಮುಗಿಸಿ ಮನೆಯಲ್ಲಿದ್ದಾರೆ. ಆರ್ಥಿಕ ಮುಗ್ಗಟ್ಟಿನಿಂದ ಶಿಕ್ಷಣ ಮುಂದುವರೆಸದೆ ಅರ್ಧಕ್ಕೆ ನಿಲ್ಲಿಸಿದವರೂ ಇದ್ದಾರೆ.

ಟೋಕ್ರೆಕೋಲಿಯವರ ಮುಗ್ಧತೆಯನ್ನು ಅರಿತುಕೊಂಡ ಯಾಜಮಾನ್ಯ ವರ್ಗ ದಬ್ಬಾಳಿಕೆ ನಡೆಸುತ್ತಿದ್ದಾರೆ. ಇವರಲ್ಲಿದ್ದ ಸಮಸ್ಯೆಗಳನ್ನು ಪರಿಹರಿಸುವ ಬದಲು ಸಮಸ್ಯೆಗಳನ್ನು ಸೃಷ್ಟಿಸುವವರೂ ಇದ್ದಾರೆ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಸಮಸ್ಯೆಗಳು ಇದ್ದರು ಇನ್ನೊಬ್ಬರ ಮುಂದೆ ಹೇಳುವಂತ ಧೈರ್ಯವೂ ಇರಲಿಲ್ಲ. ಇತ್ತೀಚಿನ ದಿನಗಳಲ್ಲಿ ಆ ಧೈರ್ಯ ಸ್ವಲ್ಪ ಮಟ್ಟಿಗೆ ಕಂಡು ಬರುತ್ತಿದೆ. ಆದ್ದರಿಂದಲೇ ಸಮಸ್ಯೆಗಳಿಗೆ ಪರಿಹಾರವನ್ನು ಕಾಣಲು ಮುಂದೆ ಹೆಜ್ಜೆ ಇಡಲು ಪ್ರಯತ್ನಿಸುತ್ತಲಿದ್ದಾರೆ. ತಮ್ಮ ಸಮುದಾಯದ ಸಂಘವನ್ನು ಜಿಲ್ಲಾ ಮಟ್ಟದಲ್ಲಿ 'ಬೀದರ ಜಿಲ್ಲೆಯ ಟೋಕ್ರೆಕೋಳಿ ಸಂಘ'ವಿದ್ದು ಐದು ತಾಲೂಕುಗಳಲ್ಲಿ, 'ಜಲಸೇನ ಟೋಕ್ರೆಕೋಳಿ ಸಂಘ'ವೆಂದು ಸ್ಥಾಪಿಸಿದ್ದಾರೆ. ಈ ಸಂಘಗಳ ಮೂಲಕ ಸಂಘಟಿತರಾಗಿ ತಮ್ಮ ಸಮಸ್ಯೆಗಳಿಗೆ ಪರಿಹಾರ ಕಾಣುವ ಪ್ರಯತ್ನ ಸತತ ನಡೆಸಿದ್ದಾರೆ. ಹಿಂದಿನ ಜನರಲ್ಲಿನ ಸರಳತೆ, ಮುಗ್ಧತೆ ಕಡಿಮೆಯಾಗಿ ಪ್ರಸ್ತುತದಲ್ಲಿ ಸ್ವಲ್ಪ ಜಾಗ್ರತೆ ಮೂಡಿದೆ. ಇನ್ನು ಹೆಚ್ಚು ಜಾಗ್ರತರಾಗಿ, ಸಂಘಟಿತರಾಗಿ ಸರಕಾರದ ಸೌಲಭ್ಯಗಳಿಗೆ ಸ್ಪಂದಿಸಿ ಅವುಗಳನ್ನು ಪಡೆಯುವಂತಾಗಬೇಕಾಗಿದೆ. ಹಲವಾರು ಸೌಲಭ್ಯಗಳು ಹಳ್ಳಿಯ ಜನರಿಗೆ ತಲುಪಲಿಲ್ಲ. ತಲುಪಿಸುವ ಕಾರ್ಯ ಮಾಡಬೇಕಾಗಿದೆ. ಅಂದಾಗ ಮಾತ್ರ ಇವರಲ್ಲಿ ಅಭಿವೃದ್ಧಿ ಕಾಣಲು ಸಾಧ್ಯ.

ಟೋಕ್ರೆಕೋಳಿ ಬುಡಕಟ್ಟಿನವರು ಆಧುನಿಕತೆಗೆ ಒಳಗಾಗಿದ್ದುದರಿಂದ ಇವರ ಸಾಮಾಜಿಕ ಜೀವನದಲ್ಲಿ ಬದಲಾವಣೆಯನ್ನು ಕಂಡು ಬರುತ್ತಿದೆ. ಒಂದು ಸಂಸ್ಕೃತಿಯಲ್ಲಿ, ಸಮಾಜದಲ್ಲಿ ಬದಲಾವಣೆಯಾಗಬೇಕಾದರೆ ಸಮಸ್ಯೆಗಳು ಎದುರಿಸಬೇಕಾಗುತ್ತದೆ. ಆ ಸಮಸ್ಯೆಗಳನ್ನು ಸಾಮೂಹಿಕ ಇರುವುದರಿಂದ ಅವುಗಳನ್ನು

ಬಗೆಹರಿಸಕೊಳ್ಳಲು ಸಂಘಟನೆ ಬೇಕು. ಸಂಘಟನೆಯಿಂದ ಎಂಥ ಕಷ್ಟದ ಸಮಸ್ಯೆಗಳಿಗೆ ಪರಿಹಾರ ದೊರೆಯುತ್ತದೆ.

ಟೋಕ್ರೆಕೋಳಿ ಸಮುದಾಯದ ಪ್ರಮುಖ ವೃತ್ತಿಗಳಾದ ಟೋಕ್ರೆ ವೃತ್ತಿ, ಮೀನುಗಾರಿಕೆ. ಇಂದು ಕೊಡಲೇಟು ಬಿದ್ದುದರಿಂದ ಅದರಲ್ಲಿ ಬದಕು ರೂಪಿಸಿಕೊಳ್ಳುವುದು ಕಷ್ಟಸಾಧ್ಯ. ಟೋಕ್ರೆ ವೃತ್ತಿ ಅವರ ಮೂಲ ವೃತ್ತಿಯಾದ್ದರಿಂದ ಅವರಿಗೆ ಆ ವೃತ್ತಿಯನ್ನು ಬಿಡಲು, ಇನ್ನೊಂದು ವೃತ್ತಿಯಲ್ಲಿ ತೊಡಗಲು ಆಗಲಾರದ ಪರಿಸ್ಥಿತಿ ಒದಗಿದೆ. ಮುಂದಿನ ದಿನಗಳಲ್ಲಿ ನದಿಗಳಿಗೆಲ್ಲ ಸೇತುಗಳ ನಿರ್ಮಾಣವಾದರೆ, ಈ ವೃತ್ತಿ ನೋಡಲು ಸಹ ದೊರೆಯುವುದು ದುರ್ಲಭ. ಮೀನುಗಾರಿಕೆ ಗುತ್ತಿಗೆ ಆಧಾರದ ಮೇಲೆ ಕೊಡುತ್ತಿರುವುದರಿಂದ ಬಡತನ ಪರಿಸ್ಥಿತಿಯಲ್ಲಿದ್ದ ಇವರು ಮುಕ್ತವಾಗಿ ನದಿಗಳಲ್ಲಿ ಹಿಡಿಯಲಾರರು. ಅದನ್ನು ಖರೀದಿಸಿ ತಿನ್ನುವ ಸಾಮರ್ಥ್ಯ ಕೂಡ ಕಳೆದುಕೊಳ್ಳುವ ಚಿಂತೆಯಿದೆ.. ಆದ್ದರಿಂದ ಅನ್ಯ ವೃತ್ತಿಗಳ ಕಡೆಗೆ ಮನಒಲಿಸುವುದು ಅನಿವಾರ್ಯವಾಗುವುದು. ಇವರಲ್ಲಿ ಬಹುಸಂಖ್ಯಾತರು ಕೃಷಿ ಮತ್ತು ಕೃಷಿಕೂಲಿಗಳಾಗಿ ಜೀವನ ಸಾಗಿಸುತ್ತಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದು ಬಂದಿದೆ. ಶೇಕಡ ೧೪ರಷ್ಟು ಮಾತ್ರ ವ್ಯವಸಾಯವನ್ನು ಅವಲಂಬಿಸಿದ್ದಾರೆ. ಉಳಿದವರು ಕೃಷಿ ಕೂಲಿ ಇನ್ನಿತರ ಕೆಲಸಗಳಲ್ಲಿ ತೊಡಗಿದ್ದಾರೆ. ಶೇಕಡ ೮೪ರಷ್ಟು ಜನ ಸರಕಾರದ ಸೌಲಭ್ಯಗಳಿಂದ ವಂಚಿತರಾಗಿರುವರು. ಎಷ್ಟೋ ಮನೆಗಳಿಗೆ ವಿದ್ಯುತ್ ದೀಪಗಳಿಲ್ಲ. ವಾಸಿಸಲು ಮನೆಗಳಿಲ್ಲ, ವಯಸ್ಸಾದವರು ಕೈಯಿಂದ ಕೆಲಸವಾಗದೆ ಒದ್ದಾಡುತ್ತಿರುತ್ತಾರೆ. ಓದುವಂತಹ ವಿದ್ಯಾರ್ಥಿಗಳು ಆರ್ಥಿಕದ ಕೊರತೆಯಿಂದ ಓದು ನಿಲ್ಲಿಸುತ್ತಲಿದ್ದಾರೆ. ಇವೆಲ್ಲ ಸಮಸ್ಯೆಗಳಿಗೆ ಸರಕಾರದಿಂದ ಮತ್ತು ಸಂಘಗಳಿಂದ ಸಹಕಾರ ಪಡೆದುಕೊಂಡು ಸೌಲಭ್ಯಗಳು ಪಡೆಯುವಂತಾಗಬೇಕು. ಉದಾ: ಜಾತಿ ಪ್ರಮಾಣ ಪತ್ರ, ಭಾಗ್ಯಜ್ಯೋತಿ, ಆಶ್ರಯ ಯೋಜನೆ ಮನೆಗಳು, ವೃದ್ಧಾಪವೇತನ ಇತ್ಯಾದಿಗಳು.

ಟೋಕ್ರೆಕೋಳಿ ಸಮುದಾಯದವರ ವೃತ್ತಿಗಳೆಲ್ಲ ಕಡಿಮೆ ಆದಾಯ ತರುವವಾಗಿರುವವು. ಇದರಿಂದ ಜೀವನ ಸಾಗಿಸುವುದು ಕಷ್ಟ. ಇನ್ನೂ ಉಚ್ಚ ಕುಲದವರ ಶುಭಕಾರ್ಯಗಳಲ್ಲಿ ಊಟ ಮಾಡಿಟ್ಟ ಮುಸರೆಯ ಪಾತ್ರೆಗಳನ್ನು ತಿಕ್ಕುವುದು, ಸಿಂದಿ ಬನಕಾಯುವುದು, ಬೇರೆಯವರ ಮನೆಯಲ್ಲಿ ದನಕಾಯಲು, ನೀರು ತರಲು ಇತ್ಯಾದಿಗಳಿಗೆ ಬದ್ಧರಾಗಿ ಕೆಲಸ ನಿರ್ವಹಿಸುತ್ತಾರೆ. ಇವೆಲ್ಲ ಕೆಲಸಗಳಿಗೆ ಕೊಟ್ಟಷ್ಟು ಹಣ ಮಾತ್ರ ಪಡೆಯಲು ಸಾಧ್ಯ. ಇವೆಲ್ಲ ಕೆಲಸಗಳನ್ನು ಬಿಟ್ಟು ಬೇರೆಯವರು ಮಾಡುವ ಕೆಲಸಗಳಿಗೆ ಕೈ ಹಾಕಲು ಶಕ್ತಿಯಿಲ್ಲ. ಇವೆಲ್ಲಕ್ಕೆ ಶಿಕ್ಷಣ, ಆರ್ಥಿಕದ ಕೊರತೆ, ಸಾಮಾಜಿಕದಲ್ಲಿನ ಕೆಳಸ್ಥಾನ ಇವೆ ಕಾರಣಗಳಾಗಿವೆ. ಒಬ್ಬ ವ್ಯಕ್ತಿ ಅಭಿವೃದ್ಧಿ ಹೊಂದಬೇಕಾದರೆ ಆತನಿಗೆ ಶಿಕ್ಷಣವೇ ಮುಖ್ಯ. ಶಿಕ್ಷಣ ಪಡೆದ ವ್ಯಕ್ತಿಯಿಂದ ಯಾವ ಮಾರ್ಗದಲ್ಲಾದರೂ ಬದುಕನ್ನು ಸುಧಾರಿಸಿಕೊಳ್ಳುವನು. ಅದರಿಂದ ಆರ್ಥಿಕಮಟ್ಟ ಕೂಡ ಸುಧಾರಣೆಯಾಗುವುದು. ಆರ್ಥಿಕದಲ್ಲಿ ಮುಂದುವರೆದ ವ್ಯಕ್ತಿ ರಾಜಕೀಯದಲ್ಲಿ ಮುಂದೆ ಬರಲು ಸಾಧ್ಯ. ರಾಜಕೀಯದಲ್ಲಿ ಮುಂದುವರೆದ ವ್ಯಕ್ತಿ ತನ್ನ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುವ ಯಾವ ಅಡೆ-ತಡೆಗಳು ಇರಲಾರವು. ಶಿಕ್ಷಣದಿಂದ ಆರ್ಥಿಕ, ಸಾಮಾಜಿಕ, ರಾಜಕೀಯ ಮಟ್ಟವನ್ನು ಸುಧಾರಿಸಲು ಸಾಧ್ಯ.

ಧರ್ಮದಲ್ಲಿ ನಂಬಿಕೆ ಇರುವುದರಿಂದ ಇವರು ಬಲಿ, ದೇವರ ಕಾರ್ಯ ಮೊದಲಾದವುಗಳಿಗೆ ಹೆಚ್ಚಿನ ಹಣ ಖರ್ಚು ಮಾಡುತ್ತಾರೆ. ಇವರಲ್ಲಿ ಹಣ ಇರದಿದ್ದರೂ ದೇವರ ಕಾರ್ಯ ಮಾಡಲು ಬೇರೆಯವರ ಹತ್ತಿರ ಸಾಲ

ತಂದಾದರು ಮಾಡುವರು. ಇದರಿಂದ ಸಾಲಕ್ಕೆ ಬಡ್ಡಿಗೆ ಬಡ್ಡಿಯಾಗಿ ಅದನ್ನು ತೀರಿಸಲಾಗದೆ ತನ್ನ ಮಕ್ಕಳನ್ನು ಜೀತಕ್ಕೆ ದುಡಿಸುತ್ತಾರೆ. ಇದರಿಂದ ಜೀವನ ಪರ್ಯಾಂತ ಜೀತದಲ್ಲಿ ಜೀವನ ಕಳೆಯಬೇಕಾಗುವುದು. ಅಪ್ಪ ಮಾಡಿದ ಸಾಲ ಮಗ ತೀರಿಸಬೇಕಾಗುವುದು. ಇದರಿಂದ ಶಿಕ್ಷಣ ಮುಂದುವರೆಸಲು ಆಗುವುದಿಲ್ಲ. ಆದ್ದರಿಂದ ಧಾರ್ಮಿಕ ಸಮಸ್ಯೆಗಳನ್ನು ಹೋಗಲಾಡಿಸಲು ಅವರಿಗೆ ವೈಜ್ಞಾನಿಕ ಅರಿವು ಮೂಡಿಸಬೇಕಾಗಿದೆ. ಈ ಸಂಬಂಧ ತಮ್ಮ ಸಮುದಾಯದ ಸಂಘಟನೆಯ ಪಾತ್ರ ಬಹಳ ಮಹತ್ವದಾಗಿದೆ.

ಶಿಕ್ಷಣ ಪಡೆಯುವಲ್ಲಿ ಹಲವಾರು ಸಮಸ್ಯೆಗಳಿರುವುದರಿಂದ ಸಾಕ್ಷರರು ಕಡಿಮೆಯಾಗಿರುವರು. ಬಡತನ, ಜನಸಂಖ್ಯಾ ಹೆಚ್ಚಳ, ಕೃಷಿ ಭೂಮಿ ಪ್ರಮಾಣ ಕಡಿಮೆ, ಕೂಲಿಕಾರರೆ ಹೆಚ್ಚು ಇರುವುದರಿಂದ ಸಾಕ್ಷರರ ಸಂಖ್ಯೆ ಹೇಳಿಕೊಳ್ಳುವಂತಿಲ್ಲ. ಓದು ಬರಹ ಬಲ್ಲಂತಹ ವ್ಯಕ್ತಿಗಳು, ಸಂಘಟನೆಯವರು, ಸರ್ಕಾರಿ ನೌಕರದಾರರು, ಕೃಷಿ ಭೂಮಿ ಉಳ್ಳಂತಹ ಜನರು ಬಡ ಜನತೆಗೆ ತನುಮನಧನದ ಸಹಕಾರ ನೀಡಬೇಕು. ಶಿಕ್ಷಣದ ಮಹತ್ವ ಜನರಿಗೆ ತಿಳಿಸಬೇಕು. ಸ್ತ್ರೀ ಶಿಕ್ಷಣದಲ್ಲಿ ಬಹಳ ಹಳ್ಳಿಗಳಲ್ಲಿ ಪ್ರಾಥಮಿಕ ಮಟ್ಟದವರೆಗೆ ಶಿಕ್ಷಣವಿದೆ. ಅದನ್ನೂ ಕೂಡ ಕಲಿಯದ ಎಷ್ಟೋ ಜನರಿದ್ದಾರೆ. ಅದಕ್ಕೆ ಅವರದ್ದೆಯಾದ ಸಮಸ್ಯೆಗಳಿವೆ. ಅಜ್ಞಾನ, ಅನಕ್ಷರತೆ ಬಡತನ, ಪರಾವಲಂಬನೆ ಇವುಗಳಿಂದ ಜನರಿಗೆ ಶಿಕ್ಷಣ ಮುಂದುವರೆಸಲು ಆಗುತ್ತಿಲ್ಲ. ಇವೆಲ್ಲವುಗಳಿಂದ ಮುಕ್ತರಾಗಲು ಸರಕಾರದ ಸಹಾಯದೊಂದಿಗೆ ಸಂಘಟನೆಯ ಕಾರ್ಯವು ಅಷ್ಟೇ ಮುಖ್ಯವಾಗಿದೆ. ಸಂವಿಧಾನ ಬದ್ಧವಾಗಿ ಒದಗಿಸಿರುವ ಉನ್ನತ ದರ್ಜೆಯ ಹುದ್ದೆಗಳು ಇವರಿಗೆ ತಲುಪುತ್ತಿಲ್ಲ. ಯಾಕೆಂದರೆ ಆ ಮಟ್ಟದ ಶಿಕ್ಷಣ ಕೂಡ ಪಡೆದಿಲ್ಲ ಮತ್ತು ಇವರಿಗೆ ಮೀಸಲಿದ್ದ ಸ್ಥಾನದ ಬಗ್ಗೆ ಅರಿವಿಲ್ಲ. ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡದೆ ಇರುವ ಕುಟುಂಬಗಳೇ ಹೆಚ್ಚು. ಕಾರಣ ಇವರು ಹೆಣ್ಣು ಮಕ್ಕಳನ್ನು ಮನೆಯ ಕೆಲಸಕ್ಕಾಗಿ ಬಳಸಿಕೊಳ್ಳುವರು. ಕುಟುಂಬ ಯೋಜನೆಯನ್ನು ಅಳವಡಿಸಿಕೊಳ್ಳುವದು ಕಡಿಮೆ. ಇವರಲ್ಲಿ ಜನನ ಪ್ರಮಾಣ ಹೆಚ್ಚು ಇರುವುದರಿಂದ ಮಕ್ಕಳ ಲಾಲನೆ ಪಾಲನೆಯಗೋಸ್ಕರ ಚಿಕ್ಕ ಮಕ್ಕಳಿಗೆ ಶಾಲೆಗೆ ಕಳಿಸುವುದಿಲ್ಲ. ಕುಟುಂಬ ಯೋಜನೆಯ ತಿಳುವಳಿಕೆ ನೀಡಬೇಕಾಗಿದೆ.

ಹೆಚ್ಚಿನ ಮಕ್ಕಳಿದ್ದರೆ ಅವರ ಪೋಷಣೆಗೆ ತೊಂದರೆ ಆಗುತ್ತದೆ. ಆರೋಗ್ಯಕರ ವಾತಾವರಣವಿರಲು ಸಾಧ್ಯವಿಲ್ಲ. ಪೌಷ್ಟಿಕ ಆಹಾರ ಕೊಡಲು ಆಗುವುದಲ್ಲ. ಇವೆಲ್ಲ ಸಮಸ್ಯೆಗಳು ಹಳ್ಳಿಯ ಜನರಿಗೆ ತಿಳಿಸಬೇಕು. 'ಒಂದು ಮಗ ಅಲ್ಲ ಒಂದು ಕಣ್ಣಲ್ಲ' ಎಂಬ ಕಲ್ಪನೆ ಈಗಲೂ ಜನರಲ್ಲಿದೆ. ಅದನ್ನು ಹೋಗಲಾಡಿಸಲು ಸರಕಾರದವರು, ಸಂಘಟನೆಯವರು, ಕುಟುಂಬ ಯೋಜನೆ ಸಲಹಾ ಕೇಂದ್ರದವರು ಮೊದಲಾದವರು ಚಲನಚಿತ್ರಗಳ ಮೂಲಕ, ಭಿತ್ತ ಚಿತ್ರಗಳ ಮೂಲಕ, ಜನರಿಗೆ ಜನಸಂಖ್ಯಾ ಹೆಚ್ಚಳದಿಂದ ಆಗುವ ತೊಂದರೆಗಳನ್ನು ಮನವರಿಕೆ ಮಾಡಿಕೊಡಬೇಕು. ಇದರಿಂದ ಬರುವಂಥ ಸಮಸ್ಯೆಗಳು ಸ್ವಲ್ಪಮಟ್ಟಿಗಾದರು ಕಡಿಮೆಯಾಗುತ್ತವೆ.

ಎರಡು ಮೂರು ಸಾಕು; ಒಂದು ಬೇಕೇಂದಾಗಲಿ, ಹೆಣ್ಣಾಗಲಿ, ಗಂಡಾಗಲಿ ಎರಡು ಸಾಕೆಂದಾಗಲಿ ಅಂಥ ಮನೋಭಾವನೆ ಸಾಮಾನ್ಯವಾಗಿ ಎಲ್ಲ ಜನರಲ್ಲಿ ಬಂದಿರಬೇಕು. ಅಂದಾಗ ಮಾತ್ರ ಶೈಕ್ಷಣಿಕ, ಸಾಮಾಜಿಕ, ಆರ್ಥಿಕದಲ್ಲಿನ ಸಮಸ್ಯೆಗಳಿಗೆ ಪರಿಹಾರ ತಾನಾಗಿಯೇ ದೊರೆಯುವುದು.

ಟೋಕ್ರೆಕೋಳಿ ಸಮುದಾಯದವರಲ್ಲಿ ಅನಕ್ಷರತೆ ಹೆಚ್ಚಾಗಿರುವುದರಿಂದ ರಾಜಕೀಯ ಬಗ್ಗೆ ಹೆಚ್ಚು ಆಸಕ್ತಿ ತೋರಲಿಲ್ಲ. ಇವರು ಮತ ಹಾಕಿ ಜನರನ್ನು ಗೆಲ್ಲಿಸುವುದಾಗಲೀ ಅಥವಾ ತಾವೇ ಒಂದು ಕ್ಷೇತ್ರಕ್ಕೆ ನಿಂತು ಗೆಲ್ಲುವುದಾಗಲೀ ಹಿಂದೆ ಇರಲಿಲ್ಲ. ಆದರೆ ಇತ್ತೀಚಿಗೆ ಕೆಲವರು ಮಂಡಲ, ತಾಲೂಕು ಪಂಚಾಯಿತಿಗೆ ನಿಂತು ಆರಿಸಿ ಬಂದಿದ್ದಾರೆ. ಇನ್ನು ಮುಂದೆ ಹೆಚ್ಚಿನ ಮಟ್ಟದಲ್ಲಿ ರಾಜಕೀಯದಲ್ಲಿ ಭಾಗವಹಿಸುವಂತಹ ಪ್ರಜ್ಞೆ ಜನರಲ್ಲಿ ಮೂಡುವಂತೆ ಆಗಬೇಕು. ರಾಜಕೀಯ ಪ್ರಾತಿನಿಧ್ಯವಿಲ್ಲದೆ ಸಮುದಾಯದ ಏಳಿಗೆ ಸಾಧ್ಯವಿಲ್ಲ.

ಜಾತಿ ಪ್ರಮಾಣ ಪತ್ರ ಪಡೆಯುವುದು ಕಷ್ಟದಾಯಕವಾಗಿದೆ. ಇದು ಸರಳ ರೀತಿಯಲ್ಲಿ ಎಲ್ಲರಿಗೆ ದೊರೆಯುವಂತಾಗಬೇಕು. ಟೋಕ್ರೆ ಕೋಳಿಯಲ್ಲಿ ಎಲ್ಲರಿಗೆ ದೊರೆಯುವಂತಾಗಬೇಕು. ಟೋಕ್ರೆ ಕೋಳಿಯಲ್ಲಿ ಸಣ್ಣಗಾರ, ಅಂಬಿಗಾರ, ಮೀನುಗಾರ ಮೊದಲಾದ ವೃತ್ತಿ ಆಧಾರಿತ ೩೯ ಪರ್ಯಾಯ ಪದಗಳಿಗೂ ಸಹ ಟೋಕ್ರೆ ಕೋಳಿ ಜಾತಿ ಪ್ರಮಾಣ ಪತ್ರ ಸಿಗುವಂತಾಗಬೇಕು. ಇದರಿಂದ ಶಿಕ್ಷಣದಲ್ಲಿ ಹೆಚ್ಚಿನ ಜನರು ಶಿಕ್ಷಣ ಪಡೆಯಲು ಅನುಕೂಲವಾಗುವುದು. ಶಿಷ್ಯವೇತನ, ಶುಲ್ಕ ವಿನಾಯತಿ ಇತ್ಯಾದಿಗಳ ಅನುಕೂಲತೆಯಿಂದ ಶಿಕ್ಷಣ ಮುಂದುವರೆಸಲು ಸಾಧ್ಯವಾಗುತ್ತದೆ. ಜಾತಿ ಪ್ರಮಾಣ ಪತ್ರ ದೊರೆಯದೆ ಎಷ್ಟೋ ವಿದ್ಯಾರ್ಥಿಗಳು ಶಾಲೆಗೆ ಹೋಗಲಾರದೆ ಬಿಟ್ಟು ಬಿಡುವರು. ಇದರಿಂದ ಅನಕ್ಷರತೆಯ ಪ್ರಮಾಣ ಹೆಚ್ಚುತ್ತಲಿದೆ. ಇದನ್ನು ಹೋಗಲಾಡಿಸಲು ಸರಕಾರ ಮತ್ತು ಸಮಾಜ ಪ್ರಯತ್ನಿಸಬೇಕು.

ಬೀದರ ಜಿಲ್ಲೆಯಲ್ಲಿ ೩೯ ಪರ್ಯಾಯ ಪದಗಳನ್ನು ಒಳಗೊಂಡ ಟೋಕ್ರೆಕೋಳಿ ಸಮುದಾಯದವರು ಗಣನೀಯ ಪ್ರಮಾಣದಲ್ಲಿದ್ದಾರೆ. ಇವರು ಅನಕ್ಷರತೆ, ಅಸಂಘಟನೆಯ ಕಾರಣದಿಂದಾಗಿ ಮೀಸಲಾತಿಯ ಬಳಕೆ ಸರಿಯಾಗಿ ಬಳಸಿಕೊಳ್ಳುತ್ತಿಲ್ಲ. ಇತ್ತೀಚೆಗೆ ಕೆಲವರು ಪರಿಶಿಷ್ಟ ಪಂಗಡದ ಆಧಾರದ ಮೇಲೆ ರಾಜಕೀಯದಲ್ಲಿ ಸ್ಪರ್ಧಿಸಿ ಆರಿಸಿ ಬಂದಿದ್ದಾರೆ. ಇದೇ ರೀತಿ ಶಿಕ್ಷಣ ಮತ್ತು ಉದ್ಯೋಗದಲ್ಲಿ ಬಳಕೆಯಾದರೆ ಜನರಲ್ಲಿ ಅಭಿವೃದ್ಧಿ ಕಾಣಲು ಸಾಧ್ಯ. ಆದ್ದರಿಂದ ಮೀಸಲಾತಿಯ ಪ್ರಜ್ಞೆ ಸಮುದಾಯದ ಸಂಘಟನೆಗಳು ಜನರನ್ನು ತಿಳಿ ಹೇಳಬೇಕು. ಮೀಸಲಾತಿಯ ಬಳಕೆಯಲ್ಲಿ ಸರಿಯಾದ ಮಾರ್ಗದರ್ಶನ ನೀಡುವಂತಾಗಬೇಕು.

ಆಶ್ರಯ ಯೋಜನೆಯ ಅಡಿಯಲ್ಲಿ ಇವರಿಗೆ ಮನೆಗಳು, ಗಂಗಾ ಕಲ್ಯಾಣ ಯೋಜನೆಯಿಂದ ಕೊಳವೆ ಬಾವಿ, ಭೂಮಿ ಇಲ್ಲದವರಿಗೆ ಭೂಮಿ ಒದಗಿಸುವುದು, ಹಸಿರು ಕಾರ್ಡು ಕೊಡಿಸುವುದು, ಎತ್ತು ಬಂಡಿ ಕೊಳ್ಳಲು ಸಾಲ ನೀಡುವುದು ಮೊದಲಾದ ಕಾರ್ಯಗಳು ತಾಲೂಕು ಮತ್ತು ಮಂಡಲ ಪಂಚಾಯತಿಗೆ ಆರಿಸಿ ಬಂದ ಪ್ರತಿನಿಧಿಗಳು ವ್ಯವಸ್ಥಿತವಾಗಿ ನಿರ್ವಹಿಸುವವರಾಗಬೇಕು.

ಟೋಕ್ರೆಕೋಳಿ ಬುಡಕಟ್ಟಿನವರು ಅಭಿವೃದ್ಧಿ ಹೊಂದಬೇಕಾದರೆ ತಮ್ಮ ಮೂಲ ವೃತ್ತಿಗಳೊಂದಿಗೆ ಅನ್ಯವೃತ್ತಿಗಳನ್ನು ಅಳವಡಿಸಿಕೊಳ್ಳಬೇಕು. ಜೊತೆಗೆ ಅವರು ಸಾಂಸ್ಕೃತಿಕವಾಗಿ ಅಳವಡಿಸಿಕೊಂಡ ಸಂಪ್ರದಾಯ, ಆಚರಣೆ, ನಂಬಿಕೆ ಮೊದಲಾದವುಗಳಲ್ಲಿಯೂ ಧನಾತ್ಮಕ ಬದಲಾವಣೆಯ ಅಗತ್ಯವಿರುವುದು.

ವರ್ತಮಾನದಲ್ಲಿನ ಟೋಕ್ರೆಕೋಳಿ ಬುಡಕಟ್ಟಿನ ಬದುಕನ್ನು ರೂಪಿಸುವ ಸರಕಾರದ ಆರ್ಥಿಕ ನೀತಿಗಳು ಫಲಕಾರಿಯಾಗುತ್ತಿಲ್ಲ. ಸ್ವಯಂ ಉದ್ಯೋಗ ಹೊಂದಲು ಗ್ರಾಮೀಣದ ಯುವಕರಿಗೆ ತರಬೇತಿ ನೀಡಬೇಕು. ಆಯಾ ಸಮುದಾಯದ ಮಹಿಳೆಯರು ಸ್ವಯಂ ಸೇವಾ ಸಂಘಗಳನ್ನು ಸ್ಥಾಪಿಸಿಕೊಳ್ಳಬೇಕು. ಇದರಿಂದ ಸಣ್ಣ ಪುಟ್ಟ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಸಾಧ್ಯ. ಈ ಸಮುದಾಯದವರು ಸಾಮಾಜಿಕ, ಆರ್ಥಿಕ,

ಶೈಕ್ಷಣಿಕವಾಗಿ ತೀರಾ ಹಿಂದುಳಿದಿದ್ದು ಉನ್ನತ ವರ್ಗದವರ ಅವಹೇಳನಕ್ಕೆ ಗುರಿಯಾಗಿರುವರು. ಅದನ್ನು ಸಹಿಸದ ನವತರುಣರು ತಮಗಾದ ವಂಚನೆ ಅನ್ಯಾಯಾದ ವಿರುದ್ಧ ಸಂಘಟನೆಯ ಮೂಲಕ ಧ್ವನಿಯೆತ್ತುತ್ತಿರುವುದು ಕಂಡು ಬರುತ್ತಿದೆ. ತಮಗೆ ಸಿಗಬೇಕಾದ ಸ್ಥಾನ ಸಿಗದಂತ ಸಂದರ್ಭಗಳಲ್ಲಿ ಅವರು ಜಾಗ್ರತರಾಗಲೇಬೇಕು. ತಮಗಾದ ಅನ್ಯಾಯದ ವಿರುದ್ಧ ಹೋರಾಟ ಮಾಡಲೇಬೇಕು.

ಆಧುನಿಕ ಪ್ರಪಂಚದಿಂದ ದೂರವಿದ್ದು ತಮ್ಮದೇ ಆದ ಜೀವನಕ್ರಮ ಅನುಸರಿಸಿಕೊಂಡು ವಿಶಿಷ್ಟ ರೀತಿಯ ಸಂಸ್ಕೃತಿಯನ್ನು ಉಳಿಸಿಕೊಂಡು ಬದುಕುತ್ತಿದ್ದ ಸಮುದಾಯವು ಬದಲಾವಣೆ ಹೊಂದುತ್ತಿದೆ. ಸಾವಿರಾರು ವರ್ಷಗಳಿಂದ ಅಳವಡಿಸಿಕೊಂಡು ಬಂದಂಥ ಸಂಸ್ಕೃತಿಯ ವಿಚಾರಗಳು ಸಡಿಲಗೊಳ್ಳುತ್ತಿವೆ. ಅವರ ಆಚಾರ, ವಿಚಾರ, ನಡೆ ನುಡಿ, ಸಂಪ್ರದಾಯ ಸಂಸ್ಕೃತಿಗಳಲ್ಲಿ ಅನೇಕ ಬದಲಾವಣೆಗಳನ್ನು ಕಂಡು ಬರುತ್ತದೆ. ಈ ರೀತಿಯಲ್ಲಿ ಬದಲಾವಣೆಯಾಗುವುದರಲ್ಲಿ ತಪ್ಪೇನಿಲ್ಲ.

**ಟೋಕ್ರೆಕೋಳಿ ಬುಡುಕಟ್ಟಿನ ಅಭಿವೃದ್ಧಿಪರ ಸಲಹಗೆಳು**

೧. ಟೋಕ್ರೆ ಕೋಳಿಯವರ ಸಂಸ್ಕೃತಿಯ ಪ್ರಚಾರ ಮತ್ತು ಪ್ರಸಾರದ ಉದ್ದೇಶದಿಂದ ಮಹಾಪುರುಷರ, ಸಾಮ್ರಾಟರ, ವೀರರ, ವೀರಮಹಿಳೆಯರ ಜಯಂತಿ ಮತ್ತು ಸ್ಮೃತಿ ದಿನಗಳ ಆಚರಣೆ ನಡೆಯುವಂತಾಗಬೇಕು.

೨. ಸಮಯ ಸಮಯಕ್ಕೆ ಅಧಿವೇಶನ, ಸಮ್ಮೇಳನಗಳನ್ನು ಆಯೋಜಿಸಿ ಸಮಸ್ಯೆಗಳನ್ನು ಚರ್ಚಿಸುವಂತಾಗಬೇಕು.

೩. ಗ್ರಾಮ, ಹೋಬಳಿ, ತಾಲೂಕು, ಜಿಲ್ಲಾ, ರಾಜ್ಯ, ದೇಶದಾದ್ಯಂತ ಸಂಘಟನೆಗಳು ನಿರ್ಮಾಣಗೊಳಿಸಿ ಸಾವಿರಾರು ವರ್ಷಗಳಿಂದ ಉಳಿಸಿಕೊಂಡು ಬಂದ ಸಂಸ್ಕೃತಿಯನ್ನು ರಕ್ಷಿಸಲು ಪ್ರಯತ್ನಿಸಬೇಕು.

೪. ಟೋಕ್ರೆ ಕೋಳಿಯವರ ಸಂಸ್ಕೃತಿಯಲ್ಲಿನ ಋಣಾತ್ಮಕ ರೂಢಿ ಸಂಪ್ರದಾಯಗಳ ತ್ಯಾಗ ಹಾಗೂ ಧನಾತ್ಮಕ ಸಂಸ್ಕೃತಿಯ ರಕ್ಷಣೆ ಆಗಬೇಕು.

೫. ಬಡತನ ಅಜ್ಞಾನ, ಅನಕ್ಷರತೆಗಳತ್ತ ಮೊದಲು ಲಕ್ಷ ವಹಿಸಬೇಕು

೬. ಸಮಾಜದ ಅಂಗವಿಕಲರನ್ನು, ಅನಾಥರನ್ನು ಮತ್ತು ಅಸಾಯಕ ಕುಟುಂಬದರಿಗೆ ಸಹಾಯ ದೊರೆಯುವಂತಾಗಬೇಕು.

೭. ವಿದ್ಯಾರ್ಹತೆಯನ್ನು ಪಡೆದ ಈ ಬುಡಕಟ್ಟಿನ ವಿದ್ಯಾರ್ಥಿಗಳಿಗೆ ಸ್ವಯಂ ಉದ್ಯೋಗದ ತರಬೇತಿ ದೊರೆಯುವಂತಾಗಬೇಕು.

೮. ಟೋಕ್ರೆಕೋಳಿ ಬುಡಕಟ್ಟಿನ ರೈತರಿಗೆ ಒಳ್ಳೆ ತಳಿಯ ಬೀಜ, ಆಧುನಿಕ ಕೃಷಿ ಸಲಕರಣೆಗಳು, ಗೊಬ್ಬರ ಮೊದಲಾದವುಗಳನ್ನು ಉಚಿತ ರೀತಿಯಲ್ಲಿ ದೊರೆಯುವಂತಾಗಬೇಕು.

೯. ಧರ್ಮ ಕ್ಷೇತ್ರಗಳ ಸ್ಥಾಪನೆ, ಗ್ರಂಥಾಲಯ, ವಾಚನಾಲಯ, ಶಾಲೆ, ವಸತಿಗೃಹ ಇತ್ಯಾದಿಗಳನ್ನು ಆರಂಭಿಸುವುದು.

೧೦. ಆರೋಗ್ಯ ಪೂರ್ಣ ಸಮಾಜದ ನಿರ್ಮಾಣವಾಗಬೇಕು.

೧೧. ಕಬ್ಬಲಿಗ, ಅಂಬಿಗ, ಮೀನುಗಾರ, ಸುಣಗಾರ, ತಳವಾರ ಮೊದಲಾದ ೩೯ ಪರ್ಯಾಯ ಪದಗಳೆಲ್ಲ

ಟೋಕ್ರೆಕೋಳಿ ಬುಡಕಟ್ಟಿನ ಪರ್ಯಾಯ ಪದಗಳಾಗಿರುವುದರಿಂದ ಟೋಕ್ರೆಕೋಳಿ (ಪರಿಶಿಷ್ಟ ಪಂಗಡ) ಬುಡಕಟ್ಟಿಗೆ ದೊರೆಯುವ ಎಲ್ಲ ಸಂವಿಧಾನಿಕ ಸೌಲಭ್ಯಗಳನ್ನು ವಿಸ್ತರಿಸಬೇಕು.

೧೨. ಟೋಕ್ರೆಕೋಳಿ ಬುಡಕಟ್ಟಿನವರು ಕೃಷಿಯ ಕಡೆಗೆ ಹೆಚ್ಚು ವಾಲುತ್ತಿರುವುದರಿಂದ ಕೃಷಿ ಸಹಾಯಕ ವಸ್ತುಗಳಿಗೆ ಮತ್ತು ಪಶುಸಂಗೋಪನೆಗೆ ಪ್ರೋತ್ಸಾಹ ನೀಡಬೇಕು.

೧೩. ಟೋಕ್ರೆಕೋಳಿಯವರ ಮೂಲ ವೃತ್ತಿ ಟೋಕ್ರೆ ನಡೆಸುವುದು ಮತ್ತು ಮೀನುಗಾರಿಕೆಯಾಗಿತ್ತು. ಆದರೆ ಈಗ ಟೋಕ್ರೆ ವೃತ್ತಿ ಸೇತುವೆಗಳ ನಿರ್ಮಾಣದಿಂದ ಇಲ್ಲದಂತಾದರೂ, ಮೀನುಗಾರಿಕೆಗಾದರೂ ಯೋಗ್ಯ ರೀತಿಯ ಆಸ್ಪದ ಕಲ್ಪಿಸಬೇಕು.

೧೪. ಇವರಲ್ಲಿ ಶೇಕಡ ೮೦ರಷ್ಟು ಕುಟುಂಬಗಳು ಭೂರಹಿತವಾಗಿರುವುದರಿಂದ ಈ ಕುಟುಂಬಗಳಿಗೆ ಹಸಿರು ಪಡಿತರ ಚೀಟಿಯ ಸೌಲಭ್ಯ ಒದಗುವಂತಾಗಬೇಕು.

೧೫. ತಮ್ಮ ಸಂಸ್ಕೃತಿ, ಹಬ್ಬ ಹರಿದಿನಗಳು ಬೇರೆಯವರಿಗೆ ಕೀಳಾಗಿ ಕಂಡರೂ ತಾವು ಅದಕ್ಕೆ ಕೀಳೆಂದು ತಿಳಿದುಕೊಳ್ಳದೇ ಅಭಿಮಾನ ಪಡಬೇಕು.

೧೬. ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಆಸ್ಪದ ನೀಡಬೇಕು.

೧೭. ಧೂಮಪಾನ, ಕುಡಿತ, ಜೂಜು ಮೊದಲಾದ ದುರ್ವ್ಯಸನಗಳಿಂದ ದೂರ ಉಳಿಯುವಂತಾಗಬೇಕು.

೧೮. ಚಿಕ್ಕ ಸಂಸಾರ ಸುಖದ ಆಧಾರ ಎಂಬುದರ ಅರಿವುಂಟಾಗಬೇಕು.

ಪ್ರಸ್ತುತ ಅಧ್ಯಯನದ ಮೂಲಕ ಬೀದರ ಜಿಲ್ಲೆಯ ಟೋಕ್ರೆಕೋಳಿ ಬುಡಕಟ್ಟಿನ ಸಮಗ್ರ ಸಂಸ್ಕೃತಿಯನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಆದ್ಯಾಗೂ ನನ್ನ ಗಮನಕ್ಕೆ ಬರದಿರುವ ವಿಷಯಗಳು ಉಳಿದಿದ್ದಾದರೆ ಅವುಗಳನ್ನು ಮುಂದಿನ ಅಧ್ಯಯನಕಾರರ ಗಮನಕ್ಕೆ ಬಿಡಲಾಗಿದೆ. ಈ ಅಧ್ಯಯನವು ಸಮುದಾಯಕ್ಕೆ, ಸರಕಾರಕ್ಕೆ, ಅಧಿಕಾರಿಗಳಿಗೆ, ಅಧ್ಯಯನಕಾರರಿಗೆ ಮತ್ತು ಸಂಶೋಧಕರಿಗೆ ಸಹಕಾರಿಯಾಗುವುದೆಂದು ನಂಬಿರುವೆ.

